ತ. ರಾ. ಸು. ರವರ "ರಜತೋತ್ಸವ" ಕಾದಂಬರಿ.

# ಸಿಡಿಲ ಮೊಗ್ಗು

**ತ. ರಾ. ಸು.**




ಪ್ರಕಾಶಕರು:

ನವ್ಯ ಸಾಹಿತ್ಯ ಪ್ರಕಾಶನ

ಮೈಸೂರು



ಜನನ ಕಾರಣರಾಗಿ ಪಿತೃದೇವತೆಯೂ

ಗಾಯತ್ರೀ ಉಪದೇಶ ಕಾರಣದಿಂದ ಪ್ರಥಮ ಗುರುವೂ

ಆಗಿ

ಅಕ್ಕರೆಯಲ್ಲಿ ತಾಯಿ-ತಂದೆ ಎರಡೂ ಆಗಿ ಸಾಕಿ ಬೆಳಸಿದ

ನನ್ನ ತಂದೆ

ಪೂಜ್ಯ ತ. ಸು. ರಾಮಸ್ವಾಮಯ್ಯನವರ

ಪರಮ ಪವಿತ್ರ ಚರಣಾರವಿಂದಗಳಲ್ಲಿ

ಅರ್ಪಿತವಾಗಿದೆ.

ಕನ್ನಡ ಜನತೆಗೆ........

ಇಂದು ಕನ್ನಡ ಮಾತನಾಡುವ ಜನ ಯಾವುದನ್ನು ಕನ್ನಡ ನಾಡೆಂದು ನಿರ್ಧರಿಸಿ ಮೈಸೂರೆಂಬ ಹೆಸರಿನಲ್ಲಿ ಒಂದೇ ಅಖಂಡ ರಾಜ್ಯವಾಗಿ ನಿರ್ಮಿಸಿದ್ದಾರೋ, ಆ ರಾಜ್ಯವನ್ನು ಈಗ್ಗೆ ಸಮಾರು ಎಂಟು ನೂರು ವರ್ಷಗಳ ಹಿಂದೆಯೇ ಕಟ್ಟಿ ಆಳಿ, ಕಲೆಯ ತೌರೂರಾಗಿ ಮಾಡಿದ ವಿಷ್ಣುವರ್ಧನನನ್ನು ಕುರಿತ ಈ ಕಾದಂಬರಿ, ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳನ್ನು ಬರೆಯುವುದರಲ್ಲಿ ಮೇಲ್ಕೈಯಾದ ಗೆಳೆಯ ತ. ರಾ. ಸು. ರವರ 'ರಜತೋತ್ಸವ' ಕಾದಂಬರಿಯಾಗಿ ನಮ್ಮ ಪ್ರಕಾಶನದಿಂದ ಹೊರಬರುತ್ತಿರುವ ವಿಷಯ ನಮಗೆ ಹೆಮ್ಮೆಯನ್ನುಂಟುಮಾಡುವಂಥದ್ದಾಗಿದೆ.

ಆ ಕೃತಿಯನ್ನು ಬರೆಯುತ್ತಿರುವ ಲೇಖಣಿ ಮೊದಲೇ ತ.ರಾ.ಸು.ರವರದು. ಕನ್ನಡ ಜನತೆಗೆ ತ. ರಾ. ಸು. ರವರ ಕೃತಿಗಳ ಹಿರಿಮೆ ತಿಳಿದೇ ಇದೆ. ಈ ಕೃತಿ ಮತ್ತು ಈ ಕೃತಿಯ ಮೈಕಟ್ಟು (Get up) ಬಂದಿರುವ ರೀತಿ ಇಂದಿನವರೆಗೂ ಕನ್ನಡ ಭಾಷೆಯಲ್ಲಿ ಬಂದಿಲ್ಲದಂಥ ಒಂದು ರಮ್ಯ ಕಲಾಸೃಷ್ಟಿ ಎಂದರೆ ತಪ್ಪಾಗಲಾರದು. ಇಂತಹ ಒಂದು ಹಿರಿಯು ಕೃತಿಯನ್ನು ಪ್ರಕಟಿಸಲು ಯಾವ ಪ್ರಕಾಶಕರಿಗೆ ತಾನೇ ಹೆಮ್ಮೆಯು ವಿಷಯವಾಗಿರಲಾರದು, ಯಾವ ಮಾರಾಟಗಾರರಿಗೆ ಹಿರಿಮೆಯ ವಿಷಯವಾಗಿರಲಾರದು.

ಇದು ಶ್ರೀ ತ. ರಾ. ಸು. ರವರು ರಚಿಸು, ನಮ್ಮ ಪ್ರಕಾಶನದಿಂದ ಹೊರಬರಲಿರುವ ೭೦೦-೮೦೦ ಪುಟಗಳ ಬೃಹತ್-ಕಾದಂಬರಿಯ ಮೊದಲನೆಯ ಭಾಗ. ಆದಷ್ಟು ಬೇಗ ಬೃಹತ್ ಕಾದಂಬರಿಯ ಪ್ರತಿ ಕೂಡ ನಿಮ್ಮ ಕೈಸೇರಲಿದೆ.

ಈ ಕೃತಿಯ ಪ್ರಕಾಶನದ ಬಗ್ಗೆ ಸಹಾಯಕರಾದ ಅನೇಕ ಮಿತ್ರರುಗಳಿಗೆ ನಮ್ಮ ನೆನೆಕೆಗಳು.

ಹಾಗೇ ಈ ಕೃತಿ ಸಮ್ಮ ಪ್ರಕಾಶನದಲ್ಲಿ ಪ್ರಕಟವಾಗಲು ನೆರವಾದ ಗೆಳೆಯ ಸುಬ್ಬರಾಯರಿಗೆ ನಮ್ಮ ವಂದನೆಗಳನ್ನರ್ಪಿಸಲು ಸಾಧ್ಯವೆ?

—ಪ್ರಕಾಶಕರು.

# ಮುನ್ನುಡಿ

'ಸಿಡಿಲಮೊಗ್ಗು' ನನ್ನ ಇಪ್ಪತ್ತೈದನೆಯ ಕಾದಂಬರಿ.

೧೯೪೪ರಲ್ಲಿ 'ಮನೆಗೆ ಬಂದ ಮಹಾಲಕ್ಷ್ಮಿ' ಎಂಬ ಕಿರು ಕಾದಂಬರಿಯೊಂದಿಗೆ ಆರಂಭವಾದ ನನ್ನ ಸಾಹಿತ್ಯಯಾತ್ರೆಯಲ್ಲಿ ಈ ಕಾದಂಬರಿ ಒಂದು ಮುಖ್ಯ ಮಜಲು ಎಂದು ನನ್ನ ಭಾವನೆ.

ನನ್ನ ಮಿತ್ರರೇನೋ ಹಾಗೆಂದು ನನ್ನನ್ನು ಅಭಿನಂದಿಸುತ್ತಿದ್ದಾರೆ. ಆದರೆ ನನ್ನ ವಯಸ್ಸು, ಲೋಕಾನುಭವ, ಸಾಹಿತ್ಯಾನುಭವಗಳ ಪರಿಮಿತಿಯನ್ನು ನೆನೆದಾಗ, ನನ್ನ ಓಟವೇ ಬಹುವೇಗವಾಯಿತೇನೋ ಎಂಬ ಸಂಶಯ ನನ್ನನ್ನು ಬಾಧಿಸುತ್ತಿದೆ.

ಆದರೆ ಇಷ್ಟನ್ನು ಮಾತ್ರ ನಾನು ಬಲ್ಲೆ—ಕಿರಿಯವನಾದ ನನ್ನ ಕೃತಿಗಳಲ್ಲಿ ಕನ್ನಡ ಜನ ಬಹು ಅಭಿಮಾನವನ್ನು ತೋರಿದೆ. ಸಹಜ ಸಜ್ಜನರೂ, ಸರಸಿಗಳೂ ಆದ ಕನ್ನಡಿಗರು ನನ್ನಲ್ಲಿ ತೋರಿದ ಅಭಿಮಾನ, ಆದರ—ನನ್ನಿಂದ ಈಗಾಗಿರುವಷ್ಟು ಕೆಲಸವನ್ನು ಮಾಡಿಸಿದೆ. ಮತ್ತಷ್ಟು ಕೆಲಸಮಾಡಬೇಕು ಎಂಬ ಉತ್ಸಾಹವನ್ನು ಉಳಿಸಿದೆ.

ತಮ್ಮ ಅಭಿಮಾನದಿಂದ ನನ್ನ ಸಾಹಿತ್ಯಜೀವನವನ್ನು ರೂಪಿಸಿದ ಕನ್ನಡದ ಮಹಾ ಜನತೆಗೆ ನನ್ನ ಕೃತಜ್ಞತೆಯ ಕಿರುಕಾಣಿಕೆಯೆಂದು, ಕನ್ನಡದ ಕಲೆ, ಸಂಸ್ಕೃತಿಗಳಿಗೆಂದು ತನ್ನ ಬಾಳನ್ನು ಸವೆಸಿದ, ರಾಷ್ಟ್ರಶಿಲ್ಪಿ ಹೊಯ್ಸಳ ವಿಷ್ಣುವರ್ಧನ ಚಕ್ರವರ್ತಿಯ ಜೀವನದ ಒಂದು ಘಟ್ಟವನ್ನಿಂದು ಕಾದಂಬರಿಯಾಗಿ ಹೆಣೆದು ಒಪ್ಪಿಸಿದ್ದೇನೆ.

ಜನತೆ ತನ್ನ ಎಂದಿನ ಅಭಿಮಾನದಿಂದಲೇ ಇದನ್ನು ಎತ್ತಿಕೊಂಡು ಆದರಿಸುವುದೆಂದು ನಂಬಿದೇನೆ.

ಜನತೆಗೆ ನನ್ನ ಕೃತಜ್ಞತೆಯನ್ನು ಒಪ್ಪಿಸುವ ಈ ಸಮಯದಲ್ಲಿ, ನನ್ನ ಬರೆಯುವ ಹುಚ್ಚಿಗೆ ಒಂದು ಗೊತ್ತಾದ ರೂಪವಿತ್ತು, ಬರೆಯುವ ಕೈಗೆ ಕ್ರಮವನ್ನು ಕಲಿಸಿದ ಹಿರಿಯರಾದ ಶ್ರೀ ಸಿದ್ದವನ ಹಳ್ಳಿ ಕೃಷ್ಣಶರ್ಮರು, ಅವರಿಗಿಂತಲೂ ಹೆಚ್ಚಾಗಿ, ನನ್ನ ಸಾಹಿತ್ಯ ಮತ್ತು ಜೀವನದ ಹೋರಾಟಗಳೆಲ್ಲವೂ ತಮ್ಮದೆ ಎಂದುಕೊಂಡು, ನನ್ನ ಸಾಹಿತ್ಯ, ಜೀವನ ಎರಡನ್ನೂ ತಮ್ಮ ನಿರ್ಮಲ ಸ್ನೇಹ ಸೌರಭದಿಂದ ಪರಿಮಳಮಯವಾಗಿಸಿದ ಹಿರಿಯಣ್ಣ ಅ. ನ. ಕೃಷ್ಣರಾಯರನ್ನು ನಾನು ಕೃತಜ್ಞತಾಪೂರ್ವಕವಾಗಿ ಸ್ಮರಿಸಲೇಬೇಕು. ಅ. ನ. ಕೃ, ಉಳಿದ ಎಷ್ಟೋ ಜನ ಕಿರಿಯ ಸಾಹಿತಿಗಳಂತೆಯೇ ನನಗೂ ಆರಂಭದಲ್ಲಿ ಸ್ಫೂರ್ತಿ, ಬೆಳೆಯುವಾಗ ಬೆಂಬಲರಾಗಿದ್ದಾರೆ. ಬರೀ ನೆನಕೆಯಿಂದ ತೀರುವುದಲ್ಲ ಆ ಸ್ನೇಹ ಋಣ.

ಅಷ್ಟೆ ಮಟ್ಟಿಗೆ ಗೆ, 'ಚದುರಂಗ' ಗೆ. ಗೋಪಾಲಕೃಷ್ಣ ಅಡಿಗರಿಗೂ ನಾನು ಸ್ನೇಹ ಋಣಿ.

ಈ ಸ್ನೇಹಗಳ ಪೋಷಕಜಲವಿಲ್ಲದಿದ್ದಲ್ಲಿ ನನ್ನ ಬಾಳು ಖಂಡಿತ ಬತ್ತಿದ ತೊರೆಯಂತಾಗುತ್ತಿತ್ತು,

ಅವರಿಗೂ ಈ ಕಿರುಗಾಣಿಕೆ ತೃಪ್ತಿಯನ್ನು ನೀಡಲಿ ಎಂದು ಬಯಸುತ್ತೇನೆ.

ಕೇವಲ ಸಾಮಾಜಿಕ ಕಾದಂಬರಿಗಳ ರಚನೆಯಲ್ಲೇ ಮಗ್ನವಾಗಿದ್ದ ನನ್ನ ಬುದ್ಧಿಗೆ ಐತಿಹಾಸಿಕ ಕಾದಂಬರಿಗಳನ್ನು ಬರೆಯಲು ಪ್ರಚೋದನೆಯಾಗಿ, ಬರೆಯುವ ಬಗೆ, ವಸ್ತು ಸಂಗ್ರಹಣದ ರೀತಿಯನ್ನು ಉಪದೇಶಿಸಿದ, ಗುರುವರ್ಯ ಡಾ| ಎಸ್ ಶ್ರೀಕಂಠಶಾಸ್ತ್ರಿ

ಎಂ. ಎ., ಡಿಲಿಟ್‌ರವರ ಗುರುಋಣವನ್ನು ನಾನು ಮರೆಯಲಾರೆ. ದೇವಋಣದಂತೆಯೇ ಈ ಗುರುಋಣವೂ ನಾನು ತೀರಿಸಲಾರದ ಸಾಲ.

ನಾನು ಸ್ಲೇಟು ಬಳಪವನ್ನು ಬಿಟ್ಟು, ಎರಡಾಣೆಯ 'ಜಾಪ್' ಪೆನ್ನಿನಲ್ಲಿ ಬರೆಯಲಾರಂಭಿಸಿದಂದಿನಿಂದಲೂ 'ಬರೆ, ನೀನು ಬರೆಯ ಬಲ್ಲೆ' ಎಂದು ಬೆನ್ನುತಟ್ಟಿದ, ವಿಶ್ವಾಸದ ಜೀವಂತಮೂರ್ತಿ ಶ್ರೀ ಹುಲ್ಲೂರು ಶ್ರೀನಿವಾಸ ಜೋಯ್ಸರು—ಇಂದು ಎಲ್ಲರ ಹರಕೆಯನ್ನು ನಾನು ಹಾರೈಸುತ್ತಿರುವಂದು-ನನ್ನನ್ನು ಹರಸಲು ಇಲ್ಲ. ಅವರ ಮಧುರ ನೆನಪಿಗೇ ನನ್ನ ಅನಂತ ವಂದನೆಗಳು.

ಈಗ, ಉಪಕಾರ ಮಾಡಿದವರೆಲ್ಲರ ಹೆಸರುಗಳನ್ನು ನೆನಪಿಸಿಕೊಳ್ಳುವಾಗ ನನಗನಿಸುತ್ತಿದೆ. ಎಷ್ಟು ಜನರ ಸ್ನೇಹ, ಔದಾರ್ಯ, ರಸಿಕತೆಗಳಿಂದ ರೂಪಿತವಾದ ಶಿಲ್ಪ, ಈ ನಾನು, ನನ್ನದು ಎಂದು ಕೊಳ್ಳುವ ಸಾಹಿತ್ಯಸೇವೆ.

ಹೆಸರು ಹೇಳಿದ ಹಲವರು, ಹೇಳದ ನೂರಾರು ಜನ, ಎಲ್ಲರಿಗೂ-ಇದೊ ನನ್ನ ಕೃತಜ್ಞ ಪೂರ್ವಕವಾದ ವಂದನೆಗಳು.

* * * * * * *

ಇನ್ನು ಈ ಕಾದಂಬರಿಯ ಬಗ್ಗೆ.

ಈ ಕಾದಂಬರಿಗೆ ವಸ್ತು ಆ ಕಾಲದ ಶಾಸನ ಸಾಹಿತ್ಯ. ಶಾಸನಗಳಲ್ಲಿ ಎಳೆಎಳೆಯಾಗಿ ಕಂಡು ಬರುವುದಕ್ಕೆ ಒಂದು ಸುಸ್ಪಷ್ಟ ರೂಪವನ್ನು ಕೊಡಲು ಮಾತ್ರ ನಾನು ಪ್ರಯತ್ನಪಟ್ಟಿದೇನೆ. ನನ್ನ ಕಲ್ಪನೆ ಉಚ್ಛೃಂಕಲ ವೃತ್ತಿಯನ್ನು ಅನುಸರಿಸಲು ಆದಷ್ಟುಮಟ್ಟಿಗೂ ಎಡೆಕೊಟ್ಟಿಲ್ಲ.

'ಹೊಯ್ಸಳೇಶ್ವರ' ಎಂಬ ಬೃಹತ್- ಕಾದಂಬರಿಯ ಪ್ರಥಮ ಖಂಡವಾದ 'ಸಿಡಿಲಮೊಗ್ಗು' ಬರೆಯುವಾಗ ನನಗೆ ಆತ್ಮತೃಪ್ತಿ ನೀಡಿದೆ. ಅದು ಪಡೆಯಬೇಕಾದ ಫಲ ಲೋಕತೃಪ್ತಿ. ಅದು ಸಿದ್ಧಿಯಾಗಬಹುದೆಂಬ ನಂಬಿಕೆಯೇ ನನ್ನ ಲೇಖಣಿಯನ್ನು ನಡೆಸುತ್ತಿರುವ ಬಲ.

ಯಾರ ಪವಿತ್ರ ಹೆಸರು ಇಂದು ಕನ್ನಡದಲ್ಲಿ ದಿಗಂತ ವಿಶ್ರಾಂತವೋ, ನಿತ್ಯ ಕೀರ್ತಿತವೋ ಆ ನನ್ನ ದೊಡ್ಡಪ್ಪನವರಾದ ದಿವಂಗತ. ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ನನ್ನ ಬಾಳಿನ ಮೊದಲ ಸ್ಫೂರ್ತಿ. ಅವರ ನೆನಪಿನ ಶ್ರೀ ಚರಣಕ್ಕೆ ನನ್ನ ಅನಂತಾನಂತ ವಂದನೆಗಳು.

ಈ ಕಾದಂಬರಿಯನ್ನು ರಚಿಸುವಾಗ ಮೈಸೂರಿನ ಪ್ರಾಚ್ಯವಸ್ತು ಸಂಶೋಧನ ಶಾಖೆಯ ಎಂ. ಹನುಮಂತರಾಯರು, ಫೋಟಾಗ್ರಾಫರ್ ಆರ್. ರಾಮರಾಜಪ್ಪನವರು, ಕಲಾವಿದ ಸಿ. ಕುಪ್ಪಾಚಾರ್ಯರು, ನಾಗೇಶಮೂರ್ತಿಗಳು, ಬೇಲೂರಿನ ಆತ್ಮೀಯ ಮಿತ್ರ ಎಸ್. ಜೋಶಿಗಳವರು, ಕೊಂಡಿ ಕೇಶವಾಚಾರ್ಯರು, ನಾಗಪ್ಪಾಚಾರ್ಯರು ಕಲಾವಿದ ವರ್ಗೀಸ್‌ರವರು ಬಹುವಿಧದಲ್ಲಿ ನನಗೆ ನೆರವಾಗಿದಾರೆ.

ಈ ಕಾದಂಬರಿಯ ಬಗ್ಗೆ ವಸ್ತು ಸಂಗ್ರಹ ಮಾಡಿದ್ದರೂ ಬರೆಯದೆ ಇದ್ದ ನನ್ನನ್ನು ಬರೆಯುವಂತೆ ಪ್ರೋತ್ಸಾಹಿಸಿ, ಆರಂಭಿಸುವವರೆಗೂ ಬಿಡದೆ, ಬರೆಯಿಸಿದ ಮಾನ್ಯ ಮಿತ್ರರಾದ ದೇ. ಜವರೇಗೌಡರಿಗೂ, ಬೆಂಗಳೂರಿನ ಗೆ. ಜಿ. ಕಲ್ಲಯ್ಯನವರಿಗೂ ನನ್ನ ನೆನಕೆಗಳು.

ಇಷ್ಟಿದ್ದೂ ಇದು ನನಗೆ ಬೇಕಾದ ಹಾಗೇ ಅಚ್ಚಾಗಬೇಕೆಂಬ ಹಟ ಹಿಡಿದಾಗ ಗಟ್ಟಿಮಾಡಿಕೊಂಡು 'ತೇಲಿದರೆ ಜೊತೆಗೇ ತೇಲೋಣ, ಮುಳುಗಿದರೂ ಅಷ್ಟೆ' ಎಂಬ

ವಿಶ್ವಾಸಿದಿಂದ, ಪ್ರಕಾಶಕರಾಗಿ ಜೊತೆಗೆ ನಿಂತ ಗೆ. ವಿ. ಆರ್. ಸೀತಾರಾಂ ರವರಿಗೆ ನಾನು ಬಹುಋಣಿ.

ಹಾಗೇ ಅಚ್ಚಿನ ವಿಷಯದಲ್ಲಿ ಸಹನೆಯಿಂದ ಸಹಕರಿಸಿದ ಶ್ರೀ ಸೀತಾರಾಘವ ಮುದ್ರಣಾಲಯದ ಕೆಲಸಗಾರ ಮಿತ್ರರಿಗೂ ನನ್ನ ವಂದನೆಗಳು.

'ಗಿರಿಕನ್ಯಕಾ'—ಯಾದವಗಿರಿ, ತ.ರಾ.ಸು.

ಮೈಸೂರು.

# “ಸಿಡಿಲ ಮೊಗ್ಗು”

ಶ್ರೀ ಮತ್ತ್ರೈಲೋಕ್ಯ ಪೂಜಾಯ ಸರ್ವ್ವ ಕರ್ಮ್ಮ ಸುಸಾಕ್ಷಿಣೇ |

ಫಲದಾಯ ನಮೋ ನಿತ್ಯಂ ಕೇಶವಾಯ ಶಿವಾಯಚ ||

ಸ್ವಸ್ತಿ ಶ್ರೀ ಜನ್ಮಗೇಯಹಂ ನಿಭೃತ ನಿರುಪಮೌರ್ವ್ವಾನಳೋದ್ದಾಮ ತೇಜಂ ವಿಸ್ತಾರಾಂತಃಕೃತೋರ್ವೀತಳಮಮಳ ಯಶಶ್ಚಂದ್ರ ಸಂಭೂತಿಧಾಮಂ |

ವಸ್ತುಭ್ರಾತೋದ್ಭವ ಸ್ಥಾನಕಮತಿಶಯ ಸತ್ವಾವಳಂಬಂ ಗಂಭೀರಂ

ಪ್ರಸ್ತುತ್ಯಂ ನಿತ್ಯಮಂಭೋನಿಧಿನಿಭಮೆಸಗುಂ ಹೊಯ್ಸಳೋರ್ವ್ವೀಶ ವಂಶಂ||

ಶ್ರೀ ಕಾಂತಾನೇತ್ರ ನಿಲೋತ್ಪಲವದನ ಸರೋಜಾತ ಸಸ್ಮೇರ ಲೀಲಾ

ಲೋಕಂ ಲೋಕತ್ರಯೋರ್ಝುಂಭಿತ ವಿಶದ ಯಶಶ್ಚಂದ್ರಿ ಕಾದೋಃ ಪ್ರತಾಪ |

ವ್ಯಾಕೀರ್ನ್ನ ತ್ಯಕ್ತ ಯುಕ್ತ ಕ್ರಮ ಕಳಿತ ಕುಭೃಚ್ಚಕ್ರ ಖೇದಪ್ರಮೋದ

ಶ್ರೀಕಂ ಶ್ರೀ ವಿಷ್ಣುಭೂವಂ ಬೆಳಗುಗೆ ಜಗಮಂ ರಾಜ ಮಾರ್ತಾನ್ಡರೂಪಂ ||

## ತ. ರಾ. ಸು. ರವರ ಕಾದಂಬರಿಗಳು

ಮನೆಗೆ ಬಂದ ಮಹಾಲಕ್ಷ್ಮಿ

ರಕ್ತ ತರ್ಪಣ

ಜೀತದ ಜೀವ

ಮುಂಜಾವಿನಿಂದ ಮುಂಜಾವು

ಪಾರಿಜಾತ

ಬೇಡದ ಮಗು

ಪುರುಷಾವತಾರ

ಬೆಂಕಿಯ ಬಲೆ

ಬಿಡುಗಡೆಯ ಬೇಡಿ

ಮಸಣದ ಹೂವು

ನೃಪತುಂಗ

ಹಂಸಗೀತೆ

ಕಂಬನಿಯ ಕುಯಿಲು

ರಕ್ತ ರಾತ್ರಿ

ತಿರುಗುಬಾಣ

ಹೊಸ ಹಗಲು

ಕೇದಿಗೆವನ

ಚಂದವಳ್ಳಿಯ ತೋಟ

ಚಂದನದ ಗೊಂಬೆ

ಮೊದಲು ನೋಟ

ಸಾಕುಮಗಳು

ಚಕ್ರತೀರ್ಥ

ನಾಗರಹಾವು

ಎರಡು ಹೆಣ್ಣು-ಒಂದು ಗಂಡು

ಸಿಡಿಲ ಮೊಗ್ಗು

೧

ಇರುಳ ಬೇಟದಿಂದ ಬಳಲಿ, ಮುಂಜಾವಿನ ಚಳಿಗಾಳಿಗೆ ಮೈದೆರೆಯಲಾಸೆಯಿಲ್ಲದೆ, ಹರೀತಶ್ಯಾಮಲವರ್ಣದ ಉಣ್ಣೆ ಹೊದಿಕೆಯಡಿಯಲ್ಲಿ ಮಲಗಿದ ಸಹ್ಯಾದ್ರಿ ವನಲಕ್ಷ್ಮಿಯನ್ನು, ಆಕೆಯ ಸುತ್ತಲೂ ಕವಿದ ಹೇಮಂತಋತುವಿನ ದಟ್ಟವಾದ ಮಂಜಿನ ಬಿಳಿದೆರೆಯನ್ನು ಓಸರಿಸಿ, ಸುವರ್ಣಾರುಣ ವರ್ಣೋಜ್ವಲ ಕಿರಣಾಂಗುಲಿಯಿಂದ ನೇವರಿಸಿ, ಎಳ್ಚರಿಸಿದನು- ಸೂರ್ಯನಾರಾಯಣ.

ನಿದ್ರಾಮಗ್ನ ಪ್ರೇಯಸಿಯನ್ನು 'ಹಗಲಾಯಿತು ಏಳು' ಎಂದು ಮೃದು ಮದುರವಾಗಿ ಕರೆವ ಇನಿಯನ ಕೋಮಲ ಕಂಠರವದಂತೆ, 'ಕುಹೂ... ಕುಹೂ .' ಎಂದು ಕುಕಿಲಿತು, ಮಾವಿನ ಮರದ ಹಸಿರು ಗೋಪುರದಲ್ಲಿ ಕುಳಿತ ಕೋಗಿಲೆಯ ಕಲಕಂಠ.

ಅರೆನಿದ್ದೆಯಲ್ಲಿ ಪ್ರಿಯತಮನ ಕರೆ ಕೇಳಿ ಪುಲಕಿತಗಾತ್ರಳಾದ ನಲ್ಲೆಯಂತಾಯಿತು, ಪ್ರಭಾತ ಸಮಯದ ತಂಗಾಳಿ ಸುಳಿದ ಬನವಾಸಿಯ ಬನ.

ಸೂರ್ಯೋದಯದ ಮಂಗಲವಾರ್ತೆಯನ್ನು ಲೋಕಕ್ಕೆ ಸಾರುವ ಪ್ರಭಾತ ವಾದ್ಯರವದಂತೆ, ಉದಯರಾಗವನ್ನು ಹಾಡುವ ಗಾಯಕರಂತೆ, ನುಡಿವ ಕೋಟ್ಯಾಂತರ ಹಕ್ಕಿಗಳ ಉಲಿಹನ್ನು ಕೇಳಿ, ಕಣ್ತೆರೆದಳು ವಿಪಿನ ಶ್ರೀರಮಣಿ.

ತಾಯಿಯೆದ್ದಾಗ, ತಾವೂ ಎದ್ದು ಆಡುವ ಮಕ್ಕಳಂತೆ, ಜಿಂಕೆ, ನವಿಲುಗಳು ನಲಿದವು. ಮೈ ಮೇಲೆ ಬಿದ್ದ ಇಬ್ಬನಿ ಹನಿಯನ್ನು, ಮೈದೊಗಲನ್ನು ಕಂಪಿಸಿ, ಒದರಿ, ಕೊಂಬೆಯಿಂದ ಕೊಂಬೆಗೆ ಹಾರಿ, ಕಾಡಿಗೆಲ್ಲಾ ಹಗಲಾದ ಸುದ್ದಿಯನ್ನು ಸಾರಿದವು ವಾನರ ಕೋಟಿ.

’ನಾನು ಈಗಾಗಲೇ ಅರಿಯದ ಹೊಸದನ್ನು ನೀನೇನು ಹೇಳಬಲ್ಲೆ’ ಎಂದು ಕಪಿಯನ್ನು ಹಂಗಿಸುವಂತೆ, ’ಕೊಕ್ಕುಕೊಕ್ಕುಕೊ’ ಎಂದು ಅಣಕಿಸಿ ಕೂಗಿತು, ಏಳುತ್ತಿದ್ದ ಹಾಗೇ ಹೊಟ್ಟೆಯಾತುರದಿಂದ ಹುಳು ಮೇಯಲು, ತನ್ನ ಮಡದಿಯರ, ಪಿಳ್ಳೆಗಳ ಪರಿವಾರದೊಂದಿಗೆ ಹೊರಟ ಕಾಡು ಹುಂಜ.

ಮನೆಯ ಸಣ್ಣ ಮಕ್ಕಳ ಕೂಗಿನಿಂದ, ಅರೆನಿದ್ದೆಯಲ್ಲಿ ಎಚ್ಚರವಾಗಿ, ’ಇದೇನು ಗದ್ದಲವೆಂದು ಮಡದಿ ಮಕ್ಕಳನ್ನು ಜಡಿಯುವ ಗೃಹಸ್ವಾಮಿಯಂತೆ ಅಬ್ಬರಿಸಿತು, ಹಳುವಿನಲ್ಲಿ ಹುದುಗಿದ ವನರಾಜ ವ್ಯಾಘ್ರ, ಮನೆಯೊಡೆಯನ ಈ ನಿದ್ರಾಚಾಪಲ್ಯವನ್ನರಿತು, ಗಟ್ಟಿಯಾಗಿ ನಗಲಾರದೆ, ಮುಸಿಮುಸಿ ನಗುವ ದಾಸಿಯರ ಚೆಲುಮೊಗಗಳಂತೆ ಹೂವುಗಳು ಅರಳಿದವು.

ಬನವಾಸಿಯ ವನಲಕ್ಷ್ಮಿಯ ರಾಜ್ಯದಲ್ಲಿ ದಿನದಿನವೂ ಹಗಲಾದಾಗ ನಡೆವ ಈ ನಾಟಕವನ್ನು, ಅಚ್ಚರಿ, ಮೆಚ್ಚುಗೆ ತುಂಬಿದ ಕಣ್ಣುಗಳಿಂದ ನೋಡುತ್ತಾ, ಇಬ್ಬನಿ ತೇವದಿಂದ ಧೂಳಡಗಿದ ರಾಜಮಾರ್ಗದಲ್ಲಿ ನಾಲ್ಕಾರು ರಥಗಳು ಬಳ್ಳಿಗಾಮೆಯತ್ತ ವೇಗವಾಗಿ ನಡೆದವು.

ಕುದುರೆಗಳ ಖುರಪುಟದ ಸದ್ದನ್ನು, ರಥ ಚಕ್ರಧ್ವನಿಯನ್ನು, ಅಪರಿಚಿತ ಮನುಷ್ಯರ ಮಾತಿನ ಸದ್ದನು, ಕೇಳಿ ಭಯ ಸಮ್ಮಿಶ್ರವಾದ ಕುತೂಹಲದಿಂದ ಮಾರ್ಗದ ಬದಿಯ ಪೊದೆಗಳ ಮರೆಯಲ್ಲಿ ನಿಂತು ನೋಡುತ್ತಿರುವ ಹುಲ್ಲೆ ಮರಿಗಳಂತೆಯೇ, ರಥದಲ್ಲಿ ಕುಳಿತ ವಿಷ್ಣುವರ್ಧನನೂ, ಬಿಡುಗಣ್ಣನಾಗಿ ಬನಸಿರಿಯನ್ನು ನೋಡುತ್ತಿದ್ದ.

ಆದಷ್ಟು ಬೇಗ, ಬಳ್ಳಿಗಾಮೆಯನ್ನು ಸೇರಬೇಕೆಂಬ ಉದ್ದೇಶದಿಂದ ಮುಂಬೆಳಗಿನ ಬೆಳ್ಳಿಯ ಬೆಳಕಿನಲ್ಲೇ, ಕಟ್ಟಿದ ರಥದಲ್ಲಿ ಸೊಸೆವೂರಿನಿಂದ, ತನ್ನ ತಾತ ವಿನಯಾದಿತ್ಯ, ತಂದೆ ಎರೆಯಂಗದೇವ, ತಾಯಿ ಏಚಲಾಜೀವಿ, ಸೋದರರಾದ ಬಲ್ಲಾಳ,

ಉದಯಾದಿತ್ಯರೊಂದಿಗೆ ಹೊರಟ ವಿಷ್ಣುವರ್ಧನನಿಗೆ ಕಾಡಿನ ಸೊಬಗು ಕಾಣದ ವಿಷಯವಾಗಿರಲಿಲ್ಲ.

ಹೊಯ್ಸಳ ಮನೆತನದ ತವರೂರು ಸೊಸೆವೂರು, ರಾಜಧಾನಿ ದ್ವಾರಸಮುದ್ರಗಳೂ, ಮಲೆ ಸೀಮೆಯ ನಗರಗಳೇ. ಸೊಸೆವೂರಂತೂ, ಹೆಮ್ಮರಗಳ ತೊಡೆಯ ಮೇಲೆ, ವನದಪ್ಪುಗೆಯಲ್ಲಿ ಮಲಗಿದ ನಗರ ಮಲೆ, ಕಾನನಗಳು ಒಂದು ರೀತಿಯಲ್ಲಿ ಆತನ ಜೀವನದ ನಿತ್ಯ ಸಹಚರಿಗಳಾಗಿದ್ದವು. ಆದರೂ, ಮೊದಲಬಾರಿಗೆ ಬಳ್ಳಿಗಾಮೆಯ ಮಾರ್ಗದಲ್ಲಿ ನಡೆದಾಗ, ಇಬ್ಬದಿಯಲ್ಲೂ ಹರಡಿದ ವನ ಸೌಂದರ್ಯ, ಏನೋ ವಿನೂತನತೆಯನ್ನು ತಳೆದಂತೆ ಕಾಣುತ್ತಿತ್ತು.

ಇಬ್ಬನಿ ತೊಳೆದು ಶುಭ್ರವಾಗಿ ಬೆಳಗಿನ ಹೊಂಬಿಸಿಲಿನಲ್ಲಿ ಬಂಗಾರದ ಮಿರುಗಿಟ್ಟಂತೆ ಹೊಳೆಯುವ ಪುಷ್ಯಮಾಸದ ಕಾಡ ಹಸಿರು, ಆ ದಟ್ಟ ಹಸಿರಿನಲ್ಲಿ ಅಲ್ಲಲ್ಲಿ ಹೊಗೆ ಹಬ್ಬಿದಂತೆ ಬಿಸಿಲಿಗೂ ಕರಗದೆ ನಿಂತ ಮಂಜು, ಪರ್ವತಾಗ್ರಗಳಿಂದ ಧುಮುವಕು ನೂರಾರು ಅಬ್ಬಿಗಳ ಜಲನಾಟ್ಯದ, ಮಂಜುಳ ರವ, ಪುಷ್ಪಗಂಧ ಭಾರವಾದ ತಂಗಾಳಿ, ಆ ತಂಗಾಳಿಗೆ ನಮ್ರವಾಗಿ ಚಾಮರಗಳಂತೆ ತೂಗುವ ಮಾರ್ಗದ ಪಾರ್ಶ್ವದ ವೃಕ್ಷಗಳ ತೆಳುಗೊಂಬೆಗಳು, ರಥಧ್ವನಿಗೆ ಹೆದರಿ, ಬದಿಯ ಹುಲ್ಲಿನಲ್ಲಿ ಮಿಂಚಿನ ವೇಗದಿಂದ ಹಾರುವ ಹತ್ತಿಯ ಉಂಡೆಯಂಥ ಮೊಲಗಳು, ಹಿಂಡಿನೊಂದಿಗೆ ಓಡುತ್ತಾ, ಕುತೂಹಲದಿಂದ ನಡುನಡುವೆ ನಿಂತು, ವಯ್ಯಾರದಿಂದ ಕತ್ತು ತಿರುಗಿಸಿ, ರಥಗಳತ್ತ ನೋಡುವ ಹುಲ್ಲೆಗಳು—

—ಒಂದೊಂದೂ 'ಇದು ನಾನು ಹಿಂದೆ ಎಂದೊ ಕಾಣದ ಲಾವಣ್ಯ' ಎಂಬ ಹೊಸತನದ ಬೆರುಗನ್ನು ಮೂಡಿಸುತ್ತಿದ್ದವು.

ಎಷ್ಟು ನೋಡಿದರೂ ಸಾಕಾಗದ ಆ ವನದ ಸೌಂದರ್ಯವನ್ನು, ವೇಗವಾಗಿ ಓಡುವ ಕುದುರೆಗಳ ಪದಾಘಾತ, ರಥಗಳ ಚಕ್ರಗಳಿಂದ ಎದ್ದ ಕೆಂಧೂಳು ಕೆಡಿಸಬಾರದೆಂದು, ಅವು 'ಆದಷ್ಟು ನಿಧಾನವಾಗಿ, ಹೆಚ್ಚು ಧೂಳೇಳದಂತೆ ನಡೆಯಲಿ' ಎಂದು ಆರೋಹಿಗಳಿಗೆ ಅಪ್ಪಣೆ ಮಾಡಿ, ಕಾಡ ನೋಟದಲ್ಲೇ ಕಣ್ಣು ಕೀಲಿಸಿ ಕುಳಿತಿದ್ದ ವಿಷ್ಣುವರ್ಧನ, ತನ್ನ ಮೆಚ್ಚುಗೆಯನ್ನು ಹೃದಯದಲ್ಲೇ ಹುದುನಿಸಿ ಇರಿಸಲಾಗದೆ—

'ಅಪ್ಪಾಜಿ. ಇದು ರಥದಲ್ಲಿ ಹೋಗುವ ಮಾರ್ಗವಲ್ಲ. ನಡೆದು ಹೋಗಬೇಕಾದುದು'

—ಎಂದ.

'ಏಕೆ?'

—ಮಗನಿಗೆ ಇದಿರಾಗಿ, ರಥದ ಮಗ್ಗುಲಿಗೆ ಒರಗಿಕುಳಿತ ಎರೆಯಂಗದೇವ ಕೇಳಿದ.

'ರಥದಲ್ಲೋ, ಕುದುರೆಯ ಮೇಲೋ ಕುಳಿತು ವೇಗವಾಗಿ ಹೋದರೆ, ದಾರಿ ಬಹು ಬೇಗ ಮುಗಿಯುತ್ತದೆ. ಹಾಗಲ್ಲದೆ, ನಡೆದು ಹೋದರೆ ನಿಧಾನವಾಗಿ ಈ ಸೊಬಗನ್ನು ಸವಿಯುತ್ತಾ ಹೋಗಬಹುದು. ನಿಜಕ್ಕೂ ಒಮ್ಮೆ ಯಾವ ಕಾರ್ಯಾವಸರವೂ ಇಲ್ಲದೆ, ಬಿಡುವಾಗಿ, ಈ ಮಾರ್ಗದಲ್ಲಿ ಒಮ್ಮೆ ಬಂದು ಹೋಗಬೇಕು ಅಪ್ಪಾಜಿ. ಗಡಿಬಿಡಿಯ ಪ್ರಯಾಣಕ್ಕಲ್ಲ ಈ ಕಾಡುದಾರಿ.'

'ನಿನಗೇನೋ ಕಾಡು ಸ್ವರ್ಗಖಂಡವೆಂದೇ ಕಾಣುತ್ತಿದೆ. ಅದಕ್ಕೇ ಎಷ್ಟು ನಿಧಾನವಾಗಿ ಹೋದರೆ ಅಷ್ಟು ಮೇಲು ಎನ್ನುತ್ತೀಯ. ಅದರೆ ಹಿಂದಿನ ರಥದಲ್ಲಿರುವ ನಿಮ್ಮವ್ವೆಯನ್ನು ಕೇಳು-ಏನು ಹೇಳುತ್ತಾಳೋ? ಈ ಹಾಳು ಕಾಡುದಾರಿ ಎಷ್ಟು ಬೇಗ

ಸವೆದೀತೋ ಎಂದು ಆಕೆ ತಪಿಸುತ್ತಿರಬೇಕು. ಲೋಕದಲ್ಲಿ ಕಾಡೇ ಇರದೆ, ಬರೀ ಊರುಗಳೇ ಇದ್ದರೆ ಲೇಸು ಎನ್ನುತ್ತಾಳೆ.'

—ಎಂದು, ಆ ಮಾತು ಹೇಳುತ್ತಲೇ ಏನೋ ಮಾತನ್ನು ಜ್ಞಾಪಿಸಿಕೊಂಡು, ನಕ್ಕ ಎರೆಯಂಗದೇವ.

ಆತ ನಕ್ಕುದನ್ನು ಕಂಡು, ವಿಷ್ಣುವರ್ಧನನ ಕುತೂಹಲ ಕೆರಳಿ, ನಕ್ಕುದು ಏಕೆಂದು ತಿಳಿಯಲು ಕೇಳಿದ—

'ಅದೇನು ಮಾತು ಅಪ್ಪಾಜಿ? ಏನೋ ನೆನಸಿಕೊಂಡು ನಗುತ್ತಿದ್ದೀರಲ್ಲಾ?'

'ಬಲು ಹಿಂದಿನ ಮಾತು ಬಿಟ್ಟಿಯಣ್ಣ. ಒಮ್ಮೆ ನಿಮ್ಮ ಅವ್ವೆಗೆ ಬಲವಂತದ ವನ ಪ್ರಯಾಣ ಮಾಡಿಸಿದ್ದೆ. ಈಗ-ನಿನ್ನೊಂದಿಗೆ ಮಾತನಾಡುವಾಗ ಅದರ ನೆನಪಾಯಿತು.'

'ಅದೇನು ಮಾತು ಹೇಳಿ ಅಪ್ಪಾಜಿ?'

'ನನ್ನ ಮಾತು ಕೇಳುತ್ತಾ ಕುಳಿತರೆ, ನೀನು ಕಾಡು ನೋಡುವುದಕ್ಕೆ ಅಡ್ಡಿಯಾಗದೆ?'

—ಮಗನ ಕಾಡಿನ ಮೋಹವನ್ನು ಹಾಸ್ಯಮಾಡಿ ಕೇಳಿದ ಎರೆಯಂಗದೇವ.

'ಅದಕ್ಕೇನು ಅಪ್ಪಾಜಿ- ಕಣ್ಣಿನ ಕೆಲಸ ಕಣ್ಣಿಗೆ ಕಿವಿಯ ಕೆಲಸ ಕಿವಿಗೆ. ಹೇಳಿ-'

—ಒತ್ತಾಯ ಮಾಡಿ ಕೇಳಿದ ವಿಷ್ಣುವರ್ಧನ

'ನಿನಗೇ ಗೊತ್ತಲ್ಲ-ನಿಮ್ಮವ್ವೆ ಏಚಲೆ, ನಾನು ಮನೆ ತುಂಬಿಸಿಕೊಂಡ ನಾಲ್ಕನೆಯ ಮಡದಿ. ಆಕೆಯನ್ನು ಮನೆಗೆ ತಂದು ಕೊಂಡದ್ದೂ ಒಂದು ಕಥೆಯೆ—'

—ಎಂದು ಎರೆಯಂಗದೇವ ಹೇಳಲಿದ್ದ ಮಾತಿಗೆ ಆರಂಭಸಿದ.

ತನ್ನ ತಾಯಿಯ ವಿಷಯದಲ್ಲಿ ತಂದೆ ಏನು ಹೇಳುವನೋ ತಿಳಿಯ ಬೇಕೆಂಬ ಕುತೂಹಲದಲ್ಲಿ, ಉಳಿದೆಲ್ಲವನ್ನು ಮರೆತು, ಕಣ್ಣು ಕಿವಿಗಳೆರಡನ್ನು ತಂದೆಯತ್ತ ತಿರುಗಿಸಿ, ಕುಳಿತ ವಿಷ್ಣುವರ್ಧನ.

ವಿಷ್ಣುವರ್ಧನ ತನ್ನ ತಂದೆಯೊಂದಿಗೆ ಹಾಗೆ ಬಿಡುವಾಗಿ ಕುಳಿತು ಮಾತನಾಡಿಯೇ ಎಷ್ಟೋ ಮಾಸಗಳಾಗಿತ್ತು. ಕುಳಿತು ಮಾತಾಡುವುದೇನು-ಎಷ್ಟೋ ಮಾಸಗಳ ಕಾಲ ತಂದೆ ಮಕ್ಕಳು ಒಬ್ಬರೊಬ್ಬರ ಮುಖವನ್ನು ನೋಡಲೂ ಅವಕಾಶ ಕೊಡದಂತ ಪರಿಸ್ಥಿತಿಯಿತ್ತು.

ಎರೆಯಂಗದೇವನ ತಂದೆ ವಿನಯಾದಿತ್ಯರಾಯ ಜೀವಂತನಾಗಿದ್ದರೂ, ಬಹು ವೃದ್ಧನಾದ ಆತನಿಂದ, ತಾನೇ ರಾಜ್ಯಭಾರದ ಕೆಲಸಗಳನ್ನಾವುದನ್ನೂ ನಿರ್ವಹಿಸಲು ಆಗದೆ, ಎಲ್ಲ ಕೆಲಸವನ್ನು ಎರೆಯಂಗನೇ ನೋಡಿಕೊಳ್ಳಬೇಕಾಗಿತ್ತು. ಆತನೊಂದಿಗೆ ಆಗಾಗ ಹೊಯ್ಸಳರ ಗಡಿಗಳ ಮೇಲೆ ದಾಳಿ ಮಾಡುವ ಚೋಳ ಸಾಮನ್ತರಾದ ಚೆಂಗಾಳ್ವ, ಕೊಂಗಾಳ್ವ ದೊರೆಗಳನ್ನು ಹದ್ದಿನಲ್ಲಿರಿಸುವ ಯುದ್ಧದ ಕೆಲಸ, ಆದಕ್ಕಿಂತ ಹೆಚ್ಚಾಗಿ, ಹೊಯ್ಸಳರ ಪ್ರಭುವಾದ ಚಾಲುಕ್ಯ ಚಕ್ರವರ್ತಿ ತ್ರಿಭುವನ ಮಲ್ಲ ವಿಕ್ರಮಾದಿತ್ಯರಾಯನ ಸಮರಗಳಲ್ಲಿ ಸೇನಾಧಿಪತ್ಯ ವಹಿಸುವ ಕರ್ತವ್ಯ. ಎರೆಯಂಗದೇವನಿಲ್ಲದೆ, ವಿಕ್ರಮಾದಿತ್ಯನ ಒಂದು ಸಮರವೂ ನಡೆಯುತ್ತಿರಲಿಲ್ಲ. ದಕ್ಷಿಣದಲ್ಲಿ ಚೋಳರನ್ನು ಮಣಿಸುವುದಕ್ಕೂ ಈತನೇ ಬೇಕು, ಉತ್ತರದಲ್ಲಿ ಮಾಳವರ ಮದಮುರಿಯುವುದಕ್ಕೂ ಈತನೇ ಆಗಬೇಕು. 'ಎರೆಯಂಗದೇವರು ನಮ್ಮ ಬಲಗೈ' ಎಂದು ವಿಕ್ರಮಾದಿತ್ಯನೇ ಎಲ್ಲರ ಮುಂದೂ ಹೇಳಿಕೊಂಡಿದ್ದ. ಎರೆಯಂಗದೇವನಿಗೂ ಚಕ್ರವರ್ತಿಯಲ್ಲಿ ಅಷ್ಟೇ ಅಭಿಮಾನವಿತ್ತು. 'ಆತನ ಸೇವೆಯಲ್ಲಿ ಸಾವು ಬರುವುದಕ್ಕಿಂತ ಹೆಚ್ಚಿನ ಮನ್ನಣೆಯೇ

ಇಲ್ಲ' ಎಂದು ಹೇಳಿ, ಹಗಲೋ, ಇರುಳೋ ಕರೆ ಬಂದ ಕೂಡಲೇ ಹೊರಡುವುದಕ್ಕೆ ಕತ್ತಿ ಹಿಡಿದೇ ಸಿದ್ಧವಾಗಿರುತ್ತಿದ್ದ. ಆ ಚಕ್ರವರ್ತಿಯ ಕೆಲಸ ಬಿದ್ದರಂತೂ ಮುಗಿದೇ ಹೋಯಿತು—ಆರಾರು ಮಾಸಗಳ ಕಾಲ ತಂದೆ ಮಕ್ಕಳಿಗೆ ಮುಖದರ್ಶನವೂ ತಪ್ಪಿಹೋಗುತ್ತಿತ್ತು.

ಅಂಥ ಸಂದರ್ಭದಲ್ಲಿ ಎಷ್ಟೋ ಬಾರಿ ತನ್ನ ತಾಯಿ ಏಚಲಾದೇವಿ ಯಾರಿಗೂ ಕಾಣದಂತೆ ಕಣ್ಣೀರು ಮಿಡಿಯುತ್ತಿದ್ದುದನ್ನು ಎಷ್ಟೋ ಬಾರಿ ಬೇಸರಗೊಂಡು 'ಮೂವರಲ್ಲ, ಮೂವತ್ತು ಮಂದಿ ಸವತಿಯರಿದ್ದರೂ ಅಷ್ಟು ಜನಕ್ಕೂ ಕಾಲಿಗೆ ಬಿದ್ದಾದರೂ, ದಿನದಲ್ಲಿ ಒಂದು ಗಳಿಗೆ ಗಂಡನ ಸೇವೆ ಮಾಡುವುದಕ್ಕೆ ಅವಕಾಶ ಪಡೆಯಬಹುದು. ಆದರೆ ಈ ಮಹಾತಾಯಿ ಸಮರದೇವಿ- ಸವತಿಯಾದರೆ, ಮಾಸಗಟ್ಟಲೆ ಗಂಡನ ಸೇವೆ ಮಾಡುವುದಿರಲಿ, ಮುಖದರ್ಶನಕ್ಕೂ ಬಿಡುವು ಕೊಡುವುದಿಲ್ಲ. ಕಳೆದ ಸಲ ಯುದ್ಧಕ್ಕೆ ಹೋಗಿ, ಒಂದು ವರ್ಷದ ಬಳಿಕ ಬಂದಾಗ್ಯ ತನ್ನನ್ನು ನೋಡಿ 'ನೀನೇ ಏಚಲೆಯೇ?' ಎಂದು ಕೇಳಿದ್ದರು. ಈ ಬಾರಿ ಬರುವ ವೇಳೆಗೆ, ನನ್ನ ನೆನಪಿದ್ದರೆ ಇರಲಿ, ಬಿಡಲಿ-ಮಕ್ಕಳ ನೆನಪಾದರೂ ಇರುತ್ತದೆಯೊ ಇಲ್ಲವೋ? ಅರಸನ ಮಡದಿಯಾಗಬೇಕು ದೊರೆಯ ಮಕ್ಕಳಾಗಬೇಕು ಎಂದು ಜನ ಏಕಾದರೂ ಬಯಸುತ್ತಾರೆಯೋ?' ಎಂದು ಹೇಳುವುದನ್ನು ವಿಷ್ಣುವರ್ಧನನೇ ಕೇಳಿದ್ದ.

ತನ್ನ ಮಕ್ಕಳ ತಾಯಿಯಾದ ಏಚಲಾದೇವಿಯಲ್ಲಿ ಎರೆಯಂಗದೇವನಿಗೆ 'ನಿನ್ನ ಪ್ರಾಣಪಕ್ಷಿ ಎಲ್ಲಿದೆ?' ಎಂದರೆ 'ಆ ಕಂಜದಳಾಯ ಸಾಕ್ಷಿಯ ಹೃದಯ ಪಂಜರದಲ್ಲಿ' ಎಂದು ಹೇಳುವಷ್ಟು ಅಭಿಮಾನ. ಏಚಲಾದೇವಿಯ ರೂಪ ಸೌಭಾಗ್ಯ, ಗುಣ ಸಂಪತ್ತು ಯಾರೂ ಹಾಗೆ ಅಭಿಮಾನ ಪಡುವಂಥದು. ನಾಲ್ಕು ಜನ ಮಕ್ಕಳ ತಾಯಿಯಾದರೂ, ಇನ್ನೂ ಆಗ ತಾನೇ ಹರೆಯದ ಹೊಸ್ತಿಲನ್ನು ದಾಟಿದ ಏರು ಜವ್ವನೆಯ ಚೆಲುವಿಕೆ, ಆಕೆಯಲ್ಲಿ ನೆಲೆಸಿತ್ತು. ಎಷ್ಟೋ ಬಾರಿ ಎರೆಯಂಗದೇವ 'ಏಚಲೇ, ಭಗವಂತ ಸಂದ

ಸಂವತ್ಸರಗಳನ್ನು ತನ್ನ ಆಯುಷ್ಯದಲ್ಲಿ ಕಳೆದು, ನಿನ್ನ ಜೀವಮಾನಕ್ಕೆ ಕೂಡಿಸಿಕೊಡುತ್ತಿದ್ದಾನೆ. ನನ್ನ ತಲೆ ನೆರೆತರೂ ನಿನ್ನ ಕೆನ್ನೆಯ ಹಾಲು ಬಣ್ಣ ಮಾಸಲಿಲ್ಲ' ಎಂದಿದ್ದ ಆಕೆಯ ಕಮನೀಯ ಕಾಯಕಾಂತಿಯನ್ನು ಮೆಚ್ಚಿಕೊಂಡು ಆಕೆ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಹಸುಳೆಗಳಿಗೆ ಮುತ್ತುಕೊಟ್ಟರೂ, 'ಅಪ್ಪ ಕೊಟ್ಟ ಪಟ್ಟೆಪೀತಾಂಬರಕ್ಕಿಂತ ಮಾವ ಕೊಟ್ಟ ನೂಲೆಳೆ ಹಿರಿದು' ಎಂದ ಸುಮಾನಗಾರ ಅಳಿಯನ ಹಾಗೆ, 'ನಮಗಿಂತ ನಮ್ಮಿಂದ ಪಡೆದ ಮಕ್ಕಳ ಮೇಲೇ ನಿನಗೆ ಅಭಿಮಾನ ಅತಿಯಾಯಿತಲ್ಲವೆ?' ಎಂದು ಕೃತಕ ಮತ್ಸರವನ್ನು ಅಭಿನಯಿಸಿ, ಮಡದಿಯ ಮೊಗಕ್ಕೆ ನಾಣ್ಗೆಂಪಿನ ಉಡುಗೊರೆ ನೀಡುತ್ತಿದ್ದ

ಅಂಥ ಮಡದಿಯೇ ಪತಿವಿರಹದಲ್ಲಿ ಬಳಲುವಾಗ, ಇನ್ನು ಮಕ್ಕಳಿಗೆ ಆತನೊಂದಿಗೆ ಚಕ್ಕಂದವಾಡುವುದಕ್ಕೆ ಅವಕಾಶವೆಲ್ಲಿಯದು?

ಹೀಗಾಗಿ ಎರೆಯಂಗದೇವನ ಮಕ್ಕಳಿಗೆ ತಮ್ಮ ತಂದೆಯೊಂದಿಗೆ ಒಂದು ಗಳಿಗೆ ಮಾತನಾಡುವುದಕ್ಕೆ ಅವಕಾಶ ದೊರೆತರೂ, ಸ್ವರ್ಗಸೌಭಾಗ್ಯ ದೊರಕಿದಷ್ಟು ಹರ್ಷವಾಗುತ್ತಿತ್ತು. ಆ ದಿನ ಅಂಥ ಆನಂದಾವಕಾಶ ವಿಷ್ಣುವರ್ಧನನಿಗೆ ಅಪರೂಪವಾಗಿ ಆಕಸ್ಮಿಕವಾಗಿ ದೊರಕಿತ್ತು.

ಸೊಸೆವೂರಿನ ಅರಮನೆಯಿಂದ ಹೊರಡುವಾಗ, ಅರಸು ವಿನಯಾದಿತ್ಯನಿಗೆ ಎರೆಯಂಗದೇವನಿಗೆ, ಅಂತಃಪುರದವರಿಗೆ ಪರಿಜನರಿಗೆಂದು ಬೇರೆ ಬೇರೆ ರಥಗಳು ಗೊತ್ತಾದಂತೆ, ಕುಮಾರರಿಗೆಂದೇ ಒಂದು ರಥ ಮೀಸಲಾಗಿತ್ತು. ಆದರೆ ಹೊರಡುವ ಹೊತ್ತಿನಲ್ಲಿ ವೃದ್ಧ ವಿನಯಾದಿತ್ಯನ ತಾಯಿ 'ದೂರದ ಪ್ರಯಾಣ, ಒಂಟಿಯಾಗಿ ಹೋಗುವುದು ಬೇಸರವಾಗುತ್ತದೆ, ಬಲ್ಲಾಳನಾದರೂ ನನ್ನ ಜೊತೆಗಿರಲಿ' ಎಂದು ಹಿರಿಯ ಮೊಮ್ಮಗನನ್ನು ತನ್ನ ಜೊತೆಗಿರಿಸಿಕೊಂಡುದರಿಂದ, ಏಚಲಾಜೀವಿ ತನ್ನ

ಮಗಳೊಂದಿಗೆ 'ಕಿರಿಯ ಉದಯಾದಿತ್ಯನೂ ನಮ್ಮ ಜೊತೆ ಬರಲಿ' ಎಂದು ಹೇಳಿ, ವಿಷ್ಣುವರ್ಧನ ಒಂಟಿಯಾಗಿದ್ದ. ಆ ಹೊತ್ತಿನಲ್ಲಿ ಎರೆಯಂಗದೇವ—

'ಬಿಟ್ಟಿಯಣ್ಣ, ನಾನೂ ಅವರು ಯಾರಿಗೂ ಬೇಡ, ನೀನೂ ಯಾರಿಗೂ ಬೇಡ. ಆದ್ದರಿಂದ ಯಾರಿಗೂ ಬೇಡವಾದ ನಾವಿಬ್ಬರೂ ಜೊತೆಯಾಗೋಣ'

—ಎಂದು ಹೇಳಿ, ವಿಷ್ಣುವರ್ಧನನನ್ನು ತನ್ನ ಜೊತೆ ಮಾಡಿಕೊಂಡು ತನ್ನೊಂದಿಗೆ ಆತ ಪ್ರಯಾಣ ಮಾಡಲು ಅವಕಾಶ ಕಲ್ಪಿಸಿದ್ದ.

ತಂದೆಯೊಂದಿಗೆ ಪ್ರಯಾಣ ಮಾಡುವಷ್ಟು ಹರ್ಷವೇ ಸಾಕಾಗಿತ್ತು ವಿಷ್ಣುವರ್ಧನನಿಗೆ. ಆದರೆ ಈಗ ಅದರೊಂದಿಗೆ ತಂದೆಯ ಬಾಯಲ್ಲಿ ಕಥೆ ಕೇಳುವ ಮಹಾಭಾಗ್ಯವೂ ಲಬ್ಧವಾಗಿತ್ತು.

ವಿಷ್ಣುವರ್ಧನನೇ ಏನು-ಎಲ್ಲರಿಗೂ ಅಷ್ಟೆ. ಎರೆಯಂಗದೇವನೊಂದಿಗೆ ಮಾತನಾಡುವುದೆಂದರೆ ಆತ ಆಡಿದ ಮಾತನ್ನು ಕೇಳುವುದೆಂದರೆ, ಕಿವಿ ಕೊಯ್ಯಿಸಿಕೊಳ್ಳುವುದಕ್ಕೂ ಜನ ಸಿದ್ಧವಾಗುತ್ತಿದ್ದರು. ಎರೆಯಂಗದೇವನ ಮಾತಿನ ಚಾತುರಿ ಅಂಥದು.

ಎರೆಯಂಗದೇವ ಎಂದಾದರೊಂದು ದಿನ ಇರುಳು, ಬಿಡುವಾಗಿ ಚಂದ್ರಶಾಲೆಯಲ್ಲಿ ಮಕ್ಕಳೊಂದಿಗೆ ಮಾತನಾಡುಕ್ತಾ ಕುಳಿತರೆ, ಮಕ್ಕಳೊಂದಿಗೆ ಮಡದಿಯರು, ಕಂಭಗಳ ಮರೆಯಲ್ಲಿ ದಾಸದಾಸಿಯರು-ಆ ಮಾತು ಕಥೆ ಕೇಳಲು ಅವಕಾಶವಿದ್ದವರೆಲ್ಲಾ, ಅಡಿಯಲುಗಿಸದೆ, ಉಸಿರೂ ಆಡದೆ ಕೇಳುತ್ತಾ, ಎಲ್ಲಿದ್ದವರು ಅಲ್ಲೇ ಇರುತ್ತಿದ್ದರು. ಆತ ಹೇಳುವುದು ಮುಗಿಯುವವರೆಗೂ ಕೇಳುವವರು ಕರುವಿಟ್ಟ ಬೊಂಬೆಗಳಾಗುತ್ತಿದ್ದರು. ಅಷ್ಟು ರಸವತ್ತಾದ ಮಾತಿನ ರೀತಿ ಅವನದು.

ಆತನ ಸರಸವಾಣಿಯಲ್ಲೇ ವಿಷ್ಣುವರ್ಧನ, ತನ್ನ ವಂಶದ ಮೂಲ ಪುರುಷ ಸಳರಾಯ, ಸೊಸೆಪೂರಿನ ವಾಸನ್ತಿಕಾದೇವಿಯ ಮಂದಿರದಲ್ಲಿ ಸೆಳೆಯಿಂದ ಹುಲಿಯನ್ನು ಹೊಯ್ದು ಸುದತ್ತಯತಿಗಳ ಹರಕೆಯಿಂದ ತಮ್ಮ ರಾಜ್ಯಭಾರಕ್ಕೆ ಅಸ್ತಿಭಾರ ಹಾಕಿದ ವೀರಕಥೆಯನ್ನು, ತನ್ನ ತಾತ ವಿನಯಾದಿತ್ಯ ಮಲೆಯರಸುಗಳ ಮೇಲೆ ದಂಡೆತ್ತಿ ಹೋದಾಗ ಆತನನ್ನು ಎದುರಿಸಿ ಸೋತ ಮಲೆಯರನುಗಳ ಗತಿ, ಕವಿಗಳ ಬಾಯಲ್ಲಿ—

ಮಲೆಯರಸು ಮಕ್ಕಳೆಲ್ಲಂ

ತಲೆಯಂ ತಡೆವುತ ಮೆಳ್ದು ವಾದಾಂಬುಜಮಂ

ತಲೆಯೊಳ್ತಳೆ ವಿನಗಂಭುಜ

ಬಲಮಂ ತಳೆದಿರ್ಪ್ಪನಲ್ತೆ ವಿನಯಾದಿತ್ಯಂ ||

—ಎಂಬ ಹಾಡಾಗಿ ನಾಡೆಲ್ಲ ಹರಡಿದುದನ್ನು ವಿನಯಾದಿತ್ಯರಾಯನ 'ರಕ್ಕಸ ಹೊಯ್ಸಳ' ಎಂಬ ಅದಕ್ಕೆರೆದ ಬಾವುಟವನ್ನು ಕಂಡೆ ಕೊಂಕಣಿಗರು ದಿಕ್ಕಾಪಾಲಾಗಿ ಓಡಿದ ಚೋದ್ಯವನ್ನು, ಎರೆಯಂಗದೇವನೇ ಚೋಳ ಸಾಮನ್ತ ಅಣ್ಣಿಗರ ಮೇಲೆ ದಂಡೆತ್ತಿ ಹೋದಾಗ, ಸೋತ ಅಣ್ಣಿಗ ಜೀವಭೀತಿಯಿಂದ, ಕಾಡಿನ ಸೊಪ್ಪುಗಳನ್ನೇ ಬಟ್ಟೆಯನ್ನಾಗಿ ಉಟ್ಟು ಕಾಡಿನಲ್ಲಿ ತಲೆಮರೆಸಿಕೊಂಡು ಓಡಿದ ಸಾಹಸವನ್ನು, ಸೆರೆ ಸಿಕ್ಕಿದ ನನ್ನುಗ 'ನಾನು ನನ್ನುಗನಲ್ಲ, ನಿಮ್ಮ ಆಣುಗ ಕಾವಾಡಿ' ಎಂದು ಬೇಡಿದ ವಿನೋದವನ್ನೂ ಕಥೆಯಾಗಿ ಕೇಳಿ ಮೈ ಮರೆತಿದ್ದ. ಸಾಹಸದ ಕಥೆಗಳನ್ನು ಕೇಳಿದಾಗ ಆತನ ಮೈ ರೋಮಾಂಚವಾಗಿದ್ದಂತೆಯೇ, ಸಮರಾಂಗಣದ ಎಷ್ಟೋ ಕರುಣ ಕಥೆಗಳನ್ನು ಕೇಳಿ ಕಂಬನಿ ಮಿಡಿದಿದ್ದ. ಸಾಲು ಕಗ್ಗೊಲೆಯ ಸಂದರ್ಭದಲ್ಲೂ ಒಮ್ಮೊಮ್ಮೆ ನಡೆದ ಹಾಸ್ಯ ಪ್ರಸಂಗವನ್ನು ಎರೆಯಂಗದೇವ ಬಣ್ಣಿಸಿದಾಗ, ಪಕ್ಕೆ ಹಿಡಿಯುವಷ್ಟು ನಕ್ಕಿದ್ದ. ಆತ ಕಥೆ

ಹೇಳುತ್ತಿರುವಾಗ ಎಷ್ಟೋ ಬಾರಿ, ವಿಷ್ಣುವರ್ಧನನಿಗೆ ಹಾಗೆ ಕಥೆ ಕೇಳುತ್ತಲೇ ಬಾಳು ಮುಗಿಯಬಾರದೆ ಎನಿಸಿತ್ತು.

ಒಮ್ಮೆ ಹೀಗೆ ಯಾವುದೋ ಕಥೆಯನ್ನು ಮೈಮರೆಸುವಂತೆ ಹೇಳಿ ಮುಗಿಸಿದಾಗ, ಆ ಗಳಿಗೆಯಲ್ಲಿ ತನ್ನೆದೆಯಲ್ಲಿ ಮೂಡಿದ ಮೆಚ್ಚುಗೆಯ ಭಾವನೆಯನ್ನು ತಡೆಹಿಡಿಯಲಾಗದೆ, ವಿಷ್ಣುವರ್ಧನ—

'ಇಷ್ಟು ಚೆನ್ನಾಗಿ ಕಥೆ ಹೇಳುವುದನ್ನು ನಿಮಗೆ ಯಾರು ಕಲಿಸಿದರು, ಅಪ್ಪಾಜಿ ?'

—ಎಂದು ಕೇಳಿದಾಗ ಮಕ್ಕಳು, ಸವತಿಯೊಂದಿಗೆ ಹತ್ತಿರದಲ್ಲೇ ಕಥೆ ಕೇಳುತ್ತ ಕುಳಿತಿದ್ದ ಎರೆಯಂಗದೇವನ ಹಿರಿಯರಸಿ ಚೋಳಮಹಾದೇವಿ—

'ಅಪ್ಪಾಜಿಯವರ ವಿದ್ಯೆಯನ್ನು ನೀನೂ ಕಲಿತುಕೊಳ್ಳುವಾಸೆಯೇ? ಅದೊಂದು ಬೇಡ ಆ ಜಾಣ್ಮೆ ಅವರಿಗೇ ಸಾಕು'

—ಎಂದಿದ್ದಳು.

'ಏಕೆ?'

—ದೊಡ್ಡ ತಾಯಿಯ ಮಾತನ್ನು ಕೇಳಿ ಚಕಿತನಾದ ವಿಷ್ಣುವರ್ಧನ ಕೇಳಿದ.

'ಸದ್ಯ ಆ ಮಾತಿನ ಗುರುತಿಗೆ ಮರುಳಾಗಿ, ನಾನು ಮೂರು ಮಂದಿ ಸವತಿಯರಿಗೆ ಅವರನ್ನು ಹಂಚಿಕೊಟ್ಟಂತೆ, ನಾಳೆ ನಿನ್ನ ಕೈ ಹಿಡಿಯುವ ಭಾಗ್ಯವಂತೆಗೆ ಆಗುವುದು ಬೇಡ ಪುಟ್ಟಸ್ವಾಮಿ. ಆ ವಿದ್ಯೆ ಅವರಿಗೇ ಇರಲಿ.'

—ಎಂದಿದ್ದಳು ಮಹಾದೇವಿ.

'ಅಂದರೆ-ನಾವೆಲ್ಲಾ ಇಲ್ಲಿರುವುದು ನಿನಗೆ ಬೇಸರವೇ ಅಕ್ಕ?'

—ಮತ್ತೊಬ್ಬ ಮಡದಿ ಮಾದಲಾದೇವಿ, ಮಹಾದೇವಿಯನ್ನು ಪ್ರಶ್ನೆ ಮಾಡಿದಳು.

’ಬೇಸರವಾಗಿದ್ದರೆ, ನೀನು ಮನೆಯಲ್ಲಿ ಕಾಲಿಟ್ಟ ದಿನ ನಾನೇ ಹೊಸ್ತಿಲ ಮೇಲೆ ’ಸೂರಕ್ಕಿ’ಗೆ ಆಕ್ಕಿಯ ಬದಲು ಮುತ್ತು ತುಂಬಿದ ಪಾತ್ರೆ ಇಟ್ಟು, ’ನೀನು ಕಾಲಿಟ್ಟ ಮನೆಯಲ್ಲಿ ಮುತ್ತಿನ ಮಳೆಗರೆಯಲಿ’ ಎಂದು ಹರಸುತ್ತಿದ್ದೆನೇ? ನಿನ್ನಲ್ಲಿ ಈ ತುಳುತಲೆ, ಆ ಏಚಲೆ-ಯಾರಲ್ಲೂ ನನಗೆ ಬೇಸರವಿಲ್ಲ, ನನ್ನ ಪುಣ್ಯ ಚೆನ್ನಾಗಿದ್ದು ಬರುವವರೆಲ್ಲರೂ ಒಳ್ಳೆಯವರೇ ಬಂದಿರಿ. ಹಾಗಾದರೆ ಇವರು ಒಂದೊಂದು ಸಲವೂ ನನ್ನನ್ನು ಒಪ್ಪಿಸಿದಾಗ, ಯಾರಾದರೊಬ್ಬ ಪುಣ್ಯಾತ್ಮಗಿತ್ತಿ ತಲೆಯ ಮೇಲೆ ಮೆಣಸು ಅರೆಯುವವಳು ಬಂದಿದ್ದರೆ, ನಾನೆಲ್ಲಿಗೆ ಹೋಗಬೇಕಾಗಿತ್ತು ಹೇಳು? ಅದಕ್ಕೆ ಹೇಳಿದೆ’

—ಎಂದಳು ಮಹಾದೇವಿ ಪತಿಯ ಮೇಲೆ ಬೇಸರವಿರುವಂತೆ.

’ಅಂತೂ ನಿನ್ನ ಪಾಲಿಗೆ ಕೆಟ್ಟವನಾದವನು ನಾನೊಬ್ಬನೇ ಅಲ್ಲವೇ?’

—ಎರೆಯಂಗದೇವನೂ ಸತಿಯರ ಮಾತಿನಲ್ಲಿ ಬೆರೆತು ಕೇಳಿದ್ದ.

’ಉಂಟೆ? ಅಕ್ಕ ಹಾಗೆಂದು ಎಂದೂ ಹೇಳಲಿಲ್ಲ, ನಮ್ಮನ್ನು ಒಳ್ಳೆಯವರು ಎಂತ ಕರೆಯಬೇಕು ಎನ್ನಿಸಿತು. ನೇರವಾಗಿ ಹೇಳಿದರೆ, ನಮ್ಮ ತಲೆ ಎಲ್ಲಿ ಆಕಾಶಕ್ಕೇರುತ್ತದೆಯೊ ಎಂದು ಆ ರೀತಿ ಹೇಳಿದರು ಅಷ್ಟೆ’

—ಎಂದು ಏಚಲಾದೇವಿ, ಮಹಾದೇವಿಯ ಪಕ್ಷ ವಹಿಸಿ ನುಡಿದಳು

’ನೋಡಿದೆಯಾ ಮಹಾದೇವಿ—ಈ ಮೂವರನ್ನೇಕೆ ತಂದಿರಿ ಎಂದು ನಮ್ಮನ್ನು ಆಕ್ಷೇಪಿಸಿದೆಯಲ್ಲಾ? ಈಗ ಗೊತ್ತಾಯಿತೇ ನಾನು ಹಾಗೆ ತಂದಿದ್ದರಿಂದ ಯಾರ ಬಲ ಬೆಳೆಯಿತು? ನಿನಗೆ ಹೀಗೆ ರಕ್ಷಣೆಯಿರಲಿ ಎಂದೇ ನಾನು ಮತ್ತೆ ಮೂವರನ್ನು

ಮದುವೆಯಾದದ್ದು. ಈಗ ಮೂರು ದಿಕ್ಕಿನ ರಕ್ಷಣೆ ನಿನಗೆ ಒದಗಿತು. ಇನ್ನೊಂದೇ ದಿಕ್ಕು ಅರಕ್ಷಿತ ಆದಷ್ಟು ಬೇಗ ಆ ದಿಕ್ಕಿಗೂ ಕೋಟೆ ಕಟ್ಟುವ ವ್ಯವಸ್ಥೆ ಮಾಡಬೇಕು'

—ಎಂದಾಡಿ ಎಲ್ಲರೂ ನಗುವಂತೆ ಮಾಡಿದ್ದ ಎರೆಯಂಗದೇವ.

'ನಿಮ್ಮ ಅಪ್ಪಾಜಿಯವರ ಮಾತು ಕೇಳಿದೆಯಾ ಪುಟ್ಟಸ್ವಾಮಿ. ಅವರಂತೆ ಮಾತು ಕಲಿತರೆ ನೀನೂ ಹೀಗಾಡುತ್ತೀಯಾ ಎಂದೇ ನಿನಗೆ ಆ ವಿದ್ಯೆ ಬೇಡ ಎಂದದ್ದು'

—ಎಂದು ಆಕ್ಷೇಪಿಸುವಂತೆ ಗಂಡನ, ವಾಕ್ಚಾತುರಿಯನ್ನು ಮೆಚ್ಚಿದ್ದಳು ಮಹಾದೇವಿ.

ಕೈಹಿಡಿದ ಮಡದಿಯರು, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಮೆಚ್ಚುವುದೇನು, ಎರೆಯಂಗದೇವನ ಆ ಗಾರುಡಿ ವಿದ್ಯೆ, ದೇಶದಲ್ಲೇ 'ದೊರೆ ಹೆಸರು ಎರೆಯಂಗ, ದೊರೆ ಮಾತು ಕಾಶಿ ಗಂಗ' ಎಂದು ಗಾದೆಯಾಗಿತ್ತು.

ಹಾಗೆ ಹೆಸರುವಾಸಿಯಾಗಿ ಎಲ್ಲರೂ ಆತನ ಮಾತನ್ನು ಕೇಳಲೆಂದು ಕಿವಿದೆರೆದು ಬಯಸುತ್ತಿರುವಾಗ, ಆತ, ತಾನೇ ಕಥೆ ಹೇಳುತ್ತೇನೆಂದರೆ, ಆ ಮಾತು ವಿಷ್ಣುವರ್ಧನನಿಗೆ, 'ಹಾಲು ಕೊಡುತ್ತೀಯಾ?' ಎಂದು ಕೇಳಿದ್ದಕ್ಕೆ ಆ ಸುರಭಿ 'ಹಾಲೇನು ಸೊದೆಯನ್ನೇ ಕರೆಯುತ್ತೇನೆ' ಎಂದು ಹೇಳಿದಷ್ಟು ಸಂತಸವಾಯಿತು.

'ಅದೇನು ಹೇಳಿ, ಬೇಗ ಹೇಳಿ, ಅಪ್ಪಾಜಿ'

—ಎಂದು ಆತುರದಿಂದ ಒತ್ತಾಯ ಮಾಡಿದ.

ಮಗನ ಆತುರವನ್ನು ನೋಡಿ ನಕ್ಕು—

'ಪರರ ಹೆಂಡಿರ ಕಥೆ ಕೇಳುವುದಕ್ಕೆ ಎಷ್ಟು ಆತುರವೋ ನಿನಗೆ'

—ಎಂದು ನಗೆಯಾಡಿದ ಎರೆಯಂಗದೇವ.

'ಪರರ ಹೆಂಡಿರ ಗೊಡವೆ ನಮಗೇಕೆ ಅಪ್ಪಾಜಿ? ನಾನು ಕೇಳಿದ್ದು ನನ್ನ ಅವ್ವೆಯ ಕಥೆ ಹೇಳಿ ಎಂದು'

—ತಂದೆಯ ಮಾತಿಗೆ ತಕ್ಕ ಉತ್ತರವಿತ್ತು ನುಡಿದ ವಿಷ್ಣುವರ್ಧನ.

'ಅಂತೂ ನೀನೂ ಮಾತಾಡುವುದನ್ನು ಕಲಿತುಬಿಟ್ಟೆ'

—ಎಂದು ಮಗನ ಬೆನ್ನನ್ನು ಮೃದುವಾಗಿ ಚಪ್ಪರಿಸಿ—

'ಈ ಮಾತನ್ನು ನಾನು ನಿನಗೆ ಹೇಳಿದೆ ಎಂದು ನಿನ್ನವ್ವೆಗೆ ಎಂದೂ ಹೇಳಬೇಡ'

—ಎಂದು ಪೀಠಿಕೆ ಹಾಕಿಕೊಂಡು ತಾನು ಏಚಲಾದೇವಿಗೆ ಬಲವಂತದ ವನ ಪ್ರಯಾಣ ಮಾಡಿಸಿದ ಕಥೆ ಹೇಳಲಾರಂಭಿಸಿದ—

'ನಿಮ್ಮ ಅಜ್ಜಿ ಕೆಳೆಯಬ್ಬರಸಿ, ನನಗೆ ಒಬ್ಬರಮೇಲೊಬ್ಬರು ಮೂವರು ಮಡದಿಯರು ಮೂರ್ಧನ್ಯರಾಗಿ ಇದ್ದಾಗಲೇ ನಾಲ್ಕನೆಯ ಏಚಲೆಯನ್ನು ತಂದು, ನನ್ನನ್ನು ಚತುರಂಗ ಬಲಾಧಿಪತಿಯಾಗಿ ಮಾಡಿದುದಕ್ಕೆ ಕಾರಣ-ತನ್ನ ಮೊದಲ ಸೊಸೆಯರು ಮಕ್ಕಳ ತಾಯಂದಿರಾಗಲಿಲ್ಲವೆಂದು. ಈ ನಾಲ್ಕನೆಯ ಮದುವೆಗೆ ನಾನು ಅಷ್ಟು ಸುಲಭವಾಗಿ ಒಪ್ಪಲಿಲ್ಲ. 'ಅವ್ವೆ, ಇದೇನು ಹುಚ್ಚು ನಿಮಗೆ? ನಿಮ್ಮ ಮಗನಿಗೆ ಮಕ್ಕಳಾಗಲಿಲ್ಲ ಎಂದು ಈಗಾಗಲೇ ಮೂವರನ್ನು ತಂದದ್ದಾಯಿತು. ಹಾಗೂ ಫಲವಾಗಲಿಲ್ಲ ಎಂದು ಸೀಮೆಯಲ್ಲಿರುವ ಚೆಲುವೆಯರನ್ನೆಲ್ಲಾ ತಂದು ನಮ್ಮ ಅಂತಃಪುರದಲ್ಲಿ ಸೇರಿಸಿಬಿಟ್ಟರೆ, ಉಳಿದ ಜನ ಮಕ್ಕಳು ಪಡೆಯುವುದಿರಲಿ, ಮಡದಿಯರನ್ನು ಕಾಣದೆ ಬ್ರಹ್ಮಚಾರಿಗಳಾಗಬೇಕೆ?'—ಎಂದು ತಪ್ಪಿಸಿಕೊಳ್ಳಲು ಯತ್ನಿಸಿದೆ. ಆದರೆ ನಿಮ್ಮಜ್ಜಿಯ ವಿಷಯ ನಿನಗೆ ತಿಳಿಯದು ಒಮ್ಮೆ ತಲೆಯಲ್ಲೇನಾದರೂ

ಬಂದರೆ, ಅದು ಆಗಿಯೇ ತೀರಬೇಕು. ಫಾಲಾಕ್ಷ ಅಡ್ಡಿಯಾದರೂ ಕೇಳುತ್ತಿರಲಿಲ್ಲ. ಇನ್ನು ನನ್ನ ಮಾತು ನಡೆಯಗೊಟ್ಟಾಳೆ—'ನಾಲ್ಕು ಜನರನ್ನು ಮದುವೆಯಾಗುವ ನಕ್ಷತ್ರದಲ್ಲಿ ಹುಟ್ಟಿದ ನಿನ್ನ ತನಗೆ ನನ್ನನ್ನು ಅನ್ನುತ್ತೀಯಾ? ನಾಲ್ಕಲ್ಲ, ನಲವತ್ತು ಜನ ಬಂದರೆ ನಿನಗೇನು—ಅಷ್ಟು ಜನ ಸೊಸೆಯಂದಿರನ್ನು ಬಾಳಿಸಿಬೇಕಾದವಳು ನಾನು ತಾನೆ'—ಎಂದು ನನ್ನ ಬಾಯಿ ಮುಚ್ಚಿಸಿ, ಏಚಲೆಯನ್ನು ಮನೆಗೆ ತಂದೇಬಿಟ್ಟಳು. ನಿನ್ನ ಅವ್ವೆಯನ್ನು ನೋಡಿದ ಮೇಲೆ, ನಾನು ಬೇಡ ಎನ್ನಲಿಲ್ಲ.

'ಅವ್ವೆಯ ಆಸೆಯಂತೆ ಮನೆಗೆ ನಾಲ್ಕನೆಯ ಸೊಸೆ ಬಂದರೂ, ಮೊಮ್ಮಗನನ್ನು ಕಾಣಬೇಕೆಂಬ ಆಕೆಯ ಆಸೆ ತೀರಿರಲಿಲ್ಲ. ಅಲ್ಲಿಗೆ ಆಕೆ ನನ್ನನ್ನು ಕೈ ಬಿಟ್ಟಳು. ಹಟ ಹಿಡಿದು ನನ್ನನ್ನು 'ಪುರುಷ ವಾಂಚಾಲಿ' ಯಾಗಿ ಮಾಡದೆ, ದೇವರುಗಳಿಗೆ, ಗುರುಗಳಿಗೆ, ಬೆನ್ನು ಹತ್ತಿದಳು. ನನ್ನ ಜಾತಕ, ತನ್ನ ಸೊಸೆಯಂದಿರ ಜಾತಕಗಳನ್ನು ಹಿಡಿದು, ಸೀಮೆಯಲ್ಲಿರುವ ಜ್ಯೋತಿಷ್ಯರನ್ನೆಲ್ಲಾ ವಿಚಾರಿಸಿದಳು. ಯಾರೋ ಒಬ್ಬ ಜ್ಯೋತಿಷ್ಯರು 'ಏಚಲಾಜೀವಿಗೆ ಪುತ್ರಪ್ರಾಪ್ತಿಯಿದೆ. ಆದರೆ ಅದು ದೈವಾನುಗ್ರಹದಿಂದ ಲಬ್ಧವಾಗಬೇಕು' ಎಂದು ಹೇಳಿದರಂತೆ. ಅಂದಿನಿಂದ ನಿನ್ನ ತಾಯಿಗೆ ವ್ರತ, ನೇಮ, ಉಪವಾಸಗಳ ಕಾಲ ಆರಂಭವಾಯಿತು. ಇವೊತ್ತು ಅದು, ನಾಳೆ ಇದು—ಯಾರು ಏನು ಹೇಳಿದರೆ ಅದು—ದಿನ ದಿನವೂ ನಡೆದ ಈ ಕಠಿಣ ವ್ರತೋಪಪಾಸಗಳಲ್ಲಿ ಬರಲಿ, ಮನೆಗೆ ಬಂದಾಗ, ಆಗ ತಾನೆ ಬಿಡಿಸಿಟ್ಟ ಹಲಸಿನ ತೊಳೆಯಂತೆ ಕಳಕಳಿಸುತ್ತಿದ್ದ ಏಚಲೆ, ಬೆಂಕಿಯ ಮೇಲಿಟ್ಟ ಬಾಳೆಯ ಎಲೆಯಂತಾದಳು. ಅದನ್ನು ನೋಡಿ ನನಗೆ ಕರುಳು ಕಿವಿಚಿದಂತಾಯಿತು. ನಿನ್ನ ಅವ್ವೆ ದಿನ ದಿನಕ್ಕೆ, ಬೇಸಿಗೆಯ ತೊರೆಯಂತೆ ಬತ್ತುತ್ತಿರುವುದನ್ನು ನೋಡಲಾಗದೆ ನಾನೇ 'ಅವ್ವೆ ಇದೇನು ಕೆಲಸ ಮಾಡುತ್ತಿದೀರ ನಮ್ಮ ದುರದೃಷ್ಟಕ್ಕೆ, ಕಂಡವರ ಮನೆಯ ಮಗಳನ್ನು ಹೀಗೆ ಬಳಲಿಸುವುದು ಎಲ್ಲಿಯ ನ್ಯಾಯ? ಈ ಕೈ ಎಷ್ಟು ನೂರು ಜನ ತಾಯಂದಿರ ಮಕ್ಕಳ ಜೀವಹರಣ ಮಾಡಿ, ಈ ಶಾಪ

ಕಟ್ಟಿಕೊಂಡಿವೆಯೋ ಏನೋ. ಇನ್ನೆಷ್ಟು ಜನ್ಮ ಮಕ್ಕಳಿಲ್ಲದೆ ಸವೆದು ಆ ಶಾಪ ತೀರಬೇಕೆಂದಿದೆಯೋ. ಹಾಗಿರುವಾಗ, ಕೊಟ್ಟಿಗೆಯಲ್ಲಿ ಹಸುಗಳನ್ನು ತಂದು ಕೂಡಿದಂತೆ, ಅಂತಃಪುರದಲ್ಲಿ ಮಡದಿಯರ ಪಡೆ ಕಟ್ಟಿದರೆ, ಕೈ ಹಿಡಿದವರನ್ನು ಗಾಣದ ಕೋಣದ ಹಾಗೆ ಅಶ್ವತ್ಥ ವೃಕ್ಷ ಸುತ್ತಿಸಿದರೆ ಏನಾದೀತು? ಬಿಡು. ಮಕ್ಕಳನ್ನು ಕೊಡುವ ಮನಸ್ಸು ದೇವರಿಗಿದ್ದರೆ, ಆದಾಗ ಅಗಲಿ. ಇಲ್ಲವಾದರೆ ಇದ್ದಷ್ಟು ದಿನ ಇವರಾದರೂ ಉಂಡುಟ್ಟು ಸುಖವಾಗಿರಲಿ. ಇವರನ್ನು ಬಳಲಿಸಿದ ಪಾಪವಾದರೂ ನಮಗೆ ತಟ್ಟುವುದು ಬೇಡ' ಎಂದೆ. ಆದರೆ ಅವ್ವೆಗೆ ನನ್ನ ಮಾತು ಎಲ್ಲಿಯ ಲೆಕ್ಕ?' ಮೂಳಾ, ನಿನ್ನ ಕೈ ಹಿಡಿದವಳ ಕೆನ್ನೆ ಕಪ್ಪಾಯಿತು ಎಂದು, ದೇವರ ಸೇವೆಯನ್ನೇ ಬಿಡು ಎನ್ನುತ್ತೀಯಾ? ಚಂದನದ ಕೊರಡು ತೇಯ್ದು ಗಂಧವಾಗಬೇಕು, ದೇವರ ಸೇವೆಗೆ ಮೈ ತೇಯ್ದು ಕರ್ಮ ಸವೆಯ ಬೇಕು. ಅಷ್ಟು ಪರಿಜ್ಞಾನ ನಿನಗಿಲ್ಲದಿದ್ದರೆ, ಇಷ್ಟು ರಾಜ್ಯ ಆಳಿ ನೀನು ಗಳಿಸಿದ್ದೇನು? ಮಕ್ಕಳಿಲ್ಲದ ಹೆಣ್ಣಿನ ರೂಸ ಕಾಡಬೆಳದಿಂಗಳು, ಅದನ್ನೇನು ಮೆಚ್ಚಿ ಕೊಳ್ಳುತ್ತೀಯಾ? ನಿನ್ನ ಏಚಲೆ, ತೋಳಲ್ಲಿ ಚಂದ್ರಮನಂಥ ಕಂದನನ್ನು ಎತ್ತಿಕೊಂಡು ನಿಂತಾಗ ನೋಡಿ ಹೇಳು- ಈ ಬರಿ ಬಳ್ಳಿ ಸೊಗಸೊ, ಹೂವು ಬಿಟ್ಟ ಬಳ್ಳಿ ಸೊಗಸೊ ಎನ್ನುವುದನ್ನು'—ಎಂದು ನನ್ನನ್ನು ಸುಮ್ಮನೆ ಮಾಡಿದಳು. 'ನಾನು ಬಳಲುತ್ತೇನೆ ಎಂದು ನೀವು ಹೀಗಾಡಿ, ಅತ್ತೆಯವರ ಮನಸ್ಸು ನೋಯಿಸುವುದಾದರೆ, ನಾನೇ ಯಾವುದಾದರೂ ಹೊಳೆ ಕೆರೆಯ ದಾರಿ ಹುಡುಕಿಕೊಳ್ಳುತ್ತೇನೆ. ಈಗಾಗಲೇ ಅವರು ಸಾಕಷ್ಟು ನೊಂದಿದಾರೆ. ನೀವೂ ಏನಾದರೊಂದು ಆಡಿ, ಮತ್ತಷ್ಟು ನೋಯಿಸಬೇಡಿ' ಎಂದು ಏಚಲೆಯೂ ತನ್ನ ಅತ್ತೆಯೊಂದಿಗೇ ಸೇರಿಕೊಂಡು, ದಂಡು ದಾಳಿಗೆ ಹೆದರದ ನನ್ನನ್ನು ತನ್ನ ಕುಡಿಗಣ್ಣ ನೋಟದಿಂದ ಬೆದರಿಸಿ, ಬಾಯಿ ಮುಚ್ಚಿಸಿದಳು. ಕಡೆಗೆ 'ನೀವು- ಅತ್ತೆ ಸೊಸೆ ಏನಾದರೂ ಮಾಡಿಕೊಳ್ಳಿ' ಎಂದು ನಾನು ಸುಮ್ಮನಾಗಿ ಬಿಟ್ಟೆ ನಿಮ್ಮ ಅಜ್ಜಿಯ ಸಂತಾನ ಬೇಟೆ ಹಾಗೇ ಮುಂದುವರಿಯಿತು.

’ಹೀಗಿರುವಾಗ ಒಮ್ಮೆ ಅರಮನೆಗೆ ನವರಾತ್ರಿಯ ಉತ್ಸವದ ಸಂದರ್ಭದಲ್ಲಿ ಪುಷ್ಪಗಿರಿಯ ಮಠದ ಸ್ಥಾನವತಿಗಳಾದ ತೇಜೋರಾಶಿ ಪಂಡಿತರು ಅರಮನೆಗೆ ಬಂದರು. ನಿನ್ನ ಕಣ್ಣು ಆ ಗುರುಗಳನ್ನು ಕಾಣಲಾಗಲಿಲ್ಲ. ನೀನು ಜನಿಸುವ ಕೆಲವು ದಿನ ಮೊದಲು ಅವರು ಶಿವಪದವಾಸಿಗಳಾದರು. ಆ ಮಟ್ಟಿಗೆ ನೀನು ಅದೃಷ್ಟಹೀನ ಬಿಟ್ಟಿಯಣ್ಣ. ಆ ಗುರುಗಳ ಹೆಸರು ಬೇರೆಯಲ್ಲ, ರೂಪ ಬೇರೆಯಲ್ಲ, ಧ್ಯಾನದಲ್ಲಿ ಕುಳಿತಾಗ ಅವರನ್ನು ನೋಡಿದರೆ, ಸಾಕ್ಷಾಶ್ ಅಗ್ನಿದೇವನೇ ಎದುರಿಗೆ ಕುಳಿತಂತೆ ಕಾಣುತ್ತಿದ್ದರು. ಪಂಡಿತರ ತಪೋಬಲ ಎಷ್ಟು ಮಹತ್ತಾದುದೊ, ಅವರ ಆಯುರ್ವೇದ ಪಾಂಡಿತ್ಯವೂ ಅಷ್ಟೆ ಮಿಗಿಲಾದುದು. ಬರೀ ಮನುಷ್ಯನಿಗೆ ಮದ್ದು ಮಾಡುವುದಿರಲಿ, ಗಿಡಮರಗಳಿಗೆ ಮದ್ದು ಮಾಡುವ ವೃಕ್ಷಾಯುರ್ವೇದದಲ್ಲೂ ಪಂಡಿತರು ಪರಿಣತರು. ಅವರು ಅರಮನೆಗೆ ಅಷ್ಟು ಸಮೀಪದಲ್ಲಿದ್ದರೂ, ಅವರ ದರ್ಶನ ಹಿಮಾಲಯದ ದರ್ಶನದಷ್ಟೇ ಅಪರೂಪವಾಗಿತ್ತು. ಸದಾ ತಮ್ಮ ಜಪತಪ ಅನುಷ್ಠಾನದಲ್ಲಿ ನಿರತರಾಗಿರುತ್ತಿದ್ದ ಅವರು, ಆ ಬಾರಿ, ನಮ್ಮ ಪುಣ್ಯ ಫಲಿಸಿ, ಅರಮನೆಗೆ ಬರಲು ಒಪ್ಪಿದ್ದರು. ಅಂಥವರು ಯಾರಾದರೂ ಬಂದಾರೆಯೇ ಎಂದು ಕಾದಿರುತ್ತಿದ್ದ ಅವ್ವೆ, ದೇವತಾರ್ಚನೆ, ಗುರುಗಳ ಪಾದಪೂಜೆ ಎಲ್ಲವೂ ಮುಗಿದ ಬಳಿಕ, ಏಚಲೆಯನ್ನು ಅವರ ಪಾದಕ್ಕೆ ಎರಗಿಸಿ, ತಾನೂ ಅವರ ಕಾಲುಗಳ ಮೇಲೆ ಬಿದ್ದು ಅವರ ವಾದವನ್ನು ಕಣ್ಣೀರಿನಿಂದ ತೊಳೆದು—

’ತಾವು ಮಹಾಮಹಿಮರು, ನಿಮ್ಮ ಅಮೃತ ಹಸ್ತಸ್ಪರ್ಶದಿಂದ ಹೂ ಬಿಡದ ಬಳ್ಳಿ ಹೂ ಬಿಡುತ್ತದೆ, ಹಣ್ಣಾಗದ ಮರ ನಿತ್ಯಫಲಭರಿತವಾಗುತ್ತದೆ ಎಂದು ಲೋಕವೆಲ್ಲಾ ನಿಮ್ಮ ಕೀರ್ತಿಯನ್ನು ಕೊಂಡಾಡುತ್ತದೆ. ಆ ಅನುಗ್ರಹ ನನ್ನ ಸೊಸೆ ಮುದ್ದಿಗೂ ಆಗಬೇಕು’

—ಎಂದು ಬೇಡಿದಳು.

ಆಕೆಯ ಮಾತನ್ನು ಕೇಳಿ, ಆಕೆಯ ಮಾತಿನ ಅಂತರಾರ್ಥವನ್ನು ಗ್ರಹಿಸಿ, ನಕ್ಕು—

’ಅಂತೂ ನಿನ್ನದೂ ಕಸ್ತೂರಿ ಮೃಗದ ಕಥೆಯೇ ಆಯಿತು’

—ಎಂದರು.

’ಕೆಳಯಬ್ಬೆಗೆ ಗುರುಗಳ ಮಾತು ಅರ್ಥವಾಗಲಿಲ್ಲ ’ಅದೇನು ವಿವರಿಸಬೇಕು, ನಾವು ಅಜ್ಞರು’ ಎಂದಳು

’ತನ್ನ ನಾಭಿಯಲ್ಲೇ ಕಸ್ತೂರಿಯ ಸಿರಿಯನ್ನಿರಿಸಿಕೊಂಡ ಆ ಮೃಗ ’ಈ ಪರಿಮಳ ಎಲ್ಲಿಯದು?’ ಎಂದು ಗಾಳಿಯನ್ನು ಮೂಸುತ್ತಾ ಅಲೆಯುತ್ತದೆಯಂತೆ, ನಿಮಗೂ ಆ ಅಜ್ಞಾವಸ್ಥೆ ಬಂತಲ್ಲಾ ಎನಿಸಿತು, ಅದಕ್ಕೇ ಹೇಳಿದೆ. ಕಣ್ಣೆದುರಿಗೆ ಕಲ್ಪವೃಕ್ಷವನ್ನಿಟ್ಟುಕೊಂಡು ನಮ್ಮನ್ನು ಕೇಳುವುದೇ?’

—ಎಂದರು ಗುರುಗಳು

’ಮಾತು ತಿಳಿಯದ ಹಸುಳೆಯನ್ನು ಒಗಟಿ ಬಿಡಿಸಿ ಹೇಳು ಎಂದ ಹಾಗಿದೆ ಗುರುಗಳ ಮಾತು. ಹಾಗೆ ಸಂಕೇತವಾಗಿ ಹೇಳಿದರೆ ನಮಗೆ ತಿಳಿಯುವುದಿಲ್ಲ ನಿಮಗೇ ಮತ್ತಷ್ಟು ಶ್ರಮವಾಗುತ್ತದೆ. ಆದ್ದರಿಂದ ಒಮ್ಮೆಗೇ ನೇರವಾಗಿ ಹೇಳಿದರೆ, ಬದುಕಿಕೊಳ್ಳುತ್ತೇವೆ.’

—ಎಂದು ಬೇಡಿದಳು ಅವ್ವೆ

’ಅದಕ್ಕೆ ಉತ್ತರವಾಗಿ ಗುರುಗಳು—

'ತಾಯಿ, ಕರ್ಮ ಬಂಧನದಲ್ಲಿ ತೊಳಲುತ್ತಿರುವ ಮಾನವನನ್ನು ಉದ್ಧಾರ ಮಾಡುವುದಕ್ಕೆಂದೇ ಎತ್ತಿದ ಶ್ರೀ ಪಶುಪತಿಯ ಅಭಯ ಹಸ್ತದಂತಿರುವ ಚಂದ್ರದ್ರೋಣ ಪರ್ವತವನ್ನು ನೀನು ಕಂಡಿಲ್ಲವೇ? ಅರಮನೆಯ ಮೇಲುಪ್ಪರಿಗೆಯ ಮೇಲೆ ನಿಂತರೆ ಕಾಣುತ್ತದೆ. ನಮ್ಮನ್ನು ಕಾಪಾಡುವ ದೇವರು ಎಲ್ಲಿದಾನೆ ಎಂದು ಹುಡುಕುವವರಿಗೆ, ಶ್ರಮವಾಗದಂತೆ, 'ಇಗೋ ಇಲ್ಲಿಯೇ ಇದೇನೆ' ಎಂದು ಬೆರಳೆತ್ತಿ ತೋರಿಸಿದಂತಿರುವ ಆ ಪರ್ವತ ಶೃಂಗಕ್ಕಿರುವ ನಿಗ್ರಹಾನುಗ್ರಹ ಶಕ್ತಿಯಲ್ಲಿ ಅಣು ಮಾತ್ರವೂ ನಮಗಿಲ್ಲ ಅಲ್ಲಿಗೆ ಹೋಗಿ ಭಕ್ತಾನುಗ್ರಹಾರ್ಥವಾಗಿಯೇ ಅಲ್ಲಿ ನೆಲೆಸಿರುವ ಶ್ರೀ ದತ್ತಾತ್ರೇಯರ ಪೀಠಕ್ಕೆ ನಿನ್ನ ಸೊಸೆಯನ್ನು ಕರೆದುಕೊಂಡು ಹೋಗಿ, ಸೇವೆ ಮಾಡಿಸಿಕೊಂಡು ಬಾ ಜನ್ಮಜನ್ಮಾಂತರ ಲಬ್ಧವಾದ ಪಾಪಕ್ಷಾಲನೆಯಾಗಿ, ಮನೋರಥಸಿದ್ಧಿಯಾಗುತ್ತದೆ. ನಿನ್ನ ಸೊಸೆ ಒಬ್ಬನಲ್ಲ, ಮೂರು ಜನ ಗಂಡುಮಕ್ಕಳ ತಾಯಿಯಾಗುತ್ತಾಳೆ.'

—ಎಂದು ಮಾಡಬೇಕಾದ ಕೆಲಸವನ್ನು ವಿವರಿಸಿದರು

'ತೇಜೋರಾಶಿ ಪಂಡಿತರು ಶ್ರೀ ದತ್ತಾತ್ರೇಯರ ಸೇವೆಯಿಂದ ಪುತ್ರಪ್ರಾಪ್ತಿಯಾಗುವುದೆಂದು ಹೇಳಿದುದನ್ನು ಕೇಳಿ, ನಿಮ್ಮ ಅಜ್ಜಿಗೆ ನವನಿಧಿ ದೊರೆತಂತಾಯಿತು. ಗುರುಗಳಿಂದಲೇ ಶ್ರೀ ಪೀಠದಲ್ಲಿ ಪೂಜೆ ಮಾಡಬೇಕಾದ ಕಾಲ, ಉಪಾಸಣಕ್ರಮ ಎಲ್ಲವನ್ನೂ ವಿವರವಾಗಿ ತಿಳಿದುಕೊಂಡಳು. ಗುರುಗಳ ಅಪ್ಪಣೆಯಂತೆ, ವೈಶಾಖ ಶುದ್ಧ ಪೂರ್ಣಿಮೆಯ ದಿನ ಶ್ರೀ ಪೀಠದ ಸೇವೆ ನಡೆವುದೆಂದು ಗೊತ್ತಾಗಿ, ಆ ದಿನದ ವೇಳೆಗೆ ನಾವೆಲ್ಲರೂ ದತ್ತಾತ್ರಯ ಪೀಠಕ್ಕೆ ಪಯಣ ಬೆಳೆಸಬೇಕಾಯಿತು.

'ಗುರುಗಳು ಈ ಸೇವೆಯಿಂದ ಪುತ್ರಪ್ರಾಪ್ತಿಯಾಗುತ್ತದೆ ಎಂದು ಹೇಳಿದ ಗಳಿಗೆಯಿಂದಲೂ, ಅಲ್ಲಿಗೆ ಹೋಗುವ ಹೊತ್ತು ಯಾವಾಗ ಸನ್ನಿಹಿತವಾಗುವುದೋ ಎಂದು ತಪಿಸುತ್ತಿದ್ದ ನಿನ್ನ ಅವ್ವೆಯ ಉತ್ಸಾಹ, ಧರ್ಮಕಾರ್ಯದಲ್ಲಿದ್ದ ಅಚಲ ವಿಶ್ವಾಸ,

ದೈವದಲ್ಲಿದ್ದ ನಂಬಿಕೆ ಎಲ್ಲವೂ, ರಥಗಳು, ಘಟ್ಟದ ಏರುದಾರಿಯನ್ನು ಪ್ರವೇಶಿಸುತ್ತಿದ್ದ ಹಾಗೇ ಸಡಿಲವಾಗಿ ಹೋದವು.

'ಯಾವ ಕಷ್ಟ ಸುಖವನ್ನು ಕಾಣದೆ, ಕನ್ನವಾಡದಲ್ಲಿ ಹೂವಿನಂತೆ ಬೆಳೆದಿದ್ದ ಏಚಲೆ, ಚಂದ್ರದ್ರೋಣ ಪರ್ವತವನ್ನು ದೂರದಿಂದ ನೋಡಿ, ಅದರ ವಿಚಾರ ಕೇಳಿದ್ದಳೇ ಹೊರತು, ಎಂದೂ ಅಂಥ ದಾರಿಯಲ್ಲಿ ಪ್ರಯಾಣಮಾಡಿರಲಿಲ್ಲ. 'ಘಟ್ಟದ ದಾರಿಯ ಪ್ರಯಾಣ ಬಲು ಸೊಗಸಂತೆ. ಹೇಗಿರುತ್ತದೋ ನೋಡಬೇಕು' ಎನ್ನುತ್ತಿದ್ದ ಆಕೆಯ ಉತ್ಸಾಹ ಆ ದಾರಿಯಲ್ಲಿ ಅಷ್ಟುದೂರ ಹೋಗುತ್ತಿದ್ದಹಾಗೆ ಬತ್ತಿ ಹೋಯಿತು. ಅಲ್ಲಿಯ ಹಾವಿನಂತೆ ಸುತ್ತಿ ಸುತ್ತಿ ಹರಿಯುವ ಕೆಂಪು ಮಣ್ಣಿನ ದಾರಿ, ಇಬ್ಬದಿಯಲ್ಲೂ ಬೆಳೆದ ಹೆಮ್ಮರಗಳ ಕಾಡು, ಆ ಕಾಡನ್ನು ಕವಿದ ವನದ, ಆಗಾಗ ಮಾರ್ಗದ ಬದಿಯಲ್ಲಿ ಕಾಣಿಸವ ಪ್ರವಾಹಗಳು, ಒಮ್ಮೊಮ್ಮೆ ಎಲ್ಲ ಮೌನವನ್ನೂ ಮುರಿದು, ಕಾಡಿನಾಳದಲ್ಲಿ ಎಲ್ಲೋ ಕೇಳಿಬರುವ ಜಲವಾತಗಳ ಭೋರ್ಗರೆಯುವ ಸದ್ದು—ಇದೆಲ್ಲವನ್ನೂ ಕಂಡು, ಕೇಳಿ, ಆಕೆಯು ಪೀಠದಸೇವೆ ಮಾಡಬೇಕೆಂಬ ಉತ್ಸಾಹ ಉಡುಗಿಹೋಗಿ, ಎಂದೋ ಕೇಳಿದ ಹುಲಿ, ಹಾವುಗಳ ಕಥೆ ನೆನವಾಗಿ, 'ಇಲ್ಲೆಲ್ಲಾ ಕಾಡು ಏಲಕ್ಕಿ ತುಂಬಾ ಬೆಳೆಯುತ್ತದೆಯಂತೆ. ಅಹುದೇ? ಏಲಕ್ಕಿಯ ಬನದಲ್ಲಿ ನಾಗರಹಾವುಗಳನ್ನೇ ತಿಂದು ಬದುಕುವ ಕಾಳಿಂಗ ಸರ್ಪಗಳು 'ಯಾರಾದರೂ ಮನುಷ್ಯರನ್ನು ಕಂಡರೆ ಸಾಕು ಕಚ್ಚಿ, ಕೊಲ್ಲಬೇಕು ಎಂದು ಕಾಯುತ್ತಾ ಮಲಗಿರುತ್ತದೆಯಂತೆ. ಅದು ನಿಜವೇ' ಎಂದು ಪ್ರಶ್ನೆಮಾಡತೊಡಗಿದಳು. ಕಾಡಿನಲ್ಲಿ ಬಲವಾಗಿ ಗಾಳಿಬೀಸಿ, ಬಿದಿರು ಮೆಳೆ ಮೈ ಮುರಿದರೆ 'ಅದೇನು ಹುಲಿಯ ಕೂಗ ಕೂಗಿದ್ದು?' ಎಂದು ಕೇಳುವಳು. ಬೇಸಗೆಯಲ್ಲಿ ನೆಲದಲ್ಲಿ ಉದರಿದ ತರಗಿನ ಸದ್ದಾದರೆ, 'ಅದು ಹಾವು ಹರಿದ ಸದ್ದೇ ಇರಬೇಕು' ಎನ್ನುವಳು. ಆಕೆಯ ಭಯವನ್ನು ಕಂಡು ನನಗೆ ನಗುಬಂತು. ಇದೇನು ಹುಚ್ಚು ಹೆದರಿಕೆ ನಿನಗೆ? ಹಿಂದೆ ಹತ್ತು ಮುಂದೆ ಹತ್ತು ರಥಗಳಿವೆ. ಇಷ್ಟೊಂದು ಜನ ಶಸ್ತ್ರಧಾರಿಗಳಾದ

ಭಟರಿದಾರೆ. ಪಕ್ಕದಲ್ಲ ನಾನಿದ್ದೇನೆ ಇಷ್ಟಿದ್ದೂ ನಿನಗೆ ಏತರ ಭಯ? ಇಷ್ಟು ಪರಿವಾರದೊಂದಿಗೆ ಬರುವ ನಿನಗೇ ಇಷ್ಟು ಭೀತಿಯಾದರೆ, ಇನ್ನು ಒಂಟಿಯಾಗಿ ಬರುವ ಭಕ್ತರು ಹೇಗೆ ಬರುತ್ತಾರೋ ಯೋಚಿಸು. ಇಲ್ಲೇ ವಾಸಮಾಡುವ ಜನರು ಇಲ್ಲವೇ? ತನ್ನ ಸೇವೆಗೆ ಬರುವ ಭಕ್ತರಿಗೆ ಅಪಾಯವಾಗಲು ಭಗವಂತ ಬಿಟ್ಟಾನೇ? ಹೆದರಬೇಡ. ಇದು ಆಗಾಗ ಬರುವ ಮಾರ್ಗವಲ್ಲ! ಅವರೂಪಕ್ಕೆ ಬಂದು ಹೋಗವ ದಾರಿ. ಈಗ ಭಯವೆಂದು, ವನಸೌಂದರ್ಯವನ್ನು ಅಸ್ವಾದಿಸದೆ ಬಿಟ್ಟರೆ, ಮತ್ತೆ ಇಂಥ ಯೋಗ ಸಿಗದು' ಎಂದು ಏನೇನೋ ಹೇಳಿದೆ.

'ಆದರೆ ನನ್ನ ಸಮಾಧಾನದಿಂದ ನಿನ್ನ ತಾಯಿಯ ಭಯ ಅಡಗಲಿಲ್ಲ. 'ಸ್ವಾಮಿ ಇಷ್ಟು ಭಯ ತುಂಬಿದ ಕಾಡಿನಲ್ಲಿ ವಾಸಮಾಡುವಬದಲು, ಹಗಲಾಗಲಿ, ಇರುಳಾಗಲಿ, ಹೆಂಗಸರು ಮಕ್ಕಳೂ ನಿರ್ಭಯವಾಗಿ ಓಡಾಡಿಕೊಂಡು ಸೇವೆ ಮಾಡುವಂತ ನಗರದಲ್ಲಿ ಇರಬಾರದಾಗಿತ್ತೇ?' ಎಂದು ಬಯಸಿದಳು.

'ನಾನೇನು. ಸಮಾಧಾನ ಹೇಳಿದರೂ ಭೀತಿಯಡಗದ ನಿನವ್ವೆಯನ್ನು ಕಡೆಗೆ ನಾನು ಹೆದರಿಸಿಯೇ ಸುಮ್ಮನೆ ಮಾಡಬೇಕಾಯಿತು. 'ನಿನಗೆ ತಿಳಿಯದು ಏಚಲೆ ನಾವು ಕಟ್ಟಿದ ನಗರದಲ್ಲೇ ಇರುವುದು. ನಮಗೆ ಪ್ರಿಯವಾದಂತೆ ತಾನು ನಿರ್ಮಿಸಿದ ಪ್ರಕೃತಿಯಲ್ಲೇ ವಾಸಮಾಡುವುದು ಸ್ವಾಮಿಗೆ ಪ್ರಿಯವಾದುದು. ಅಲ್ಲದೆ—ಏನೋ ಬಯಸಿ ತನ್ನಬಳಿ ಬರುವ ಭಕ್ತರಿಗೆ, ತನ್ನ ಕಾಪಾಡುವ ಶಕ್ತಿಯಲ್ಲಿ ಎಷ್ಟು ನಂಬಿಕೆಯಿದೆಯೋ, ಪರೀಕ್ಷೆಮಾಡಬೇಕೆಂದೇ ದೇವರು ಇಂಥ ದುರ್ಗಮ ಸ್ಥಳಗಳಲ್ಲಿ ನೆಲಸಿರುವುದು. ಆದ್ದರಿಂದ ತಮ್ಮ ಜೀವ ಭೀತಿಯಿಂದ, ಸ್ವಾಮಿಯ ಶಕ್ತಿಯನ್ನು ಸಂದೇಹಿಸುವವರಿಗೆ ಆತ ಒಲಿಯುವುದಿಲ್ಲ.' ಎಂದು ನಾನು ಹೇಳಿದ ಮೇಲೆ, ತಾನಿನ್ನು ಭೀತಿ ವ್ಯಕ್ತಪಡಿಸಿದರೆ, ದೇವರಿಗೆ ಬೇಸರವಾಗಿ ಎಲ್ಲಿ ತಾನು ಬಂದ ಕಾರ್ಯ ವಿಫಲವಾಗುವುದೋ ಎಂಬ ಭಯದಿಂದ ನಿನ್ನವ್ವೆ ಗಂಡನ ಕಡೆಯವರು ಬಂದಾಗ,

ತಲೆಎತ್ತಿ ನೋಡಲಾಗದೆ, ಎಲ್ಲೋ ಅವಿತುಕೊಳ್ಳಬೇಕನ್ನುವ ಕನ್ಯೆಯನ್ನು ಬಲವಂತವಾಗಿ ಹೊರೆತರುವ ತಾಯಿಯಂತೆ ಭೀತಿ ಉಡಿಯಲ್ಲಿ ಹುದುಗಲೆಳೆಸುವ ನಗೆಯನ್ನೂ ಒತ್ತಾಯದಿಂದ ಒಣಗಿದ ತುಟಿಗಳಮೇಲೆ ತಂದುಕೊಂಡು—

'ಸರಿ, ಸರಿ, ಚನ್ನಾಗಿ ಹೇಳಿದಿರಿ. ನನಗೆ ಭಯ ಎಂದು ನಾನೆಲ್ಲಿ ಹೇಳಿದೆ. ಸ್ವಾಮಿಯಲ್ಲಿ ನಿಮಗಿರುವಷ್ಟು ನಂಬಿಕೆ ನನಗಿಲ್ಲವೇ? ಏನೋ ಎಲ್ಲೋ ಕೇಳಿದ ವಿಚಾರ ನಿಜವೋ ಅಲ್ಲವೋ ಎಂದು ತಿಳಿಯಲು, ನೀವು ಎಲ್ಲಾ ತಿಳಿದವರು ಎಂದು ಕೇಳಿದಮಾತ್ರಕ್ಕೆ, ಅದಕ್ಕೇ ಭಯ ಎಂದು ಹೆಸರಿಡುವುದೇ? ನನಗೇನೂ ಭಯವಿಲ್ಲ.'

—ಎಂದು ನನ್ನ ಬಾಯನ್ನೇ ಮುಚ್ಚಿಸುವ ಪ್ರಯತ್ನ ಮಾಡಿದಳು.

'ಭಯ ಇಲ್ಲ ಎನ್ನುತ್ತೀಯ ಹಾಗಾದರೆ, ತರಗು ಸರಿದ ಸದ್ದಾದಾಗ ನನ್ನನ್ನೂ ಒತ್ತಿಕೊಂಡು ಕುಳಿತು ಕೊಳ್ಳುವುದೇಕೆ? ದೂರ ಇದ್ದು ಕಾಡು ನೋಡು. ನಾನೂ ಹಾಯಾಗಿ ಕಾಡು ನೋಡಲು ಬಿಡು'

—ಎಂದು ನಾನು ನೆಗೆಯಾಡಿದೆ, ಆಕೆಯನ್ನು ಅಷ್ಟುದೂರ ಸರಿಸಿದೆ.

'ನಿನ್ನವ್ವೆ, ಹೂವಿನಷ್ಟು ಮೃದು ಬಿಟ್ಟಿಯಣ್ಣ ಕೈ ಸೋಕಿದರೂ ಬಾಡಿ ಹೋಗುವ ಪಾರಿಜಾತದಂಥವಳು. ನಾನು ಸರಿದು ಕೂತುಕೊ ಎಂದು ಹೇಳಿದಷ್ಟೇ ಸಾಕಾಯಿತು ಆಕೆಗೆ, ಕಣ್ಣಲ್ಲಿ ತಟಕ್ಕನೆ ನೀರು ತುಂಬಿತು.'

'ಬೆಟ್ಟದ ಗಾಳಿ ತುಂಬಾ ಛಳಿಯೆಂದು, ನಿಮ್ಮ ಹತ್ತಿರ ಕುಳಿತದ್ದರಿಂದ ನಿಮ್ಮ ಆನಂದಕ್ಕೆ ಭಂಗವಾಯಿತೇನೊ. ಹೋಗಲಿ ಬಿಡಿ-ನನ್ನಿಂದ ನಿಮಗೇಕೆ ತೊಂದರೆಯಾಗಬೇಕು. ರಥ ನಿಲ್ಲಿಸಲು ಹೇಳಿ ನನ್ನನ್ನು ಅತ್ತೆಯವರಿರುವ ರಥಕ್ಕೇ ಕಳಿಸಿಬಿಟ್ಟು ನೀವು ಹಾಯಾಗಿರಿ'

—ಎಂದಳು ಸ್ವಲ್ಪದೂರ ಸರಿದುಕುಳಿತು.

’ಆಕೆ ಒಂದುಗಳಿಗೆ ಹಾಗೆ ಕುಳಿತುಕೊಳ್ಳಲಿ ಎಂದು ಸ್ವಲ್ಪಹೊತ್ತು ನಾನೂ ಸುಮ್ಮನಿದ್ದೆ. ಎಲ್ಲಿ ಹಕ್ಕಿ ಕೂಗಲಿ, ಎಲೆ ಸರಿಯಲಿ-ಗಳಿಗೆಗೊಮ್ಮೆ ಆಕೆಯ ಮೈ ನಡುಗುತ್ತಿತ್ತು. ಆ ಭಯ ಕಣ್ಣಿನಲ್ಲಿ ನೀರಾಗಿ ಹರಿಯುತ್ತಿತ್ತು. ತಾವರೆಯಂಥ ಮುಖ ನೈದಿಲೆಯಂತೆ ಬಿಳುವಾದರೂ, ಆಕೆ ತನಗೆ ಭಯ ಎನ್ನಲಿಲ್ಲ ನನ್ನ ಹತ್ತಿರ ಸರಿಯಲೂ ಇಲ್ಲ. ತನ್ನೊಳಗೇ ತಾನು ಹುದುಗಿಕೊಂಡು, ನನಗೆ ಕಾಣದಂತೆ ಕಣ್ಣೀರನ್ನು ಒರೆಸಿಕೊಳ್ಳುತ್ತಾ, ಆಗಾಗ ನಡುಗುತ್ತಾ ಕುಳಿತಿದ್ದಳು. ಏಚಲೆಯ ಭಯ, ಬಿಗುಮಾನವನ್ನು ಕಂಡು ನನಗೇ ಕರುಳು ಹಿಸಿಕಿದಂತಾಯಿತು. ಆಕೆಯ ಕಣ್ಣಿಗೆ ಕಾಡುಕಾಣಿಸದಂತೆ, ರಥ ಪಾರ್ಶ್ವದ ತೆರೆಯನ್ನು ಎಳೆದು, ಬಲವಂತವಾಗಿ ನನ್ನ ಹತ್ತಿರಳ್ಳೆ ಎಳೆದುಕೊಂಡು, ಕೂರಿಸಿಕೊಂಡೆ ಆಗ ಆಕೆಗೆ ಭಯ ತಪ್ಪಿದರೂ, ಬಿಗುಮಾನ ತಪ್ಪಲಿಲ್ಲ.

’ನನಗೇನೂ ಛಳಿಯೂ ಇಲ್ಲ, ಭಯವೂ ಇಲ್ಲ, ತೆರೆಯನ್ನೇಕೆ ಹಾಕಿದಿರಿ. ನಿಮ್ಮ ಪಾಡಿಗೆ ನೀವು ಹಾಯಾಗಿ, ಕಾಡು ನೋಡುತ್ತಾ ಕುಳಿತುಕೊಳ್ಳಿ’

—ಎಂದಳು, ಅಷ್ಟು ಹೊತ್ತು ತನ್ನನ್ನು ದೂರ ಕೂಡಿಸಿದ ನನ್ನ ಮೇಲಿನ ಮುನಿಸಿನಿಂದ, ನಾನು ಹತ್ತಿರ ಎಳೆದರೂ ದೂರವಾಗಲು ಯತ್ನಿಸಿ

’ನಿಜ, ನಿಜ, ನಿನಗೆ ಛಳಿಯೂ ಇಲ್ಲ, ಭಯವೂ ಇಲ್ಲ. ಅದೆಲ್ಲವೂ ಬಾಧಿಸುತ್ತಿರುವುದು ನನ್ನನ್ನೇ.’

—ಎಂದ ಮೇಲೆ ನನ್ನ ಬಲವಂತಕ್ಕೆ ನನ್ನ ಬಳ ಕುಳಿತವಳಂತೆ ಕುಳಿತಿದ್ದಳು- ನನ್ನ ಕೈಯನ್ನು ಬಿಗಿಯಾಗಿ ಹಿಡಿದು. ರಥವನ್ನು ನಡೆಸುವ ಸಾರಥಿ ಇಲ್ಲದಿದ್ದಲ್ಲಿ, ನಿನ್ನವ್ವೆ ನನ್ನ ಮೈಯಲ್ಲೇ ಅಡಗಿ ಬಿಡುತ್ತಿದ್ದಳೋ ಏನೊ, ಆಕೆಗೆ ಕಾಡು ಕಂಡು ಅಷ್ಟು ಭಯವಾಗಿತ್ತು.

ಆ ಭಯ, ಶ್ರೀ ಪೀಠದ ಸೇವೆ ಮುಗಿಸಿಕೊಂಡು, ದ್ವಾರಸಮುದ್ರಕ್ಕೆ ಹಿಂದಿರುಗಿದ ಬಳಿಕವೂ ನಿನ್ನವ್ವೆಯನ್ನು ಬಿಡಲಿಲ್ಲ. ಆಗಾಗ, ಮಲಗಿದ್ದಾಗ, 'ಕಾಡು... ಹುಲಿ, ಹಾವು' ಎಂದು ಕಳವಳಿಸಿಕೊಂಡು ಏಳುತ್ತಿದ್ದಳು.

'ಈಗಲೂ ಹಾಗೇ-ಒಂದು ತೋಳಲ್ಲಿ ಉದಯಾದಿತ್ಯ, ಇನ್ನೊಂದು ತೋಳಲ್ಲಿ ವಾಸನ್ತಿಕೆಯನ್ನು ತಬ್ಬಿಕೊಂಡು ಕುಳಿತಿರಬೇಕು ನಿನ್ನವ್ವೆ. ಆಕೆಗೆ ಕಾಡೆಂದರೆ ಅಷ್ಟು ಭಯ.'

—ಎಂದು ಎರೆಯಂಗದೇವ ಏಚಲಾದೇವಿಗೆ ಮಾಡಿಸಿದ ವನಪ್ರಯಾಣದ ಕಥೆ ಹೇಳಿದ.

ತಂದೆಯ ನಗೆ, ಉತ್ಸಾಹದೊಂದಿಗೆ ತಾನೂ ಬೆರತು ಆ ಕಥೆಯನ್ನು ಕೇಳಿದ ವಿಷ್ಣುವರ್ಧನ—

'ಹಾಗಾದರೆ ದತ್ತಾತ್ರೇಯರ ಪೀಠಕ್ಕೆ ಹೋಗಿ ಬಂದ ಮೇಲೇನೇ ನಾವು ಹುಟ್ಟಿದ್ದು ಅಪ್ಪಾಜಿ?'

—ಎಂದು ಕೇಳಿದ

'ಹೂ.'

'ಅಂತೂ ಅವ್ವೆಯನ್ನು ತುಂಬಾ ಬಳಲಿಸಿ ಹುಟ್ಟಿದವರು ನಾವು'

—ಎಂದು ತಾನೂ ಏನೋ ಜ್ಞಾಪಿಸಿಕೊಂಡು-

'ಅಪ್ಪಾಜಿ...'

—ಎಂದು, ಗತಕಾಲದ ನೆನಪಿನಲ್ಲಿ ಮೈ ಮರೆತ ತಂದೆಯನ್ನು ಕರೆದ.

'ಏನು?'

—ಕನಸಿನಾಳದಿಂದ ಎಚ್ಚರವಾಗುತ್ತಾ ಕೇಳಿದ ಎರೆಯಂಗದೇವ.

'ಅಂದರೆ—ನಾವೆಲ್ಲಾ ದತ್ತಾತ್ರೇಯರ ಅನುಗ್ರಹದಿಂದ ಜನಿಸಿದವರು ಅಲ್ಲವೇ ಅಪ್ಪಾಜಿ?'

'ನಿಜ-ಅದರಲ್ಲಿ ಏನೂ ಸಂಶಯವಿಲ್ಲ'

'ಹಾಗಾದರೆ.. ಹಾಗಾದರೆ..'

—ಏನೋ ಮಾತು ಕೇಳಲು ಹೊರಟು, ಹಿಂಜರಿದು ನಡುವೆಯೇ ತಡೆದು ಹೇಳಿದ ವಿಷ್ಣುವರ್ಧನ

'ಅದೇನು—ಕೇಳು—ಬಿಟ್ಟೆಯಣ್ಣ?'

'ನಾನು ಕೇಳುವುದು ಉಚಿತವೋ ಅಲ್ಲವೋ'

'ಚಿಂತೆಯಿಲ್ಲ ಕೇಳು?'

'ಶ್ರೀ ಪೀಠದ ಅನುಗ್ರಹದಿಂದ ಜನಿಸಿದ ಅಣ್ಣಾಜಿಯನ್ನು, ಈ ಕೊನೆಗಾಣದ ವ್ಯಾಧಿ ಕಾಡುತ್ತಿರುವುದೇಕೆ ಅಪ್ಪಾಜಿ? ಮಗನನ್ನು ಕರುಣಿಸಿದ ಭಗವಂತನಿಗೆ, ಆರೋಗ್ಯ ದೃಢಕಾಯನಾದವನನ್ನು ಅನುಗ್ರಹಿಸುವ ಮನಸ್ಸಾಗಲಿಲ್ಲವೇ? ತನ್ನ ಕೃಪೆಯಿಂದ ಜನಿಸಿದಾತ, ಹೀಗೆ ವ್ಯಾಧಿಪೀಡಿತನಾಗಿ ಬಳಲುವುದೇ ಆತನಿಗೆ ಪ್ರಿಯವಾಗಿದೆಯೇ? ಅಥವಾ ಅವ್ವೆಯ ಸೇವೆಯಲ್ಲೇನಾದರೂ ಲೋಪವಾಯಿತೆ?'

—ಆಗಾಗ ಉಲ್ಬಣಿಸುವ ವ್ಯಾಧಿಯಿಂದ ಬಳಲುವ ತನ್ನ ಅಣ್ಣ ಬಲ್ಲಾಳನನ್ನು ಜ್ಞಾಪಿಸಿಕೊಂಡು ಕೇಳಿದ ವಿಷ್ಣುವರ್ಧನ.

ಮಗನ ಪ್ರಶ್ನೆಯನ್ನು ಕೇಳಿ, ತನ್ನ ಗತಜೀವನ ಸ್ಮರಣೆಯಿಂದ ಪ್ರಫುಲ್ಲವಾಗಿದ್ದ ಎರೆಯಂಗದೇವನ ಮುಖ, ಹೊಗೆ ಸೋಕಿದ ಹೂವಿನಂತಾಯಿತು

'ಇಲ್ಲ...ಇಲ್ಲ. .ಬಿಟ್ಟಿಯಣ್ಣ, ನಿನ್ನ ಆಣ್ಣನ ರೋಗ ನಿನ್ನ ಅವ್ವೆಯ ಸೇವೆಯಲ್ಲಿ ಲೋಪವಾದುದರ ಫಲವಲ್ಲ ನನ್ನ ಅಪರಾಧ ಪರಿಣಾಮ'

—ಎಂದ ಎರೆಯಂಗದೇವ, ಉಲ್ಲಾಸವಡಗಿ ಬಹು ಭಾರವಾದ ಧ್ವನಿಯಿಂದ ತಂದೆಯ ಮಂಕು ಕವಿದ ಮಾತನ್ನು ಕೇಳಿ ವಿಷ್ಣುವರ್ಧನನಿಗೆ, ಥಳಥಳಿಸುತ್ತಿದ್ದ ಬಿಸಿಲು ತಟಕ್ಕನೆ ಅಡಗಿ, ಸೋನೆಮಳೆಯ ಛಳಿ-ಮಬ್ಬು ಕವಿದಂತಾಯಿತು

'ಅದೇನು ಅಪ್ಪಾಜಿ—ಹಾಗೇಕೆ ಹೇಳುತ್ತೀರ?'

—ಎಂದು ಕಾತರನಾಗಿ ಕೇಳಿದ

'ನಿಜ ಬಿಟ್ಟಿಯಣ್ಣ— ಬಲ್ಲಾಳ ಅನುಭವಿಸುತ್ತಿರುವ ವ್ಯಾಧಿ, ಅವನಿಂದ ನಿನ್ನವ್ವೆ ಅನುಭವಿಸುತ್ತಿರುವ ಯಾತನೆ, ಹಿರಿಯ ಮೊಮ್ಮಗನ ರೋಗದಿಂದ ಅಪ್ಪಾಜಿ ಅನುಭವಿಸುತ್ತಿರುವ ಕೊರಗು—ಎಲ್ಲದಕ್ಕೂ ನಾನೇ ಕಾರಣ. ನನ್ನ ಬಾಯ ದುಡುಕಿನ ಫಲ ಇದೆಲ್ಲಾ.'

—ಎಂದ ಎರೆಯಂಗದೇವ, ತನ್ನ ಮಾತಿನ ಚಮ್ಮಟಿಗೆಯ ಏಟಿನಿಂದಲೇ ತನ್ನನ್ನು ದಂಡಿಸಿಕೊಳ್ಳುತ್ತಿರುವವನಂತೆ.

ಆತನ ಮಾತಿನ ರೀತಿ ಮನವರಿಕೆಯಾಗಿ, 'ಅದೇನು, ಹಾಗೇಕೆ?' ಎಂದು ಕೇಳಬೇಕೆಂದಿದ್ದ ವಿಷ್ಣುವರ್ಧನನ ಉತ್ಸಾಹ ಉಡುಗಿ ಹೋಯಿತು.

'ಹೋಗಲಿ ಬಿಡಿ, ಅಪ್ಪಾಜಿ ಹಿಂದಿನ ಮಾತೆಲ್ಲಾ ನೆನಸಿಕೊಂಡು ಏನು ಫಲ?' —ಎಂದು ತಂದೆಯನ್ನು ಸಂತೈಸಲು ಯತ್ನಿಸಿದ.

'ನನ್ನ ಪರಾಕ್ರಮನನ್ನೇ ಕೊಚ್ಚಿಕೊಳ್ಳುವ ನೂರು ಕಥೆ ಕೇಳಿದೀಯ ಬಿಟ್ಟಿಯಣ್ಣ ಇದೊಂದನ್ನು ನಿನ್ನಿಂದ ಮರೆಮಾಚುವುದೇಕೆ? ಇದೂ ಕೇಳಿಬಿಡು...'

—ಎಂದ ಎರೆಯಂಗದೇವ

'ನಿಮ್ಮ ಮನಸ್ಸಿಗೆ ಬೇಸರವಾಗುವಂಥದು ಯಾವುದನ್ನೂ ಹೇಳಬೇಡಿ ಅಪ್ಪಾಜಿ. ಅಂಥಹ ಮಾತನ್ನು ಕೇಳುವುದಕ್ಕಿಂತ ಮರೆಯುವುದೇ ಲೇಸು'

'ಹಾಗಲ್ಲ ಬಿಟ್ಟಿಯಣ್ಣ, ನಮ್ಮ ತಪ್ಪನ್ನು ನಾವು, ಅಚಾತುರ್ಯವಾದ ಬಳಿಕ 'ಮರೆಯುವುದುಲೇಸು' ಎಂದು ಮುಚ್ಚಿಟ್ಟುಕೊಂಡರೆ ಅದರಿಂದ ಬೇರೆಯವರು ಪಾಠಕಲಿಯುವುದು ಹೇಗೆ? ನನ್ನಿಂದ ಆದಂಥ ತಪ್ಪು ಬೇರೆ ಯಾರಿಂದಲೂ ಆಗಬಾರದು. ಹೇಳುತ್ತೇನೆ. ಅಲ್ಲದೆ ಅದು ನಿನಗೆ ತಿಳಿದಿರುವುದೂ ಒಳಿತು.'

—ಎಂದು ತಾನೇ ಆ ವಿಷಯವನ್ನು ತಿಳಿಸಲು ಮುಂದಾದ ಎರೆಯಂಗದೇವ. 'ಹೇಳುವುದರಿಂದ ನಿಮ್ಮ ಮನಸ್ಸಿಗೆ ಅಷ್ಟು ಶಾಂತಿ ಸಿಗುವುದಾದರೆ ಹೇಳಿ, ಅಪ್ಪಾಜಿ'

* * * * * *

'ಶ್ರೀ ದತ್ತಾತ್ರೇಯ ಪೀಠಕ್ಕೆ ಸೇವೆಗೆ ಹೊರಟಾಗ ನಿನ್ನ ತಾಯಿಗಿದ್ದ ಭಯವನ್ನು ಹೇಳಿದೆನಲ್ಲ. ಆಕೆಯ ಭಯ ನನ್ನ ಪಾಲಿಗೆ ಹುಡುಗಾಟವಾಗಿತ್ತು. ಹಾದಿಯಲ್ಲಿ ಆ ಭಯವನ್ನೇ ನೆಪಮಾಡಿಕೊಂಡು ಅಕೆಯೊಂದಿಗೆ ಸರಸವಾಡಿದುದು ನನಗೆ ಸಾಕಾಗಿರಲಿಲ್ಲ ಪೀಠದ ಬಳಿ ಬಂದ ಬಳಿಕಲೂ ಆ ಉತ್ಸಾಹ ತಗ್ಗಿರಲಿಲ್ಲ. ಶ್ರೀ

ಪೀಠವಿರುವುದು ಆ ಮಲೆಯ ಕೋಡಿನಲ್ಲಿರುವ ಗವಿಯಲ್ಲಿ. ಅದರ ಬಳಿಯ ಮಾಣಿಕ್ಯಧಾರೆಯಲ್ಲಿ ಸ್ನಾನ ಮಾಡಿ, ಸೇವೆಗೆ ಹೊರಡುವ ಹೊತ್ತಿನಲ್ಲಿ—

'ಏಚಲೆ-ಒಂದು ಮಾತು ನಿನಗೆ ಗೊತ್ತಿದೆಯೇ?'

—ಎಂದು ಕೇಳಿದೆ.

'ಏನು?'

—ಎಂದು ಕೇಳಿದಳಾಕೆ.

'ಶ್ರೀ ಗುರುಗಳು ಆ ಗವಿಯಲ್ಲಿ ಶಿಲಾರೂಪವಾಗಿರುವುದಷ್ಟೇ ಅಲ್ಲ, ವ್ಯಾಘ್ರ ರೂಪವಾಗಿಯೂ ವಾಸ ಮಾಡಿಕೊಂಡಿದಾರಂತೆ. ಆಗಾಗ ಯಾರಾದರೂ ಸಾಧಕರಿಗೆ ಆ ರೂಪದಲ್ಲಿ ದರ್ಶನ ಕೊಡುತ್ತಾರಂತೆ-ನಿನಗೂ ಹಾಗೇ ದರ್ಶನವಾಗಬಹುದು. ದೇವರು ಹುಲಿಯಾಗಿ ಬಂದರೆ ಏನು ಮಾಡುತ್ತೀಯ?'

—ಎಂದೆ ನಾನು ನಗುತ್ತಾ.

ನಾನು ಆ ಮಾತನ್ನು ಯಾವ ಗಳಿಗೆಯಲ್ಲಿ ಹೇಳಿದೆನೋ ಏನೋ. ನಿನ್ನ ತಾಯಿಯ ಮನಸ್ಸಿನಲ್ಲಿ ಆ ಭಯ ಉಳಿದು ಹೋಯಿತು. ಕತ್ತಲು ತುಂಬಿದ ಗುಹೆಯೊಳಗೆ ಹೋಗಿ, ಶ್ರೀ ಪಾದಗಳ ಅರ್ಚನೆ ಮಾಡುತ್ತಿದ್ದಾಗ, ಆಗಾಗ ಸುತ್ತಲೂ ನೋಡುತ್ತಿದ್ದ ಏಚಲೆ, ಒಮ್ಮೆ ಇದ್ದಕ್ಕಿದ್ದ ಹಾಗೆ ಪೂಜೆಯನ್ನು ಬಿಟ್ಟು, ಗಡ ಗಡ ನಡುಗಲಾರಂಭಿಸಿದಳು. ಆಕೆ ನಡುಗಿದ್ದನ್ನು ನೋಡಿ ನನಗೂ ಭಯವಾಯಿತು. 'ಏನು ಏನಾಯಿತು?' ಎಂದು ಕೇಳಿದೆ. 'ಅಗೋ.. ಅಗೋ.. ಹುಲಿ' ಎಂದಳು ನಿನ್ನವ್ವೆ ತೊದಲುತ್ತಾ, 'ಹುಲಿಯ ಕಣ್ಣು ಹೇಗೆ ಹೊಳೆಯುತ್ತಿದೆ… ನನ್ನನ್ನೇ ನೋಡುತ್ತಿವೆ...' ಎಂದಳು ಏಚಲೆ. ಆಕೆ ಕೈತೋರಿದ ಕಡೆ ನೋಡಿದೆ. ಅಲ್ಲಿ ಹೊಳೆಯುತ್ತಿದ್ದುದು ಹುಲಿಯ

ಕಣ್ಣಿಲ್ಲ, ಯಾವುದೋ ಕಗ್ಗಲ್ಲ ಬಿರುಕಿನೊಳಗೆ ನುಸುಳಿದ ರವಿ ರಶ್ಮಿ ಹಾಗೆಂದೇ ನಾನು ಹೇಳಿದರೂ ಆಕೆಗೆ ನಂಬಿಕೆಯಾಗಲಿಲ್ಲ. ಆ ಬಿರುಕಿಗೇ ಕೈಯಿಟ್ಟು ತೋರಿಸಿದರೂ 'ಅಲ್ಲ, ಹುಲಿಯೇ ಕುಳಿತಿತ್ತು. ನೀವು ಹತ್ತಿರ ಬಂದಾಗ ಅದು ಹೊರಟು ಹೋಗಿರಬೇಕು' ಎಂದೇ ಹೇಳಿದಳು.

'ಆ ಭಯದಲ್ಲಿ ನಡುಗುತ್ತಲೇ ಪೂಜೆ ಮಾಡಿ ಮುಗಿಸಿದಳು.

'ಈ ವಿಷಯ ನಮ್ಮಿಬ್ಬರಿಗೆ ವಿನಾ ಬೇರಾರಿಗೂ ತಿಳಿದಿರಲಿಲ್ಲ. ಬೆಟ್ಟದಿಂದ ಹಿಂದಿರುಗಿ ಬಂದ ಬಳಿಕಲೂ ನಿನ್ನವ್ವೆ, ಆಗಾಗ ನಿದ್ರೆಯಲ್ಲಿ ಬೆಚ್ಚಿ ಬಿದ್ದು ಕನವರಿಸಿಕೊಳ್ಳುತ್ತಿದ್ದಳು ಎಂದು ನಾನಾಗಲೇ ಹೇಳಲಿಲ್ಲವೇ? ನಾನು ಅದನ್ನು ಹೆಣ್ಣು ಭಯ ಎಂದು ನಕ್ಕು ಮರೆತೆ. ನಿನ್ನವ್ವೆಯೂ ಯಾರ ಮುಂದೂ ಹೇಳಲಿಲ್ಲ. ನನಗೆ ನಗು, ಅಕೆಗೆ ನಾಚಿಗೆ, ಇಬ್ಬರೂ ಹಾಗೇ ಇದ್ದು ಬಿಟ್ಟೆವು. ಅಷ್ಟು ದಿನ ಆದ ಬಳಿಕ, ನಿನ್ನವ್ವೆ ಗರ್ಭಧರಿಸಿ ಬಲ್ಲಾಳನ ತಾಯಿಯಾದಳು. ಅಪರೂಪಕ್ಕೆ ಸಂತಾನ- ಅದೂ ಪುತ್ರ ಸಂತಾನವಾದ ಸಂತೋಷದಲ್ಲಿ ನಮಗೆ ಸಾಮ್ರಾಜ್ಯ ಲಾಭವಾದಷ್ಟು ಹರ್ಷವಾಗಿತ್ತು. ನಿನ್ನ ಅಜ್ಜಿಯನ್ನಂತೂ ಹಿಡಿಯುವವರೇ ಇರಲಿಲ್ಲ. ಆದರೆ ಆ ಆನಂದ ಬಹು ದಿನ ಉಳಿಯಲಿಲ್ಲ. ಬಲ್ಲಾಳ ಹುಟ್ಟಿದ ಕೆಲವು ದಿನಕ್ಕೇ ಈ ವ್ಯಾಧಿ ಕಾಣಿಸಿಕೊಂಡಿತು. ತೊಟ್ಟಿಲಲ್ಲಿ ಮಲಗಿದ ಮಗು ಇದ್ದಕ್ಕಿದ್ದ ಹಾಗೇ ಮೆಟ್ಟಿ ಬಿದ್ದು ಹೆದರಿ ಚೀರುವುದು; ಆ ಕೂಗು ಅಡಗುತ್ತಿದ್ದ ಹಾಗೇ ಛಳಿಜ್ವರ ಆರಂಭವಾಗುವುದು. ಇದನ್ನು ಕಂಡು ನಿನ್ನ ಅವ್ವೆ, ಅಜ್ಜಿ ಗಾಬರಿಯಾಗಿ ಹೋದರು. ನೂರಾರುಜನ ವೈದ್ಯರು ಬಂದು ಚಿಕಿತ್ಸೆ ಮಾಡಿದರು, ಏನೇನೋ ಪೂಜೆ ಪುನಸ್ಕಾರಗಳಾದುವು. ಏನಾದರೂ ಈ ರೋಗ ನಿಲ್ಲಲಿಲ್ಲ. ಕಡೆಗೆ 'ಇದಕ್ಕೇನು ಕಾರಣ? ಇದು ಏತರ ಕಾಟ?' ಎಂದು ತಿಳಿಯಲು ನಿನ್ನ ಅಜ್ಜಿ ಮತ್ತೆ ತೇಜೋರಾಶಿ ಪಂಡಿತರನ್ನೇ ಅರಮನೆಗೆ ಬರಮಾಡಿದಳು. ಅವರು ನಿನ್ನವ್ವೆಯ ತೊಡೆಯ ಮೇಲಿದ್ದ ಬಲ್ಲಾಳನನ್ನು ಇಸಿದುಕೊಂಡು, ತಮ್ಮ ತೊಡೆಯಮೇಲೆ

ಮಲಗಿಸಿಕೊಂಡು, ಅವನ ಮೈ ಕೈ ನೇವರಿಸಿ, ಏನೋ ಧ್ಯಾನಿಸಿ, ಏನು ಹೇಳುವರೋ ಎಂದು ಕಾತರಳಾಗಿ ತಮ್ಮ ಕಡೆಯೇ ನೋಡುತ್ತಿದ್ದ ಏಚಲೆಯ ಕಡೆ ತಿರುಗಿ—

'ಪೀಠದಲ್ಲಿ ಸೇವೆ ಸಮರ್ಪಕವಾಗಿ ನಡೆಯಿತೆ? ಏನೂ ಲೋಪವಾಗಲಿಲ್ಲವೇ?'—ಎಂದು ಕೇಳಿದರು.

'ಇಲ್ಲ. ನಾನೂ ಜೊತೆಯಲ್ಲೇ ಇದ್ದೆ ಯಾವ ಲೋಪಕ್ಕೂ ಅವಕಾಶವಾಗದಂತೆ, ಕ್ರಮವಾಗಿ ಅರ್ಚನೆ ನಡೆಯಿತು.'

—ಎಂದು ನಮ್ಮೆಲ್ಲರ ಪರವಾಗಿ ಅವ್ವೆಯೇ ಹೇಳಿದಳು.

'ಕೆಲವು ವೇಳೆ ಲೋಪ ಕಂಡಹಾಗೆ ಆಗಬಹುದು; ಎಷ್ಟೋ ವೇಳೆ ನಮಗೆ ತಿಳಿಯದಂತೆಯೇ ಅಚಾತುರ್ಯ ನಡೆಯಬಹುದು'

—ಎಂದರು ಗುರುಗಳು.

ಗುರುಗಳು ಹೇಳಿದುದನ್ನು ಕೇಳಿ, ಮೊಮ್ಮಗನ ವ್ಯಾಧಿಯಿಂದ ಪ್ರಕ್ಷುಬ್ಧಳಾದ ನಿಮ್ಮ ಅಜ್ಜಿಗೆ ದೇವರ ಮೇಲೇ ಬೇಸರ ಬಂದಿತು.

'ಇದೇನು ಮಾತು ಗುರುಗಳೇ, ನಾವು ಕಂಡು, ತಿಳಿದು ಏನಾದರೂ ಅಪಚಾರ ಮಾಡಿದರೆ ಅವಕ್ಕೆ ದಂಡ, ದೋಷ ವಿಧಿಸುವುದು ಸರಿ ನಾವು ಎಷ್ಟೆಂದರೂ ಮನುಷ್ಯ ಮಾತ್ರದವರು ಕಣ್ಣು ತೆರೆದುಕೊಂಡು ನಡೆಯುವಾಗಲೇ ಎಡಹುವ ಜನ. ಹಾಗಿರುವಾಗ ಏನೂ ತಿಳಿಯದೆ ತಪ್ಪಾದರೆ, ಅದನ್ನು ಕ್ಷಮಿಸುವಷ್ಟು ಪ್ರೇಮವೂ ಭಗವಂತನಿಗಿಲ್ಲವೇ–ನಮ್ಮಲ್ಲಿ? ಕಂಡದ್ದಕ್ಕೆ, ಕಾಣದ್ದಕ್ಕೆ ಎಲ್ಲದಕ್ಕೂ ಶಿಕ್ಷೆ ವಿಧಿಸಲೇ ಬೇಕೆಂಬಷ್ಟು ನಿಷ್ಠೂರಿಯೇ ಆ ದೇವರು? ಹಾಗೂ ಶಿಕ್ಷೆ ವಿಧಿಸುವುದಾದರೆ, ನಮಗೆ ವಿಧಿಸಬೇಕು. ಅದನ್ನು ಬಿಟ್ಟು,

ಯಾವ ಪಾಪವನ್ನೂ ಕಾಣದ, ಈ ಹಸುಳೆಗೆ ಅನುಭವಿಸಲಾರದಂಥ ರೋಗ ಕೊಟ್ಟು ಬಳಲಿಸುವ ಛಲ ಬುದ್ಧಿ ಎಲ್ಲಿಯ ನ್ಯಾಯ?'

—ಎಂದು ಕೇಳಿದಳು.

ಆಕೆ ಆ ಮಾತುಗಳನ್ನು ಆಡಿದ ರೀತಿಯನ್ನು, ದೇವರ ರಚನೆಯಲ್ಲೇ ದೋಷ ಕಾಣುವ ಆಕೆಯ ಮಾತನ್ನು ಕೇಳಿ ನನಗೇ ಮೈ ನಡುಗಿತು. ಏಚಲೆಯಂತೂ ಭಯದಿಂದ ನಡುಗುತ್ತಾ ಗುರುಹಿರಿಯರ ಎದಿರು ಅತ್ತೆಯನ್ನು ಪ್ರಶ್ನಿಸಬಾರದೆಂಬ ವಿನಯವನ್ನು ಮರೆತು-

'ಅತ್ತೆ, ಅತ್ತೆ ...ಇಡೇನು ಮಾತಾಡಿ ಪಾಪ ಕಟ್ಟಿಕೊಳ್ಳುತ್ತಿದ್ದೀರ. ಯಾವ ಜನ್ಮದಲ್ಲಿ ನಾನೇನು ಪಾಪ ಮಾಡಿದ್ದೆನೋ, ಈಗ ಆದರ ದಂಡ ತೆರುತ್ತಿದ್ದೇನೆ. ಅದರ ಫಲವೇನಿದ್ದರೂ ನನಗಿರಲಿ ನೀವೇಕೆ ಅದರ ಸೋಂಕು ಬೆರೆಸಿಕೊಳ್ಳುತ್ತೀರ?'

—ಎಂದಳು

ಆ ಅತ್ತೆ ಸೊಸೆಯರ ಮಾತನ್ನು ಕೇಳಿದ ಗುರುಗಳು ನಕ್ಕು—

'ಆಡಲಿ ತಾಯಿ. ತಪ್ಪೇನೂ ಇಲ್ಲ. ಮನುಷ್ಯರ ಸುಖದುಃಖಗಳೆರಡೂ ವಾಗ್ರೂಪವಾಗಿ ಹೊರಬಂದು ಮುಗಿಯಬೇಕೆಂಬುದು ಭಗವಂತನ ನಿಯಮ. ಅದರಲ್ಲಿ ದೋಷವೇನೂ ಇಲ್ಲ.'

—ಎಂದು ಏಚಲೆಗೆ ಹೇಳಿ, ಅವ್ವೆಯ ಕಡೆ ತಿರುಗಿ-

'ತಾಯಿ, ಭಗವಂತ ನೀನೆಣಿಸಿರುವಷ್ಟು ನಿಷ್ಠೂರಿಯೂ ಅಲ್ಲ, ನಾನು ಬಯಸುವಷ್ಟು ದಯಾಮಯನೂ ಅಲ್ಲ. ಕ್ರೋಧ, ಮೋಹ, ಮದ, ವಾತ್ಸಲ್ಯಗಳು

ಪಂಚೇಂದ್ರಿಯ ದೋಷ ಸಂಜನಿತವಾದುವು. ಇವುಗಳ ಕಾಟ ಪಶುಮಾನವನಿಗೇ ಹೊರತು, ಇಂದ್ರಿಯಾತೀತನಾದ ಪಶುಪತಿಗಲ್ಲ..'

—ಎಂದರು. ಅವರು ಮಾತು ಮುಗಿಸುವ ಮೊದಲೇ ನಿನ್ನ ಅಜ್ಜಿ-

'ಹಾಗಿದ್ದರೆ ನನ್ನ ಮೊಮ್ಮಗನಿಗೇಕೆ ಈ ರೋಗದ ಉಪದ್ರವ? ಇದಕ್ಕೇನು ಕಾರಣ?'

—ಎಂದು ಪ್ರಶ್ನೆ ಮಾಡಿದಳು.

'ಕಾರಣವಿದೆ. ಕಾರಣವಿಲ್ಲದೆ ಕಾರ್ಯವಿಲ್ಲ. ಅಖಂಡ ಪೃಥ್ವೀ ಚಕ್ರದ ಭ್ರಮಣೆಗೂ, ಈ ಕಾರ್ಯ-ಕಾರಣ ಶಕ್ತಿಯೇ ಪ್ರಚೋದನೆ ಅದಿಲ್ಲದೆ ಏನೂ ನಡೆಯುವುದಿಲ್ಲ, ಸೂರ್ಯ ಉರಿಯದೆ ನೀರು ಕಾಯುವುದಿಲ್ಲ, ನೀರು ಕಾಯದೆ ಮೋಡವಾಗುವುದಿಲ್ಲ ಮೋಡ ಕಟ್ಟದೆ ಮಳೆಯಿಲ್ಲ-ಹಾಗೇ ಎಲ್ಲ ಕಾರ್ಯಕ್ಕೂ ಕಾರ್ಯದ ಹಿಂದಿನ ಕಾರಣವನ್ನು ಕಾಣದ, ಅನುಕೂಲವಾದರೆ ಹಿಗ್ಗುವುದು, ಅನಾನುಕೂಲವಾದರೆ ಕುಗ್ಗುವುದು ಮಾನವನ ಸ್ವಭಾವ. ಮೊಮ್ಮಗನಾದ-ನಿನಗೆ ಸಂತೋಷವಾಯಿತು; ಅವನು ವ್ಯಾಧಿಗ್ರಸ್ತನಾದ-ದುಃಖವಾಯಿತು. ಮಗುವನ್ನು ಕರುಣಿಸಿದ ಭಗವಂತನ ಮೇಲೇ ಸಿಟ್ಟಾಗಬೇಕು ಎನ್ನಿಸಿತು. ಇದು ನಮ್ಮ ಮನೋದೌರ್ಬಲ್ಯದ ಪರಿಣಾಮ. ಸಮಾಧಾನವಾಗಿ ಕುಳಿತು, ಸಹಜ ದೌರ್ಬಲ್ಯವನ್ನು ನಿಗ್ರಹಿಸಿ ಆಲೋಚನೆ ಮಾಡಿದಾಗ ಇವಿಷ್ಟೂ ನಮಗೇ ತೋಚುತ್ತದೆ. ಆದರೆ ವಿವೇಚನೆಯ ಕಣ್ಣನ್ನು ಮೋಹದ ಕಾವಳ ಕವಿದಾಗ, ಎಲ್ಲವೂ ಮರೆತು ಭ್ರಮೆಯೇ ಸತ್ಯವಾಗಿ ತೋರುತ್ತದೆ. ಗಾಳಿಗೆ ಹುಲ್ಲು ಅಲುಗಿ, ಮರಿ ಬೆಚ್ಚಿದಾಗ ಶತ್ರುವೇ ಬಂದನೇನೋ ಎಂದು ಅಬ್ಬರಿಸುವ ಹುಲಿಯಂತೆ ನಾವೂ ಅಬ್ಬರಿಸುತ್ತೇವೆ. ಇದರಲ್ಲಿ ಆ

ಪಶು, ಈ ಮಾನವ ಇಬ್ಬರೂ ಸಮಾನರು. ಈ ಅಂಧಕಾರವನ್ನು ಗೆದ್ದವರಿಗೇ ಅಂಧಕಾರಿ ತಾಂಡವೇಶ್ವರನ ದರ್ಶನವಾಗುವುದು'

—ಎಂದು ಹೇಳಿದರು.

'ನಿಮ್ಮ ಮಾತು ನಿಜವಾದರೆ, ಎಲ್ಲೋ ಏನೋ ಕೊಂಚ ದೋಷವಾಯಿತೆಂದು, ಹಸುಳೆಯನ್ನಿಷ್ಟು ಬಳಲಿಸಬಹುದೇ ನಿಮ್ಮ ಭಗವಂತ?'

—ಗುರುಗಳ ತರ್ಕದಿಂದ ಮನಸ್ಸಿಗೆ ಸಮಾಧಾನವಾಗದೆ ಕೇಳಿದಳು ಅವ್ವೆ

ಆಕೆಯ ಪ್ರಶ್ನೆಯನ್ನು ಕೇಳಿದ ಗುರುಗಳು ಒಂದು ಗಳಿಗೆ ಸುಮ್ಮನಿದ್ದು ಏನೋ ಜ್ಞಾಪಿಸಿಕೊಂಡು ನಕ್ಕು ಹೇಳಿದರು.

'ನಿಜ ನಿಜ ನಿಮಗೆ ಹೇಳುವುದೇನು, ದುಃಖ ಸಮಯದಲ್ಲಿ ವೇದಾಂತದ ಮಾತು ನಾಟುವುದಿಲ್ಲ ಎಂಬ ಸಣ್ಣ ಮಾತು ನನಗೇ ಮರೆತು ಹೋಗಿತ್ತು. ಆದರೂ ನೀವು ಕಾರಣವನ್ನು ಕೇಳುವುದರಿಂದ, ಸಮಾಧಾನ ಹೇಳುವುದೂ ನಮ್ಮ ಕರ್ತವ್ಯ, ಅಲ್ಲದೆ ಇದು ನಮ್ಮ ಸುಖಕ್ಕಾಗಿ ದೇವರ ಪೂಜೆ ಮಾಡುವ ನಮಗೆ ತಿಳಿದಿರಬೇಕಾದುದೂ ಅಹುದು.'

'ನಮ್ಮ ಸುಖಕ್ಕಾಗಿ ದೇವರ ಪೂಜೆ ಮಾಡುವವರು ನಾವು ಅಂದರೇನು ಗುರುಗಳೇ?'

—ಎಂದು ಅವರ ಮಾತು ಕೇಳಿ ಅಚ್ಚರಿಗೊಂಡ ನಾನೂ ಕೇಳಿದೆ

'ಅಲ್ಲವೇ ಮತ್ತೆ? ನಮಗೆ ಏನೋ ಲಾಭವಾಗಬೇಕೆಂದು ನಾವು ದೇವರ ಸೇವೆ ಮಾಡದೆ, ದೇವರು ಉದ್ಧಾರವಾಗಬೇಕೆಂದು ಮಾಡುತ್ತವೆಯೇ? ದೇವರಿಗೆ

ಹೊಟ್ಟೆಗಿಲ್ಲವೆಂಬ ಕನಿಕರದಿಂದ ನೈವೇದ್ಯ ಇಡುತ್ತೇನೆಯೇ? 'ಪಾಪ! ಛಳಿಯಲ್ಲಿ ನಡುಗುತ್ತಾನೆ' ಎಂಬ ಅನುಕಂಪದಿಂದ ಬಟ್ಟೆ ಹೊದಿಸುತ್ತೇವೆಯೇ? ಲೋಕಕ್ಕೆಲ್ಲಾ ಅನ್ನ ಬಟ್ಟೆಯನ್ನು ಕೊಡುವ ಭಗವಂತನಿಗೆ ಇವುಗಳ ಅಭಾವನವಿದೆಯೇ? ಅದಾವುದೂ ಇಲ್ಲ ಭಗವಂತನಿಂದ ನಮಗೇನೋ ಕೆಲಸವಾಗಬೇಕು, ಅದಕ್ಕಾಗಿ ಏನೇನೋ ಪೂಜೆ ಪುನಸ್ಕಾರ ಮಾಡಿ, ಅವನನ್ನು ಒಲಿಸಿಕೊಳ್ಳಲು ಯತ್ನಿಸುತ್ತೇವೆ.'

'ಅದು ನಿಜ'

—ಗುರುಗಳ ಮಾತಿಗೆ ನಾನೂ ಸಮ್ಮತಿ ಸೂಚಿಸಿ ಹೇಳಿದೆ.

'ನೀವು ಆ ಮಾತು ಒಪ್ಪಿಕೊಂಡರೆ ಅಲ್ಲಿಗೆ ನನ್ನ ಕೆಲಸ ಅರ್ಧ ಆದಹಾಗಾಯಿತು. ಆ ಮಾತು ನಿಮಗೆ ಅರ್ಥವಾದರೆ ಮುಂದೆ ನಾನು ಏನೂ ಹೇಳಬೇಕಾದ ಅಗತ್ಯವೇ ಇಲ್ಲ.'

—ಎಂದರು ತೇಜೋರಾಶಿ ಪಂಡಿತರು

'ಅವನಿಗೆ ಏನು ಅರ್ಥವಾಯಿತೋ ಬಿಟ್ಟಿತೋ ನನಗೆ ತಿಳಿಯದು. ಇದಕ್ಕೆ ಏನು ಪರಿಹಾರ? ಎಂದು ನನಗೆ ನೀವು ಬಿಡಿಸಿ ಹೇಳಬೇಕು.'

—ಎಂದು ಅವ್ವೆ ಪಟ್ಟು ಹಿಡಿದು ಕೇಳಿದಳು.

'ಅದೂ ಆಗಲಿ-ತಾಯಿ ಒಂದು ಸಣ್ಣ ವ್ಯವಹಾರದ ಮಾತು ಹೇಳುತ್ತೇನೆ. ಈಗ ನಿಮ್ಮ ಮಕ್ಕಳು ಯುವರಾಜರಾಗಿದ್ದಾರೆ. ಅಲ್ಲವೇ?'

'ಅಹುದು.'

’ಅವರಿಂದ ಏನಾದರೂ ಕೆಲಸವಾಗಬೇಕೆಂದು ಬರುವ ಜನ, ಅವರ ದರ್ಶನಕ್ಕೆ ಯಾವ ಕ್ರಮದಲ್ಲಿ, ಎಷ್ಟು ಹೊತ್ತಿನಲ್ಲಿ ಹೇಗೆ ಬರಬೇಕೋ, ಹಾಗೆ ಬಂದರೆ ದರ್ಶನ ಸಿಗುತ್ತದೆ. ಇಲ್ಲವಾದಲ್ಲಿ ಅರಮನೆಯ ಬಾಗಿಲನ್ನು ನೋಡಿಕೊಂಡೇ ಹಿಂದಿರುಗಬೇಕಾಗುತ್ತದೆ.’

’ನಿಜ’

’ಈ ಮಾತೂ ಹಾಗೆಯೇ! ನಿಷ್ಕಾಮವಾಗಿ ಆರಾಧನೆ ಮಾಡುವಾಗ ಭಗವಂತನನ್ನು ಮನದಲ್ಲಿ ಸ್ಮರಿಸಿದರೂ ಸಾಕು. ಹಾಗಲ್ಲದೆ, ಸಕಾಮವಾಗಿ, ಯಾವುದೋ ಒಂದು ನಿರ್ದಿಷ್ಟ ಉದ್ದೇಶ ಸಾಧನೆಗಾಗಿ ಭಗವದಾರಾಧನೆ ಮಾಡುವಾಗ, ಅದರ ಮಂತ್ರ, ತಂತ್ರ ಕ್ರಮದಲ್ಲಿ ಲೋಪವಾಗದಂತೆ ನಡೆದುಕೊಳ್ಳಬೇಕು. ಅದರಲ್ಲಿ ಲೋಪವಾದಾಗ, ಉದ್ದೇಶಸಾಧನೆಯಾಗುವುದಿಲ್ಲ. ಲೋಪದ ಪ್ರಮಾಣಕ್ಕನುಸಾರವಾಗಿ, ಸಿದ್ಧಿಯಲ್ಲೂ ವ್ಯತ್ಯಾಸವಾಗುತ್ತದೆ. ಇಲ್ಲಿ ನಡೆದಿರುವುದೂ ಅಷ್ಟೆ, ಸಂತಾನೇಚ್ಛೆಯಿಂದಲೇ ಸೇವೆ ನಡೆಸಿದಾಗ ಅಲ್ಲಿ ಏನು ಲೋಪವಾಯಿತೊ, ಏನು ದೋಷ ಕಂಡಿತೊ ಏನೋ, ಅದಕ್ಕೇ ಮಗುವಿಗೆ ಹೀಗಾಗಿದೆ, ಆದ್ದರಿಂದಲೇ ಅಲ್ಲೇನಾಯಿತು ಎಂದು ಕೇಳಿದೆ.’

’ಪೂಜೆಯಲ್ಲೇನೂ ಲೋಪವಾಗಲಿಲ್ಲ. ಹಾಗಾಗದಂತೆ ನಾವೆಲ್ಲರೂ ಎಚ್ಚರವಾಗಿಯೇ ಇದ್ದೆವು.’

’ಪೂಜೆಯಲ್ಲೇ ಲೋಪವಾಗಿದ್ದಿದ್ದರೆ ಮಗುವಾಗುತ್ತಿರಲಿಲ್ಲ, ಆಗಿದ್ದರೂ ಉಳಿಯುತ್ತಿರಲಿಲ್ಲ. ಆದರೆ ವ್ಯಾಧಿಚಿಹ್ನೆಗಳನ್ನು ನೋಡಿದರೆ ಏನೋ ಭೀತಿಬಾಧೆಯಿರುವಂತೆ ಕಾಣುತ್ತದೆ. ಪೀಠವಿರುವ ಗವಿಯ ಕತ್ತಲಿಗಾಗಲಿ, ಮಾಣಿಕ್ಯಧಾರೆಯಲ್ಲಿ ಮೀಯುವಾಗಲಾಗಲಿ, ನಿಮ್ಮ ಸೊಸೆ ಎಲ್ಲಾದರೂ ಹೆದರಿದಳೆ?’

—ಎಂದು ನೇರವಾಗಿ ಪ್ರಶ್ನೆ ಮಾಡಿದರು ಗುರುಗಳು.

ಅವರು ಆ ಮಾತು ಕೇಳಿದ ಕೂಡಲೇ ನನಗೆ, ನಾನೇ ಏಚಲೆಯನ್ನು ಹುಲಿಯ ವಿಷಯ ಹೇಳಿ ಹೆದರಿಸಿದ್ದು, ಗವಿಯಲ್ಲಿ ಏಚಲೆ ಹುಲಿಯನ್ನು ಕಂಡಂತಾಗಿ ಹೆದರಿದ್ದು ನೆನಪಾಯಿತು. ಏಚಲೆಗೂ ನೆನಪಾಗಿರಬೇಕು. ಎಂತಲೇ ಗುರುಗಳ ಮಾತು ಕೇಳುತ್ತಿದ್ದ ಹಾಗೇ ಆಕೆಯ ಮುಖ ಬಿಳಚಿಕೊಂಡಿತು. ಆಕೆ ಏನೂ ಹೇಳದೆ ಸುಮ್ಮನೆ ಕುಳಿತದ್ದನ್ನು ಕಂಡು, ನಾನೇ ಗುರುಗಳಿಗೆ ಅಲ್ಲಿ ನಡೆದುದನ್ನು ವಿವರಿಸಿದೆ. ಅದುವರೆಗೂ ಆ ವಿಷಯ ತಿಳಿಯದ ಅವ್ವೆ 'ಹೌದೇ' ಎಂದು ಅಚ್ಚರಿ ಪಟ್ಟಳು.

ನಾನು ಹೇಳಿದುದೆಲ್ಲವನ್ನೂ ಸಾವಧಾನವಾಗಿ ಕೇಳಿದ ಗುರುಗಳು, ನನ್ನ ಮಾತು ಮುಗಿದ ಬಳಿಕ ವಿಷಾದದಿಂದ ನಕ್ಕು—

'ಸರಿ, ಸರಿ, ವ್ಯಾಸಾನುಗ್ರಹದ ಕಥೆಯೇ ಆಯಿತು'

—ಎಂದರು.

'ಅಂದರೆ ಆ ಭಯವೇ ದೋಷವಾಯಿತೇ?'

—ಎಂದು ಅಚ್ಚರಿಯಿಂದ ಕೇಳಿದೆ ನಾನು.

'ಹೌದು. ದೇವತೋಪಾಸನೆಯ ವೇಳೆಯಲ್ಲಿ, ನಿರ್ವಿಕಾರ ಬುದ್ಧಿಯಿಲ್ಲದೆ, ಬೇರೆ ಏನಿದ್ದರೂ ಮೈಲಿಗೆಯಾಗುತ್ತದೆ. ಮಹಾಭಾರತದಲ್ಲಿ ವಿಚಿತ್ರವೀರ್ಯನ ಮಡದಿಯರಿಗೆ ವ್ಯಾಸರು ಸಂತಾನಾನುಗ್ರಹ ಮಾಡಲೆಂದು ಬಂದ ವೇಳೆಯಲ್ಲಿ, ಅವರನ್ನು ನೋಡಲಾಗದೆ ಕಣ್ಣುಮುಚ್ಚಿಕೊಂಡ ಅಂಬಿಕೆಗೆ ಕುರುಡನೂ, ಅವರ ಋಷಿ ರೂಪವನ್ನು ಕಂಡು ಬೆಚ್ಚಿದ ಅಂಬಾಲೆಗೆ ಪಾಂಡುರೋಗಗ್ರಸ್ತನಾದ ಮಗನೂ ಆದಂತೆ ದೈವಾನುಗ್ರಹ ಸಮಯದಲ್ಲಿ ನಿಮ್ಮ ಮಡದಿ ಭೀತಿಗ್ರಸ್ತಳಾದುದರಿಂದ, ಈ ಮಗುವಿಗೂ

ಅದೇ ಜಾಡ್ಯವಾಗಿದೆ. ಇಂಥದೇ ಏನೋ ಆಗಿರಬೇಕೆಂದು, ನಾನು ಮಗುವನ್ನು ನೋಡುತ್ತಿದ್ದ ಹಾಗೇ ಅಂದುಕೊಂಡೆ. ಅದೇ ನಿಜವಾಯಿತು.'

—ಎಂದರು.

ಅವರು ಹೇಳಿದುದನ್ನು ಕೇಳಿ ಅವ್ವೆ-ಏಚಲೆ ಇಬ್ಬರೂ ಒಂದೇ ಕಾಲಕ್ಕೆ ನನ್ನ ಕಡೆ ತಿರುಗಿ ನೋಡಿದರು. ಆ ನೋಟವನ್ನು ನೋಡಿ ನನ್ನೆದೆಗೆ ಕೋಟಿ ಶಲ್ಯಗಳು ನಾಟಿದಂತಾಗಿ, ತಲೆತಗ್ಗಿಸಿ—

'ನನ್ನ ಮೂರ್ಖತನಕ್ಕೆ ಪರಿಹಾರವೇ ಇಲ್ಲವೇ ಗುರುಗಳೇ?'

—ಎಂದು ಬೇಡಿದೆ.

'ಮೊದಲೇ ತಿಳಿದಿದ್ದರೆ ಏನಾದರೂ ಮಾಡಬಹುದಾಗಿತ್ತು. ಏನು ಮಾಡುವುದು? ಈಗ ಕೈಮೀರಿದುದಕ್ಕೆ ಚಿಂತಿಸಿ ಫಲವಿಲ್ಲ. ಮುಂದಾಗುವ ಮಕ್ಕಳಿಗಾದರೂ ಆ ಭೀತಿ ಕಾಡದಂತೆ, ಈ ಸೂರ್ಯಗ್ರಹಣದ ದಿನ ವಿನಾದರೂ ಶಾಂತಿ ಕಾರ್ಯ ಮಾಡೋಣ. ಏನೂ ಭಯಪಡಬೇಡಿ'

—ಎಂದು ಅವ್ವೆಗೂ, ಏಚಲೆಗೂ ಸಮಾಧಾನ ಹೇಳಿ ಹೋದರು.

ಅವರ ಮಾತಿನಂತೆಯೇ ಮುಂದಿನ ಸೂರ್ಯಗ್ರಹಣದ ದಿನ ದೇವಿಗೆ ಶಾಂತಿ ಹೋಮ ನಡೆದು, ಗುರುಗಳು ಇಂದ್ರಾಕ್ಷಿ ಮಂತ್ರ ಪುರಸ್ಸರವಾಗಿ ಭೀತಿ ನಿವಾರಣಾ ಯಂತ್ರವನ್ನು ಬಲ್ಲಾಳನಿಗೆ ಕಟ್ಟಿದ ಮೇಲೆ, ಬಲ್ಲಾಳನಿಗೆ ಈ ವ್ಯಾಧಿ ಬಾಧೆ ಅಷ್ಟು ಕಡಮೆಯಾಯಿತು. ಆ ದಿನ ಮನೆಯ ಆಳುಮಗನೊಬ್ಬ ಬೆಟ್ಟದ ಭೈರವ ದೇವರಿಗೆ ತನ್ನ ತಲೆಯೊಪ್ಪಿಸಿ, ನಿಮಗಾರಿಗೂ ಆ ಭೀತಿ ಬಾಧೆಯಾಗದಂತೆ ಕಾಪಾಡಿದ.

'ನೀನು ಉದಯಾದಿತ್ಯ ಇಬ್ಬರೂ ಹುಟ್ಟಿ ಸುಖವಾಗಿ ಬೆಳೆದ ಮೇಲೆ, ಬಲ್ಲಾಳನ ಜಾಡ್ಯದ ಕೊರಗು ಅಷ್ಟಿಷ್ಟು ಕಡಮೆಯಾದರೂ, ಈಗಲೂ ಅವನ ರೋಗಕ್ಕೆ ನನ್ನ ಹುಡುಗಾಟವೇ ಕಾರಣವಾಯಿತೆಂಬ ಕೊರಗು ಮಾತ್ರ ನನಗಿನ್ನೂ ತಪ್ಪಿಲ್ಲ, ಬಿಟ್ಟಿಯಣ್ಣ. ನೀವಿಬ್ಬರೂ ಬಲ್ಲಾಳನನ್ನು ಅಣ್ಣ ಎನ್ನುವುದಕ್ಕಿಂತ ಹೆಚ್ಚನ ಪ್ರೀತಿಯಿಂದ ಕಂಡು, ಅವನು ಯಾವುದಕ್ಕೂ ಕೊರಗದಂತೆ ನೋಡಿಕೊಂಡರೆ, ನನಗೆ, ನಿನ್ನ ಅವ್ವೆಗೆ ಅದಕ್ಕಿಂತ, ಹೆಚ್ಚಿನ ಸಂತೋಷದ ವಿಷಯವೇ ಬೇಕೊಂದಿಲ್ಲ. ನೀವಿಬ್ಬರು ಆತನಿಗೆ ಮಾಡುವ ಸೇವೆಯಿಂದ ನನ್ನ ಹುಡುಗಾಟದಿಂದಾದ ಪಾಪ ನಿವಾರಣೆಯಾಗಬೇಕು'

—ಎಂದ ಎರೆಯಂಗದೇವ ಕಥೆ ಮುಗಿಸಿ, ನಿಟ್ಟುಸಿರಿಟ್ಟು,

*    *    *    *    *    *

ತಂದೆ ಹೇಳಿದ ಕಥೆಯನ್ನು ಕೇಳಿದ ಬಳಿಕ ವಿಷ್ಣುವರ್ಧನನಿಗೂ ಮುಂದೆ ಮಾತು ಬೆಳೆಸಲು ಮನಸ್ಸಾಗಲಿಲ್ಲ. ನಾಲ್ಕು ಬದಿಯಲ್ಲೂ ಅಪಾರವಾಗಿ ಹಬ್ಬಿದ ವನಸಿರಿಯ ಲಾವಣ್ಯವೂ ಇದ್ದೂ ಕಾಣದಂತಾಗಿ ಸುಮ್ಮನೆ ಕುಳಿತ.

ಆ ಕಥೆಯನ್ನು ಹೇಳಿದ ಬಳಿಕ ಎರೆಯಂಗದೇವನಿಗೂ ಏಕೋ ಮುಂದೆ ಮಾತನಾಡಲಾಗದೆ, ಆತನೂ ಸುಮ್ಮನೆ ಕುಳಿತ.

ತನ್ನ ಹುಡುಗಾಟದಿಂದಾದ ದುರಂತವನ್ನು ವಿವರಿಸಿದ ಬಳಿಕ, ಅದರ ನೆನಪಿನಿಂದ ಎರೆಯಂಗದೇವನ ಹೃದಯಕ್ಕೆ ಎಷ್ಟು ನೋವಾಗಿತ್ತೊ, ಅದನ್ನು ಕೇಳಿದ ವಿಷ್ಣುವರ್ಧನನಿಗೂ ಅಷ್ಟೇ ವ್ಯಥೆಯಾಗಿತ್ತು.

ಅಷ್ಟು ಹೊತ್ತು ರಥಚಕ್ರಗಳ ಧ್ವನಿ, ಕುದುರೆಗಳ ಖುರಪುಟದ ಸದ್ದನ್ನು ಕೇಳುತ್ತಾ, ಅಶ್ವಾರೋಹಿಗಳ ಕೈಯಲ್ಲಿ ಬಿಸಿಲಿನಲ್ಲಿ ಹೊಳೆಯುವ ಹೊಯ್ಸಳ ಧ್ವನಿ

ಲಾಂಛನಗಳನ್ನು, ಆಗಾಗ ಬಿಸಿಲಿನಲ್ಲಿ ರಥಗಳಿಗೆ ಇದಿರಾಗಿ ಜೀವಬಂದ ಹೂವುಗಳಂತೆ ಹಾರುವ ಬಣ್ಣ ಬಣ್ಣದ ಚಿಟ್ಟೆಗಳನ್ನು ನೋಡುತ್ತಾ ಮಾತು ಮರೆತು ಹೋದವನಂತೆ ಕುಳಿತಿದ್ದ ವಿಷ್ಣುವರ್ಧನ.

ಆತನ ಹೃದಯ ತನ್ನ ಅಣ್ಣನಿಗೆ ಯಾವ ರೀತಿ ಸೇವೆ ಮಾಡಿ, ತಂದೆಯ ಬಯಕೆಯನ್ನು ತೀರಿಸಬಹುದು ಎಂದು ಚಿಂತಿಸುತ್ತಿತ್ತು.

ಕಾಡಿನಲ್ಲಿ ಹಗಲಿನಲ್ಲೂ ಆಗಾಗ ಬಿಸಿಲನ್ನು ಕವಿದು ಹಬ್ಬಿದ ಹೇಮಂತದ ಮಂಜಿನಂತೆ ಚಿಂತೆ ಆತನ ಹೃದಯವನ್ನು ಕವಿದಿತ್ತು.

# ೨

ಸೊಸೆವೂರಿನಿಂದ ಹೊರಡುವಾಗ ಹಬ್ಬದ ಸಡಗರದಷ್ಟು ಹಿತವಾಗಿದ್ದ ಬಳ್ಳಿಗಾಮೆಯ ಮೂರು ದಿನದ ಪ್ರಯಾಣ ವಿಷ್ಣುವರ್ಧನನ ಪಾಲಿಗೇನೋ, ಎಷ್ಟು ತಿಂದರೂ ಸವೆಯದ ಕಲ್ಲುಸಕ್ಕರೆಯ ತುಂಡಿನಂತೆ ಸವಿಯಾಗಿದ್ದರೂ, ಉಳಿದವರ ಪಾಲಿಗೆ, ಹೆಜ್ಜೆಗೊಂದು ಮಲೆ, ಮಾರಿಗೊಂದು ಹೊಳೆಯನ್ನು ದಾಟಿ ಸಾಗಬೇಕಾಗಿದ್ದ ಪ್ರವಾಸ, ಗುರಿಯನ್ನು ಮುಟ್ಟುವ ವೇಳೆಗೆ ಏಕಾದರೂ ಬಂದೆವೋ ಎನಿಸುವಷ್ಟು ಬೇಸರಕ್ಕೆ ಕಾರಣವಾಗಿತ್ತು.

ಸೂರ್ಯ ರಶ್ಮಿ ಹೆಚ್ಚಾಗಿ ಬೀಳದಂತೆ ಉನ್ನತ ವೃಕ್ಷಗಳಿಂದಾಚ್ಛಾದಿತವಾದ ಆ ವಿಪಿನ ಮಾರ್ಗ ಎಂಥ ಕಾಲದಲ್ಲಿಯೂ ತಂಪಾಗಿರುವಂಥದು. ಈಗಲಂತೂ ಹೇಳಿ ಕೇಳಿ ಹೇಮಂತಋತು. ನಿತ್ಯ ನಿತ್ಯ ವನವಾಸಿಗಳಾಗಿ, ಹುಟ್ಟಿನಿಂದಲೇ ಅಲ್ಲಿಯ ಚಳಿಗಾಳಿಯನ್ನು ಮೈಗೆ ಒಗ್ಗಿಸಿಕೊಂಡ ಹುಲಿ, ಕೋಡಗಗಳೂ, ಸೂಜಿಯ ಮೊನೆಯಷ್ಟು ಹಂತವಾದ ಚಳಿಗಾಳಿಯನ್ನು ಸಹಿಸಲಾಗದೆ ಹಲ್ಲು ಗಿಟಕರಿಸುವಂಥ ಕಾಲ ದೇಹಕ್ಕೆ ಆ ಗಾಳಿ ಸೋಕದಂಕೆ ಎಷ್ಟು ಬೆಚ್ಚನೆಯ ಉಡುಪು ಧರಿಸಿದರೂ, ಹೊರಗೆ ಆಡುವ ಚಳಿ ಹೊಟ್ಟೆಯೊಳಗೇ ಹೊಕ್ಕು, ಕರುಳನ್ನೇ ಕುಲುಕಾಡಿಸುವುದು. ಆ ಚಳಿ ಮೈಯಲ್ಲಿ ಹಬ್ಬುವಾಗ, ನರನಾಡಿಗಳಲ್ಲಿ ಹರಿವ ರಕ್ತವೂ ಹೆಪ್ಪುಗಟ್ಟಿದಂತಾಗಿ, ನರನರವನ್ನೂ ಹಿಮದ ಸೂಜಿಗಳಿಂದ ಇರಿದಷ್ಟು ವ್ಯಥೆಯಾಗುವುದು. ಅವರಿವರೇನು- ಲೋಕಕ್ಕೆ ಬೆಳಕು, ಉಷ್ಣವನ್ನು ನೀಡುವ ಸೂರ್ಯದದೇವನೇ, ಆ ಚಳಿಗೆ ಸಿಕ್ಕು ನಿಸ್ತೇಜನಾಗುವಂತೆ ಮಾಡುವ ಹೇಮಂತ ಋತುವಿನ ಕುಳಿರುಗಾಳಿ, ಎಂದೂ ಅದರ ಹೊಡೆತಕ್ಕೆ ಸಿಗದೆ, ಅಂತಃಪುರದ ಆ ಸರೆಯಲ್ಲಿ ಬೆಳೆದ ಏಚಲಾದೇವಿ, ಆಕೆಯ ಮಗಳು ವಾಸನ್ತಿಕೆಯರು ಮೂಗುಬ್ಬಸ ಪಡುವಂತೆ ಮಾಡಿತ್ತು. ಇಳಿ ವಯಸ್ಸಿನ ವಿನಯಾದಿತ್ಯ

ನಾಲ್ಕಾರು ಕಂಬಳಿಗಳನ್ನು ಹೊದ್ದಿದ್ದೂ ನಡುಗುತ್ತಿದ್ದರೆ, ಆಗಾಗ ಕಾಡುವ ವ್ಯಾಧಿಯಿಂದ ದುರ್ಬಲದೇಹಿಯಾದ ಬಲ್ಲಾಳ, ಪ್ರಯಾಣದ ಎರಡನೆಯ ದಿನವೇ ಸಣ್ಣ ಜ್ವರ ಕಾಣಿಸಿಕೊಂಡು ಕಾಂತಿಹೀನನಾದ.

ಎರಡನೆಯ ದಿನ ರಾತ್ರಿ, ಇರುಳು ಕಳೆಯಲೆಂದು ಮಾರ್ಗ ಮಧ್ಯದ ಸತ್ರವೊಂದರಲ್ಲಿ ತಂಗಿದಾಗ, ಬಲ್ಲಾಳನಿಗೆ ತನ್ನೊಂದಿಗೆ ತಂದ ಔಷಧವನ್ನು ಕುಡಿಸಿ, ಏಚಲಾದೇವಿ, ತನ್ನ ಪತಿಗೆ—

'ನಾವು ಹೀಗೇ ಸೊಸೆವೂರಿಗೆ ಹಿಂದಿರುಗುವುದೇ ಮೇಲೆಂದು ಕಾಣುತ್ತದೆ. ಬಲ್ಲಾಳ ಹೀಗಿರುವಾಗ, ಅವನನ್ನು ಕರೆದುಕೊಂಡು ಬಂದದ್ದು ಸರಿಯಾಗಲಿಲ್ಲ, ಇವನನ್ನು ಕರೆದುಕೊಂಡು, ಈ ಅವಸ್ಥೆಯಲ್ಲೇ ಬಳ್ಳಿಗಾಮೆಯನ್ನು ಸೇರಿದರೆ, ಅಲ್ಲಿ ನಮಗೂ ಹಿತವಾಗಿರುವುದಿಲ್ಲ, ಅಲ್ಲಿಯವರಿಗೂ ತೊಂದರೆಯಾಗುತ್ತದೆ'

—ಎಂದು ಸೂಚಿಸಿದಳು

'ನನಗೂ ಹಾಗೆಯೇ ತೋರುತ್ತದೆ. ಆದರೇನು ಮಾಡುವುದು? ಚಕ್ರವರ್ತಿಗಳ ಆಜ್ಞೆ ಎಂದು ಹೊರಟದ್ದಾಯಿತು. ಈಗ ಹಿಂದೆ ಹೋಗುವುದೂ, ಮುಂದೆ ಹೋಗ ಬೇಕಾದಷ್ಟೆ ದೂರ ಇಷ್ಟು ದೂರ ಬಂದು ಹಿಂದಿರುಗಿದರೆ ಚಕ್ರವರ್ತಿಗಳ ಮನಸ್ಸಿಗೆ, ನಾನೇ ನೋಡಬೇಕು ಎಂದು ಹೇಳಿ ಕಳಿಸಿದರೂ, ಇವರು ತಮ್ಮ ಹೆಂಡತಿ ಮಕ್ಕಳನ್ನು ಕರೆತರಲಿಲ್ಲವಲ್ಲ ಎಂದು ಬೇಸರವಾಗಬಹುದು'

—ಎಂದ ಎರೆಯಂಗದೇವ

'ಅದೆಂಥ ಮಾತು ಅಪ್ಪಾಜಿ? ಈ ಚಳಿಗಾಳಿಯ ಪ್ರಯಾಣವನ್ನು ಸಹಿಸಲಾಗದೆ, ಅರ್ಧದಾರಿಯವರೆಗೆ ಬಂದೂ ಹೆಂಗಸರು ಹಿಂದಿರುಗಿದರು ಎಂದರೂ

ಚಕ್ರವರ್ತಿಗಳು ಬೇಸರ ಮಾಡಿಕೊಳ್ಳುತ್ತಾರೆಯೇ? ಈ ಸಣ್ಣ ಮಾತು ಅವರಿಗೆ ಅರ್ಥವಾಗುವುದಿಲ್ಲವೇ? ಅವರೂ ಮನುಷ್ಯರಲ್ಲವೇ? ಇನ್ನೊಬ್ಬರ ಕಷ್ಟ ಸುಖ ಅರ್ಥವಾಗದಷ್ಟು ಮೈ ಮನಸು ಮರಗಟ್ಟಿ ಹೋಗಿರುತ್ತದೆಯೇ ಚಕ್ರವರ್ತಿ ಎನಿಸಿಕೊಂಡವರಿಗೆ?'

—ತಂದೆಯ ಮಾತಿನ ತರ್ಕ ಅರ್ಥವಾಗದೆ, ತನ್ನ ಅಣ್ಣನ ವ್ಯಾಧಿಯಿಂದ ನೊಂದ ವಿಷ್ಣುವರ್ಧನ ಕೊಂಚ ಕಾವಾಗಿಯೇ ಕೇಳಿದ.

'ಷ್-ಬಿಟ್ಟಿಯಣ್ಣ, ಚಕ್ರವರ್ತಿಗಳ ವಿಷಯದಲ್ಲಿ ಹಾಗೆಲ್ಲಾ ಹಗುರವಾಗಿ ಮಾತನಾಡಬಾರದು. ಚಕ್ರವರ್ತಿಗಳು ದೇವರಿದ್ದಂತೆ. ಅವರ ಕರೆಯಂತೆ ಹೊರಟದ್ದಾಗಿದೆ. ಪ್ರಭುಕಾರ್ಯದಲ್ಲಿ ನಮಗೆ ನಿಷ್ಠೆಯಿರುವವರೆಗೂ ಅದರಿಂದ ನಮಗೆ ತೊಂದರೆಯಾಗದು. ಅವರು ಬೇಡಿದರೆ ತಲೆಯನ್ನೇ ಕೊಡುತ್ತೇವೆ ಎಂದು ಒಪ್ಪಿಕೊಂಡ ನಾವು, ಚಳಿ, ಗಾಳಿಯೆಂದು, ಮೈಗೆ ಕೊಂಚ ಇರಿಸು ಮುರಿಸು ಆಯಿತೆಂದು, ಅವರ ಅಪ್ಪಣೆಯನ್ನು ಮುರಿಯಬಹುದೇ? ಕೂಡದು-ಅಂಥ ಯೋಚನೆಯೂ ಪ್ರಭುದ್ರೋಹ'

—ಎಂದು ಮೊಮ್ಮಗನನ್ನು ಗದ್ದರಿಸಿದ, ಅಗ್ಗಿಷ್ಟಿಕೆಯಲ್ಲಿ ಕೈ ಕಾಸಿಕೊಳ್ಳುತ್ತಾ ಚಳಿಯಲ್ಲಿ ನಡುಗುತ್ತಿದ್ದ ವಿನಯಾದಿತ್ಯ.

ಆತ ಆ ಮಾತನಾಡಿದ ಬಳಿಕ ಬೇರೆ ಯಾರಿಗೂ ಮರುಪ್ರಶ್ನೆ ಮಾಡಲು ನಾಲಗೆ ಏಳಲಿಲ್ಲ. ತಂದೆಯಷ್ಟೇ ಪ್ರಭು ಭಕ್ತನಾದ ಎರೆಯಂಗದೇವನಿಗೆ ವಿನಯಾದಿತ್ಯನ ಮಾತು ಸರಿಯೆಂದೇ ತೋರಿದರೂ, ಬಿಸಿರಕ್ತದ ವಿಷ್ಣುವರ್ಧನನಿಗೆ ಆ ಮಾತು ಹಿಡಿಸಲಿಲ್ಲ. ಉಳಿದವರೆಲ್ಲರನ್ನೂ ತನ್ನ ಇಚ್ಛೆಯ ಗಾಣಕ್ಕೆ ಕಟ್ಟಿದ ಕೋಣಗಳಂತೆ ಸುತ್ತಿಸುವ ಚಕ್ರವರ್ತಿಯ ವಿಷಯದಲ್ಲಿ ಬೇಸರವೇ ಹೆಚ್ಚಾಯಿತು.

'ಮಹಾಮಂಡಲೇಶ್ವರ ಪದವಿಯ ಹಣೆಬರಹವೂ ಇಷ್ಟೇನೇ? ಆಳಿಗಿಂತ ಇವರು ಮೇಲಾದುದೇನು? ಇರಲು ಅರಮನೆ, ಹೊರಲು ಕಿರೀಟ-ಎರಡು ಬಿಟ್ಟರೆ ಇವರೂ ಊಳಿಗದವರೇ.'

—ಎಂಬ ಭಾವನೆ ಮನದಲ್ಲಿ ಮೂಡಿ, ಮನದಲ್ಲಿ ಮೂಡಿದ ನಂಜಿನಿಂದ ನಾಲಗೆ ಕಹಿಯಾಯಿತು.

ಯಾರ ಆರು ಅಕ್ಕರದ ಬಾವುಟವನ್ನು ಸಮಾರಾಂಗಣದಲ್ಲಿ ಕಾಣುತ್ತಿದ್ದ ಹಾಗೇ ಲಕ್ಕದ ಸಮಲೆಕ್ಕದ ಸೇನೆ ಹೆದರಿ ನಡುಗುವುದೋ, ಯಾವ ಹುಬ್ಬು ಆಡಿದರೆ, ಅದರ ಸೂಚನೆಯನ್ನು ನೆರವೇರಿಸಲು ನೂರು ಕೈ ಏಳುವವೋ, ಯಾರ ಕರವಾಳ ಝಳುಪಿಸಿದರೆ, ಅರಿನೃಪಯುವತಿಯರ ಕಂಕಣದ ಕೀಲು ಕಳಚಿ ಬೀಳುವುವೋ, ಯಾರ ಪಾದದ ಉಗುರು, ನಮಿಸಿದ ನೂರಾರು ದೊರೆಗಳ ಕಿರೀಟಗಳ ರತ್ನ ಕಾಂತಿಯನ್ನು ಬಿಂಬಿಸಿ ರತ್ನ ದರ್ಪಣದಂತೆ ಹೊಳೆಯುವುದೊ—

—ಅಂಥ ಪ್ರಚಂಡ ಪರಾಕ್ರಮಶಾಲಿ, ಸಮಧಿಗತ ಪಂಚಮಹಾಶಬ್ಧ ಮಹಾಮಂಡಲೇಶ್ವರ, ದ್ವಾರಾವತೀ ಪುರವರಾಧೀಶ್ವರ, ಯದುವಂಶಾಂಬರ ದ್ಯುಮಣಿ ವಿನಯಾದಿತ್ಯ—

ಈಗ ಅದಾವುದೂ ಅಲ್ಲ-ವಿಕ್ರಮಾದಿತ್ಯನ ಅಲ್ಪ ಬಯಕೆಯ ಇದಿರು ತಲೆ ಬಾಗಿದ ಊಳಿಗದಾಳು!

ಹೊಟ್ಟೆಯಲ್ಲಿ ಹಾಲಾಹಲದಂತೆ ಕಡೆದು ಬಂದ ಆ ಭಾವನೆಯೊಂದಿಗೇ, ಆಸ್ಥಾನದ ಕವಿಗಳು, ತನ್ನ ತಂದೆಯ ವಿಷಯದಲ್ಲಿ ಕಟ್ಟಿದ ಪದ್ಯವೊಂದು ವಿಷ್ಣುವರ್ಧನನಿಗೆ ನೆನಪಾಯಿತು—

'ನಿಜ ಸೇನಾಧೂಳಿಯಿಂ ಬೌಕದ ಕುಳಿಗಿಳಿದಾ ಬೆಟ್ಟುಗಳ್ ಕೂಡೆ ಮೇಘ

ವ್ರಜದಿಂ ಪೂಳ್ದಿರ್ದುವೆಂಬಂತಿರೆ ನಡೆದದಟಿಂ ಕೊಂಡವಂ ಸುಟ್ಟು ಧೂಮ

ಧ್ವಜಮಂ ಭೋಜ ಪ್ರಣಾಶೋದಯಮನೊದವಿಸಲ್ ಪೊಯ್ಸಳಂ ಚಕ್ರಿ ಜೈತ್ರ

ಧ್ವಜಮಂ ರಾಗೋತ್ಕಟಂ ಕಟ್ಟಿದನೆನೆ ವೆರರಾರ್ವ್ವೀರರಾ ಧೀರನಿಂದಂ'

ನಿಜ-ಹಾಗೆಂದು ಆಸ್ಥಾನ ಕವಿಗಳು ಎರೆಯಂಗದೇವನ ಬೀರದ ಬಲ್ಮೆಯನ್ನು ಹಾಡಿದ್ದರು.

ಅವರಿವರು ಹಾಡುವುದೇನು-ವಿಕ್ರಮಾದಿತ್ಯ ಇಂದು ಕಲ್ಯಾಣದಲ್ಲಿ ಚಕ್ರವರ್ತಿಯಾಗಿ ಮೆರೆಯುತ್ತಿದ್ದರೆ, ಅದಕ್ಕೆ ಕಾರಣ ಎರೆಯಂಗದೇವನ ಖಡ್ಗ ಪ್ರತಾಪ. ಎರೆಯಂಗದೇವನ ಅಸಿಧಾರೆಯ ಆಸರೆಯಿಲ್ಲದಿದ್ದರೆ, ಮೂರ್ಧಾಭಿಷಿಕ್ತನಾದ ಅಣ್ಣನನ್ನು ಕಾರಾಗೃಹದ ಮೂಲೆಗೊತ್ತಿ ವಿಕ್ರಮಾದಿತ್ಯ ಸಿಂಹಾಸನವನ್ನೇರುವುದು ಸಾಧ್ಯವಾಗುತ್ತಿತ್ತೇ?

ಹಿಂದೆ ತಮ್ಮ ಹಾಗೇ ಬನವಾಸಿಯ ಮಂಡಲಾಧೀಶ್ವರನಾಗಿದ್ದ ವಿಕ್ರಮಾದಿತ್ಯ ಇಂದು ಪೃಥ್ವಿವಲ್ಲಭನಾಗಿದ್ದರೆ, ಅದು ಎರೆಯಂಗದೇವನ ದೋರ್ಬಲದಿಂದ.

ಹಾಗಿದ್ದೂ ಆಂಥವನ ಅಪ್ಪಣೆಯ ಇದಿರು, ಚಳಿಯಿಂದ ನಡುಗುತ್ತಿರುವ ಮಡದಿಗೆ, ರೋಗದಿಂದ ಬಳಲುತ್ತಿರುವ ಮಗನಿಗೆ, ಅರಮನೆಯಲ್ಲಿ ಬೆಚ್ಚಗಿರಿ ಎಂದು ಹೇಳುವಷ್ಟು ಸ್ವಾತಂತ್ರ್ಯವೂ ಇಲ್ಲ-ಅದೇ ಎರೆಯಂಗದೇವನಿಗೆ.

'ಛಿ! ಈ ದಾಸ್ಯಕ್ಕೇ ಮಹಾಮಂಡಲಾಧೀಶ್ವರ ಎಂಬ ಹೆಸರೇ?'

—ಎನಿಸಿ, ಆ ಕೊರೆವ ಛಳಿಯಲ್ಲೂ ಮೈ ರಕ್ತ ಕುದಿಯಲಾರಂಭಿಸಿ, ಅದರ ಕಾವನ್ನು ತಾಳುತ್ತಾ ಸತ್ರದ ಒಳಗೆ ಕುಳ್ಳಿರಲಾಗದೆ, ಹೊರಗೆದ್ದು ಹೋಗಿ, ನಿರ್ಮಲ ಆಕಾಶದಲ್ಲಿ ಹೊಳೆಯುತ್ತಿದ್ದ ಗ್ರಹ-ತಾರೆಗಳನ್ನು ದಿಟ್ಟಿಸುತ್ತಾ ಕುಳಿತು ಇರುಳನ್ನು ಕಳೆದ ವಿಷ್ಣುವರ್ಧನ.

ತನ್ನ ಮಾತಿಗೆ ಏನೂ ಹೇಳದೆ ಒಂದು ಗಳಿಗೆ ಸುಮ್ಮನಿದ್ದು ವಿಷ್ಣುವರ್ಧನ ಎದ್ದುಹೋದುದನ್ನು ನೋಡಿದ ವಿನಯಾದಿತ್ಯ ತನ್ನ ಸೊಸೆಗೆ—

'ಬಲ್ಲಾಳನಿಗೆ ಕೊಂಚ ಇರಿಸು ಮುರಿಸಾದರೂ ಬಿಟ್ಟಿಯಣ್ಣನಿಗೆ ನೆತ್ತಿಯಮೇಲೆ ಆಕಾಶವೇ ಕಳಚಿ ಬಿದ್ದಂತಾಗುತ್ತದೆ. ಅಣ್ಣ ತಮ್ಮಂದಿರು ಹಾಗೆ ವಿಶ್ವಾಸವಾಗಿರುವುದೇ ಒಳ್ಳೆಯದು. ಆದರೆ ನೀನೇನೂ ಚಿಂತೆಮಾಡಬೇಡ. ಹೊರಟಿರುವುದು ಒಳ್ಳೆಯ ಕೆಲಸಕ್ಕೆ. ಏನೂ ತೊಂದರೆಯಾಗುವುದಿಲ್ಲ'

—ಎಂದು ಸಮಾಧಾನ ಹೇಳಿದ.

ವಿನಯಾದಿತ್ಯ ಆ ಮಾತನ್ನು ತನ್ನ ಸೊಸೆಯ ಸಮಾಧಾನಕ್ಕೆ ಮಾತ್ರವೇ ಹೇಳಲಿಲ್ಲ, ಅದು ಹಾಗೇ ಎಂಬ ನಂಬಿಕೆಯಿಂದಲೇ ಹೇಳಿದ. ಆ ನಂಬಿಕೆಯಿಲ್ಲದಿದ್ದರೆ, ಆತ ಆ ಪ್ರಯಾಣಕ್ಕೇ ಮನಸ್ಸು ಮಾಡುತ್ತಿರಲಿಲ್ಲ.

ವಿನಯಾದಿತ್ಯ ದೂರದ ದ್ವಾರಸಮುದ್ರದಿಂದ ಬಳ್ಳಿಗಾಮೆಗೆ, ಪ್ರಯಾಣಕ್ಕೆ ಅಷ್ಟೇನೂ ಹಿತವಲ್ಲದ ಹೇಮಂತ ಋತುವಿನಲ್ಲಿ, ಹೆಂಗಸರು ಮಕ್ಕಳೊಂದಿಗೆ ಪ್ರಯಾಣ ಮಾಡಲು ಕಾರಣ- ಬನವಾಸಿ ಹನ್ನೆರಡು ಸಾವಿರದ ಸಾಮನ್ತನಾದ ಸರ್ವದೇವನಿಂದ ಬಂದ ಆಹ್ವಾನ ಪತ್ರ,

ಸಾಮನ್ತ ಸರ್ವದೇವ ಪುಷ್ಯಶುದ್ಧ ಪಂಚಮಿ ಆದಿತ್ಯವಾರ, ಉತ್ತರಾಯಣ ಸಂಕ್ರಮಣವ್ಯತೀಪಾತದಂದು, ತಾನು ಬಳ್ಳಿಗಾಮೆಯಲ್ಲಿ ನೂತನವಾಗಿ ನಿರ್ಮಿಸಿದ ಸರ್ವೇಶ್ವರಾಲಯದ ದೇವತಾಪ್ರತಿಷ್ಠಾ ಮಹೋತ್ಸವಕ್ಕೆ ಬರಬೇಕೆಂದು ವಿನಯಾದಿತ್ಯನನ್ನು ಆಹ್ವಾನಿಸಿದ್ದ. ಬರೀ ಆ ಆಹ್ವಾನವೊಂದೇ ಆಗಿದ್ದಿದ್ದರೂ ವಿನಯಾದಿತ್ಯ ದ್ವಾರಸಮುದ್ರವನ್ನು ಬಿಟ್ಟು ಹೊರಡುತ್ತಿರಲಿಲ್ಲ, ಆ ಆಹ್ವಾನ ಪತ್ರದೊಂದಿಗೇ, ಆಯ್ಯಾವೊಳೆಯ ಅಗ್ರಹಾರದಿಂದ ಪ್ರಧಾನಾಮಾತ್ಯ ಕಾಳಿದಾಸಯ್ಯನವರೂ ಪ್ರತ್ಯೇಕವಾಗಿ ಓಲೆ ಬರೆದು- 'ನಮ್ಮ ಚಿಕ್ಕ ತಂದೆಯವರಾದ ಮಹಾ ಸಾಮನ್ತಾಧಿಪತಿ ಸರ್ವದೇವರು ಶ್ರೀ ಮದ್ರಾಜಧಾನಿ ಬಳ್ಳಿಗಾಮೆಯಲ್ಲಿ ನಡೆಸಲಿರುವ ದೇವತಾ ಪ್ರತಿಷ್ಠೆಯ ಶ್ರೀಕಾರ್ಯಕ್ಕೆ, ತತ್ಕಾದಲ್ಲಿ ಶ್ರೀ ಮದನಾದಿ ಅಗ್ರಹಾರ ಅಯ್ಯಾವೊಳೆಯಲ್ಲಿ ಬಿಡಾರ ಮಾಡಿರುವ ಚಕ್ರವರ್ತಿಗಳೂ ಬರಲೊಪ್ಪಿ, ಆ ವೇಳೆಗೆ ತಾವೂ ತಮ್ಮ ಮಕ್ಕಳು, ಅವರ ಕುಟುಂಬ ಪರಿವಾರ ಸಮೇತರಾಗಿ ಬಂದು ಚಕ್ರವರ್ತಿಗಳನ್ನು ಕಾಣುವಂತೆ ತಿಳಿಸಿದುದರಿಂದ ತಾವು ಖಂಡಿತವಾಗಿಯೂ ಬರಬೇಕು. ಚಕ್ರವರ್ತಿಗಳು ತಮ್ಮೊಂದಿಗೆ, ತಮ್ಮ ಕುಮಾರರೊಂದಿಗೆ ಪರ್ಯಾಲೋಚಿಸಬೇಕಾದ ರಾಜಕಾರ್ಯದ ಮಾತುಗಳೂ ಇರುವಂತಿದೆ. ಆದುದರಿಂದ ತಾವು ಏನೇ ಕಾರ್ಯಭಾರವಿದ್ದರೂ, ಬಳ್ಳಿಗಾಮೆಗೆ ಬಂದು ಚಕ್ರವರ್ತಿಗಳ ಸಂದರ್ಶನ ಮಾಡಬೇಕಾಗಿ ವಿನಂತಿ' ಎಂದು ತಿಳಿಸಿದುದರಿಂದ ವಿನಯಾದಿತ್ಯ ಬಳ್ಳಿಗಾಮೆಗೆ ಹೊರಡಲೇಬೇಕಾಯಿತು.

'ದೇವತಾಸೇವೆ, ಪ್ರಭುದರ್ಶನ ಎರಡೂ ಒಟ್ಟಿಗೆ ನಡೆಯುವ ಯೋಗವಿರುವುದಾದರೆ ಆಗಲಿ ಎಂದು, ಹೊರಡುವ ಮನಸ್ಸಿಲ್ಲದಿದ್ದರೂ ಮನಸ್ಸಿಗೆ ನೆಮ್ಮದಿ ಮಾಡಿಕೊಂಡು ಹೊರಟಿದ್ದ ವಿನಯಾದಿತ್ಯ.

ಮುಂಚಿತವಾಗಿಯೇ ಇವರು ಬಳ್ಳಿಗಾಮೆಗೆ ಬರುವ ವಿಚಾರವನ್ನು ತಿಳಿದಿದ್ದ ಸಾಮನ್ತ ಸರ್ವದೇವ ಮಾರ್ಗ ಮಧ್ಯದಲ್ಲಿ ಇವರಿಗೆ, ಯಾವುದಕ್ಕೂ ತೊಂದರೆಯಾಗದಂತೆ, ತಕ್ಕ ಬಿಡುದಾಣಗಳನ್ನು ಏರ್ಪಡಿಸಿ ಎಲ್ಲ ಅನುಕೂಲತೆಗಳನ್ನು ಒದಗಿಸಿಕೊಡಬೇಕೆಂದು, ದಾರಿಯ ಗ್ರಾಮಗಳ ಗಾವುಂಡುಗಳಿಗೆ, ಹೆಗ್ಗಡೆಗಳಿಗೆ ಅಪ್ಪಣೆ ಮಾಡಿದ್ದ.

ಆ ಗಾವುಂಡಗಳು, ಹೆಗ್ಗಡೆಗಳು ತಮ್ಮ ಶಕ್ತಿಮೀರಿ ಎಲ್ಲಾ ಅನುಕೂಲಗಳನ್ನೂ ಒದಗಿಸಿದ್ದರೂ, ದೇವತಾಸೇವೆಗೆ ಹೊರಟಾಗ ಏನೊಂದು ತೊಂದರೆಯೂ ಆಗುವುದಿಲ್ಲವೆಂದು ಮನಸ್ಸಿಗೆ ಸಮಾಧಾನ ಹಚ್ಚಿಕೊಂಡರೂ, ಅದಾವುದೂ ಸಾರ್ಥಕವಾಗದೆ ಮಾರನೆಯದಿನ ಮಧ್ಯಾಹ್ನ ವಿನಯಾದಿತ್ಯನ ಪರಿವಾರ ಬಳ್ಳಿಗಾಮೆಯನ್ನು ಸೇರುವವೇಳೆಗೆ ಬಲ್ಲಾಳನ ಜ್ವರ ಹೆಚ್ಚಾಗಿ, ಏಚಲಾದೇವಿಯಿರಲಿ, ವಿನಯಾದಿತ್ಯನೂ 'ಇದೇನು ಹೀಗಾಯಿತಲ್ಲ' ಎಂದು ಕೊರಗುವಂತಾಯಿತು.

ಅದರೊಂದಿಗೆ ಇವರು ಬಳ್ಳಿಗಾಮೆಯ ಬಳಿ ಬಂದಾಗ, ಇವರನ್ನು ಇದಿರುಗೊಳ್ಳುವ ಕೆಲಸದಲ್ಲಾದ ಲೋಪ ಆ ಕೊರಗಿನೊಂದಿಗೆ ಆಸಮಧಾನವನ್ನೂ ಬೆರಿಯಿಸಿತು.

ಅಧಿಕಾರದೃಷ್ಟಿಯಿಂದ, ಗೌರವದೃಷ್ಟಿಯಿಂದ ಮಹಾಮಂಡಲೇಶ್ವರ, ಸಾಮನ್ತನಿಗಿಂತಲೂ ದೊಡ್ಡ ಅಂತಸ್ತಿನ ವ್ಯಕ್ತಿ. ಆ ದೃಷ್ಟಿಯಿಂದಲೇ ಅಲ್ಲದೆ, ಮತ್ತೊಂದು ದೃಷ್ಟಿಯಲ್ಲೂ ವಿನಯಾದಿತ್ಯ ಉಳಿದವರಿಗಿಂತ ಹೆಚ್ಚಿನ ಮರ್ಯಾದೆಗೆ ಪಾತ್ರನಾಗಿದ್ದ. ವಿನಯಾದಿತ್ಯನ ಸೋದರಿ, ಹೊಯ್ಸಳ ಮಹಾದೇವಿ, ವಿಕ್ರಮಾದಿತ್ಯ ಚಕ್ರವರ್ತಿಯ ತಂದೆಯಾದ ಸೋಮೇಶ್ವರ ಚಕ್ರವರ್ತಿಯ ಮಡದಿ. ವಿಕ್ರಮಾದಿತ್ಯ ಸೋಮೇಶ್ವರ ಚಕ್ರವರ್ತಿಯ ಬೇರೊಬ್ಬ ಮಡದಿಗೆ ಜನಿಸಿದ ಮಗನಾದರೂ, ವಾವೆಯಲ್ಲಿ

ವಿನಯಾದಿತ್ಯನ ಸೋದರಳಿಯ. ಈ ದೃಷ್ಟಿಯಿಂದಲೂ, ಸರ್ವದೇವ, ವಿನಯಾದಿತ್ಯನಿಗೆ ಉಳಿದ ಮಂಡಲೇಶ್ವರರಿಗೆ ತೋರುವುದಕ್ಕಿಂತ ಹೆಚ್ಚಿನ ಮರ್ಯಾದೆ ತೋರುವುದು ಅಗತ್ಯವಾಗಿತ್ತು.

ದೇವತಾ ಪ್ರತಿಷ್ಠಾಕಾರ್ಯದಲ್ಲಿ ಕಂಕಣ ಧರಿಸಿ ಕುಳಿತ ಸರ್ವದೇವ ತಾನೇ ವಿನಯಾದಿತ್ಯನನ್ನು ಇದಿರುಗೊಳ್ಳಲು ಬರುವುದು ಸಾಧ್ಯವಿರಲಿಲ್ಲವಾದರೂ, ತನ್ನ ಸೋದರ, ದಂಡನಾಯಕ ಚಾಮುಂಡರಾಯನನ್ನಾದರೂ ಕಳಿಸಬೇಕಾಗಿತ್ತು; ಅಥವಾ ತನ್ನ ಪ್ರಧಾನ ಸಚಿವರನ್ನಾದರೂ ಕಳಿಸಬೇಕಾಗಿತ್ತು.

ಆದರೆ ತಾನು ಪ್ರಧಾನಮಾತ್ಯರ ಚಿಕ್ಕಪ್ಪ ಎಂಬ ಭಾವನೆಯಿಂದ, ಅದೆಲ್ಲವನ್ನು ಮರೆತಹಾಗಿತ್ತು ಸರ್ವದೇವ.

ವಿನಯಾದಿತ್ಯನನ್ನು ಇದಿರುಗೊಳ್ಳಲು ಚಾವುಂಡರಾಯನಾಗಲಿ, ಸರ್ವದೇವನ ಸಚಿವರಾಗಲಿ ಯಾರೂ ಬರದೆ, ಅವರ ಕಡೆಯ ಹೆಗ್ಗಡೆಯೊಬ್ಬರು ಬಂದುದನ್ನು ಕಂಡು ವಿನಯಾದಿತ್ಯನಿಗೂ, ಎರೆಯಂಗದೇವನಿಗೂ ಅಸಮಾಧಾನವಾಯಿತು.

ವಿನಯಾದಿತ್ಯನಿಗೆ, ಎರೆಯಂಗವದೇವರಿಗೆ, ಅವರಿಗೆ ಸಲಿಸಬೇಕಾದ ಮರ್ಯಾದೆಯನ್ನು ಸಲ್ಲಿಸಿ, ಆತನನ್ನು ಸರ್ವದೇವನ ಪರವಾಗಿ ಇದಿರುಗೊಳ್ಳ ಬಂದ ಹೆಗ್ಗಡೆ—

’ನನ್ನ ಪರಿಚಯ ತಮಗಿಲ್ಲ. ನನ್ನ ಹೆಸರು ಮಾರಸಿಂಗಮಯ್ಯ. ನನ್ನ ಮಾವಂದಿರಾದ ಬಲದೇವ ದಂಡನಾಯಳಕರ ಪರಿಚಯ ತಮಗಿರಬಹುದು.’

—ಎಂದು ತನ್ನ ಪರಿಚಯವನ್ನು ತಾನೇ ಮಾಡಿಕೊಟ್ಟ.

ಮಾರಸಿಂಗಮಯ್ಯ ಹೇಳಿದಂತೆ, ವಿನಯಾದಿತ್ಯನಿಗೆ ಮಾರಸಿಂಗಮಯ್ಯನ ಮಾವಂದಿರಾದ ಬಲದೇವ ದಂಡನಾಯಕರ ಪರಿಚಯವಿತ್ತು.

'ನೀವು ಬಲದೇವ ದಂಡನಾಯಕರ ಅಳಿಯಂದಿರೇ? ಹೀಗೆ, ಆಕಸ್ಮಿಕವಾಗಿ ನಿಮ್ಮ ಪರಿಚಯವಾದುದು ತುಂಬಾ ಸಂತೋಷದ ವಿಷಯ.'

—ಎಂದು ಹೇಳಿ, ತನ್ನ ಮಗನಿಗೂ, ಮಾರಸಿಂಗಮಯ್ಯನ ಪರಿಚಯ ಮಾಡಿಸಿಕೊಟ್ಟ ವಿನಯಾದಿತ್ಯ.

ಆ ಕೆಲಸವಾದ ಬಳಿಕ ಮಾರಸಿಂಗಮಯ್ಯ—

'ನೀವು ನನ್ನ ಮಾವಂದಿರ ಆಪ್ತಮಿತ್ರರಾಗಿದ್ದವರು ಎಂಬ ಕಾರಣದಿಂದಲೇ ಸಾಮನ್ತರು ಬಳ್ಳಿಗಾಮೆಯಲ್ಲಿ ತಮ್ಮ ವಸತಿ-ಉಪಚಾರಗಳ ಮೇಲ್ವಿಚಾರಣೆಯ ಕೆಲಸವನ್ನು ನನಗೆ ಒಪ್ಪಿಸಿದಾರೆ. ತಮಗೆ ಬೇಕಾದ ಸೇವೆಯನ್ನು ಸಲ್ಲಿಸಲು ನಾನು ಸಿದ್ಧನಾಗಿದೇನೆ'

—ಎಂದು ಹೇಳಿದ

ಆತ ಹಾಗೆ ಹೇಳಿದುದನ್ನು ಕೇಳಿ 'ಅದೆಲ್ಲಾ ಸರಿ. ಸಾಮನ್ತರ ಸೋದರರಾಗಲಿ, ಸಚಿವರಾಗಲ್ಲಿ ಏಕೆ ಬರಲಿಲ್ಲ' ಎಂದು ಕೇಳಿ, ಕ್ರಮದಲ್ಲಾದ ಲೋಪದತ್ತ ಆತನ ಗಮನವನ್ನು ಸೆಳೆಯಬೇಕೆಂದು ವಿನಯಾದಿತ್ಯನಿಗೆ ಅನಿಸಿದರೂ, ಸಾಮನ್ತರ ಕೈಕೆಳಗಿನ ಆಧಿಕಾರಿಯೊಬ್ಬನ ಮುಂದೆ ಆ ವಿಷಯವನ್ನು ಪ್ರಸ್ತಾಪ ಮಾಡುವ ಅನೌಚಿತ್ಯ ತನ್ನಿಂದ ಆಗಬಾರದು ಎಂದು ಸೈರಣೆ ತಂದುಕೊಂಡು—

'ಸರಿಯೆ, ಎಲ್ಲಿ ಯಾರ ಅತಿಥ್ಯವಾಗಬೇಕೆಂದು ವಿಧಿ ನಿಯಮವೋ ಅಂತಾಗಲಿ. ಆಗುವುದೆಲ್ಲ ಒಳಿತಿಗೇ.'

—ಎಂದಷ್ಟೇ ಹೇಳಿ ಸುಮ್ಮನಾದ.

ಮಾರಸಿಂಗಮಯ್ಯನೊಂದಿಗೆ, ವಿನಯಾದಿತ್ಯನನ್ನು ಎದಿರುಗೊಳ್ಳಲು ಬಂದ ಸಶಸ್ತ್ರ ಅಶ್ವಾರೋಹೀ ಸೈನಿಕರು ತೋರಿದ ದಾರಿಯಲ್ಲಿ ನಡೆದು. ವಿನಯಾದಿತ್ಯನ ರಥಗಳು ಬಳ್ಳಿಗಾಮೆಯ ಶಿವಪುರಿಯಲ್ಲಿದ್ದ ಮಾರಸಿಂಗಮಯ್ಯನವರ ಮನೆಯ ಕಡೆ ನಡೆದವು.

# ೩

ಮಾರಸಿಂಗಮಯ್ಯ ವಿನಯಾದಿತ್ಯನ ಪರಿವಾರದವರು ಉಳಿದುಕೊಳ್ಳಲು ತನ್ನ ಮನೆಯ ಬಳಿಯಲ್ಲಿಯೇ ಭವ್ಯವಾದ ಮನೆಯೊಂದನ್ನು ತೆರವು ಮಾಡಿಸಿಕೊಂಡು, ಅದನ್ನು ರಾಜೋಚಿತವಾಗಿ ಅಲಂಕರಿಸಿದ್ದ.

ಆ ಮನೆಯ ಮುಂದೆ ರಥಗಳು ನಿಲುತ್ತಿದ್ದ ಹಾಗೇ, ಹತ್ತಾರು ಆಳುಗಳು ಬಂದು, ರಥಗಳಲ್ಲಿಯ ಸಾಮಾನನ್ನು ತೆಗೆದು ಒಳಗಿರಿಸುವ ಕಾರ್ಯದಲ್ಲಿ ತೊಡಗಿದರು.

ತನ್ನ ತಾತ, ತಂದೆಯವರನ್ನು ಹಿಂಬಾಲಿಸಿ, ಬಿಡಾರದೊಳಗೆ ಹೋಗಲಿದ್ದ ವಿಷ್ಣುವರ್ಧನನನ್ನು ತಡೆದು, ರಥದಿಂದ ಇಳಿದ ಏಚಲಾದೇವಿ—

'ಬಿಟ್ಟಿಯಣ್ಣ ಎಲ್ಲಕ್ಕೂ ಮೊದಲು ಹೆಗ್ಗಡೆಗಳಿಗೆ ಒಂದು ಮಾತು ಹೇಳಬೇಕು'

—ಎಂದಳು.

'ಏನವ್ವೆ? ಏನು ವಿಷಯ?'

'ಮೊದಲು ಒಳಗೆ ಹೋಗಿ ಬಲ್ಲಾಳನಿಗೆ ಮಲಗುವುದಕ್ಕೆ ಹಾಸಿಗೆ ಸರಿಪಡಿಸುವಂತೆ ತಿಳಿಸಿ, ಹಾಗೇ ಯಾರಾದರೂ ಒಳ್ಳೆಯ ವೈದ್ಯರಿದ್ದರೆ ಕರತರಬೇಕು ಎಂದು ಹೆಗ್ಗಡೆಗಳಿಗೆ ಹೇಳು.'

'ಏಕವ್ವೆ? ಅಣ್ಣಾಜಿಗೆ ಜ್ವರ ತುಂಬಾ ಬಂದಿದೆಯೇ?'

—ವಿಷ್ಣುವರ್ಧನ ಗಾಬರಿಯಾಗಿ ಕೇಳಿದ

'ಹೂ.'

'ಹೌದೇ?'

—ಎಂದು ವಿಷ್ಣುವರ್ಧನ ಸುತ್ತಲೂ ತೆರೆ ಹಾಕಿದ ರಥದೊಳಗೆ ಇಣುಕಿ, ತುಂಬಾ ಹೊದಿಕೆ ಹೊದ್ದು ಮಲಗಿದ ಬಲ್ಲಾಳನ ಹಣೆಯನ್ನು ಮುಟ್ಟಿ ನೋಡಿದ.

ಅವನ ಹಸ್ತಸ್ಪರ್ಶದಿಂದ ಎಚ್ಚರವಾದ ಬಲ್ಲಾಳ, ಪ್ರಯಾಸಪಟ್ಟು ಕಣ್ಣುತೆರೆದು, ತನ್ನ ಮುಖವನ್ನೇ ನೋಡುತ್ತಿದ್ದ ವಿಷ್ಣುವರ್ಧನನನ್ನು ನೋಡಿ—

'ಬಳ್ಳಿಗಾಮೆ ಬಂತೆ ಬಿಟ್ಟಿಯಣ್ಣ?'

—ಎಂದು ಬಹು ಕ್ಷೀಣವಾದ ಸ್ವರದಲ್ಲಿ ಕೇಳಿದ.

'ಹೂ, ಪ್ರಯಾಣ ತುಂಬಾ ಆಯಾಸವಾಯಿತೇ ಅಣ್ಣಾಜಿ?'

—ಕಾತರನಾಗಿ ಕೇಳಿದ ವಿಷ್ಣುವರ್ಧನ.

'ಏನೋ ಆಯಿತು. ನಾನು ಸುಖಪಡುವುದು, ಬೇರೆಯವರನ್ನು ಸುಖಪಡಿಸುವುದು—ಎರಡನ್ನು ವಿಧಿ ನನ್ನ ಹಣೆಯಲ್ಲಿ ಬರೆಯಲಿಲ್ಲ, ಬಿಟ್ಟಿಯಣ್ಣ. ಸುತ್ತಲಿನವರಿಗೆ ಕಷ್ಟ ಕೊಡುವುದಕ್ಕೇ ಹುಟ್ಟಿದವನು ನಾನು ದಾರಿಯುದ್ದಕ್ಕೂ ನನ್ನಿಂದ ಅವ್ವೆಗೆ ತುಂಬಾ ತೊಂದರೆಯಾಯಿತು ಹೊಸದೇಶ, ಹೊಸಜನ ಎಂದು ಆಕೆ ಅತ್ತಿತ್ತ ತಿರುಗಿ ನೋಡುವುದಕ್ಕೂ ಅವಕಾಶವಾಗಲಿಲ್ಲ. ಅಂತೂ ಅವ್ವೆಗೆ ಒಳ್ಳೆಮಗನಾಗಿ ಹುಟ್ಟಿದ ಹಾಗಾಯಿತು'

—ಎಂದ ಬಲ್ಲಾಳ ತೀವ್ರವಾದ ನೋವು, ಪಶ್ಚಾತ್ತಾಪ ತುಂಬಿದ ಧ್ವನಿಯಲ್ಲಿ.

'ಬಿಡಿ ಅಣ್ಣಾಜಿ-ಏನು ಮಾತು ಆಡುತ್ತೀರ. ನಿಮ್ಮ ಮೈಗೆ ಗೆಲುವಾದರೆ ಅವ್ವೆಯನ್ನು ನೀವೇ ಹತ್ತು ಸಲ ಈ ಸೀಮೆ ಸುತ್ತಿಸಿಕೊಂಡು ಬರಬಹುದು. ನೀವು ಒಂದು

ಗಳಿಗೆ ವಿಶ್ರಾಂತಿ ತೆಗೆದುಕೊಳ್ಳಿ. ನಾನು ಹೋಗಿ ಹಾಸಿಗೆ ಹಾಸಿದಾರೋ ಇಲ್ಲವೋ ನೋಡಿಕೊಂಡು ಬರುತ್ತೇನೆ'

—ಎಂದ ವಿಷ್ಣುವರ್ಧನ ತನ್ನ ಅಣ್ಣನ ಮಾತು ಕೇಳಿ, ಕಣ್ಣಿನಲ್ಲಿ ಮೂಡಿದ ಕಂಬನಿಯನ್ನು ಪ್ರಯತ್ನಪೂರ್ವಕವಾಗಿ ತಡೆಗಟ್ಟಿ.

'ನನ್ನ ಮೈಗೆ ಗೆಲುವಾಗುವುದು...'

—ಎಂದು ಕಹಿಯಾದ ಧ್ವನಿಯಲ್ಲಿ ಏನೋ ಹೇಳ ಹೊರಟ ಬಲ್ಲಾಳ, ಆ ಮಾತನ್ನು ಅಲ್ಲಿಗೇ ತಡೆದು—

'ಅದು ಹೇಗಾದರಾಗಲಿ ಬಿಟ್ಟಿಯಣ್ಣ. ಇಲ್ಲಿಗೆ ಬರುತ್ತಿದ್ದ ಹಾಗೇ ಇದಾವುದೋ ರೋಗದ ಗೂಬೆ ಬಂದಿತು ಎಂದು ನೋಡಿದವರ ಕೈಲಿ ಅನ್ನಿಸಿಕೊಂಡು ಮಲಗುವುದು ನನಗೆ ಇಚ್ಛೆಯಿಲ್ಲ. ಸ್ವಲ್ಪ ನಿನ್ನ ಹೆಗಲಿನಾಸರೆ ಕೊಡು. ಹತ್ತು ಹೆಜ್ಜೆ ನಡದೇಬಿಡುತ್ತೇನೆ'

—ಎಂದ, ಮೇಲಕ್ಕೆ ಏಳಲು ಪ್ರಯತ್ನಿಸಿ.

'ಆ ಪ್ರಯತ್ನ ಬೇಡ. ವೃಥಾ ಅಯಾಸವಾಗುತ್ತದೆ. ನಡೆಯುವುದೂ ಈ ದಿನ ನಿನ್ನಿಂದ ಆಗದ ಕೆಲಸ'

—ಎಂದು ಹೇಳಬೇಕೆನಿಸಿದರೂ, ಆ ಮಾತಾಡಿ ಬಲ್ಲಾಳನ ಮನಸ್ಸಿಗೆ ಮತ್ತಷ್ಟು ನಿರಾಶೆಯನ್ನು ತುಂಬಲಿಚ್ಛಿಸದೆ ವಿಷ್ಣುವರ್ಧನ—

'ಅದೂ ನಿಜವೇ. ಮಲಗಿ ಮಲಗಿ ಕೈಕಾಲು ಜೋಮು ಹಿಡಿದಿರಬೇಕು. ಎರಡು ಹೆಜ್ಜೆ ನಡೆಯುವುದೇ ಲೇಸು'

—ಎಂದಾಡಿ, ಅವನ ಪ್ರಯತ್ನಕ್ಕೆ ಪ್ರೋತ್ಸಾಹ ನೀಡಿ, ಬೆನ್ನಿಗೆ ತೋಳಿನಾಸರೆ ಕೊಟ್ಟು ಎಬ್ಬಿಸಿ ಕೂಡಿಸಿದ.

ತನ್ನ ಬೆನ್ನಿಗೆ ಆಸರೆಯಾದ ವಿಷ್ಣುವರ್ಧನನ ಭುಜದ ಮೇಲೆ ತೋಳು ಹಾಕಿಕೊಂಡು, ಬಲ್ಲಾಳ ಪ್ರಯತ್ನ ಪಟ್ಟು ರಥದಿಂದ ಕೆಳಗಿಳಿದ. ಅಷ್ಟಕ್ಕೇ ತನಗಾದ ಶ್ರಮವನ್ನು ರಥದಿಂದಿಳಿದ ತನ್ನನ್ನೇ ನೋಡುತ್ತಿರುವವರಿಗೆ ತೋರಗೊಡಬಾರದೆಂದು, ಮುಖದ ಮೇಲೆ ಇಲ್ಲದ ಗೆಲುವನ್ನು ತಂದುಕೊಂಡು ಮುಂದೆ ಎರಡು ಹೆಜ್ಜೆ ನಡೆದು, ಹಾಗೂ ಹೀಗೂ ಕಷ್ಟಪಟ್ಟು ಮನೆಯ ಮುಂದಿನ ಮೆಟ್ಟಲಲ್ಲಿ ಎರಡನ್ನು ಹತ್ತಿ, ಆ ಆಯಾಸಕ್ಕೆ ತಲೆಸುತ್ತಿ ಬಂದು, ಹಾಗೇ ವಿಷ್ಣುವರ್ಧನನ ವಕ್ಷದ ಮೇಲೆ ಒರಗಿದ. ಬಲ್ಲಾಳ ಅನಿರೀಕ್ಷಿತವಾಗಿ ತನ್ನ ಮೇಲೆ ಭಾರವಾಗಿ ಜೋಲಿದಾಗ ಆದನ್ನು ನಿರೀಕ್ಷಿಸದ ವಿಷ್ಣುವರ್ಧನನೂ ಜಾರುವಂತಾಗಿ, ಅವನ ಮೈ ತೂಗಿತು. ಅದನ್ನು ನೋಡುತ್ತಾ ನಿಂತಿದ್ದವರೆಲ್ಲಾ 'ಹಾ' ಎಂದರು. 'ಬಿಟ್ಟಿಯಣ್ಣ.....' ಎಂದು ಕೂಗಿ ಏಚಲಾದೇವಿ ಮಕ್ಕಳ ಬಳಿ ಓಡಿ ಬಂದಳು.

ಆದರೆ ವಿಷ್ಣುವರ್ಧನನ ಸಾವಧಾನತೆಯಿಂದ ಆಗಬಹುದಾದ ಅನಾಹುತ ತಪ್ಪಿ, ಅತ ಬಲ್ಲಾಳನನ್ನು ಬಿಗಿಯಾಗಿ ಹಿಡಿದು ತನ್ನ ಎದೆಗೆ ಒರಗಿಸಿಕೊಂಡು, ಗಾಬರಿಯಾಗಿ ತನ್ನತ್ತ ಸರಿದ ತಾಯಿಗೆ—

'ಏನೂ ಗಾಬರಿಯಿಲ್ಲ, ಮೆಟ್ಟಲ ಮೇಲೆ ಅಣ್ಣಾಜಿಯ ಕಾಲು ಜಾರಿರಬೇಕು, ಅಷ್ಟೆ.'

—ಎಂದು ಸಮಾಧಾನ ಹೇಳಿ ತನ್ನ ನೆರವಿಗೆ ಬಂದ ಇತರರಿಗೆ ದೂರವಿರಲು ಹೇಳಿ, ಬಲ್ಲಾಳನನ್ನು ಹಾಗೇ ಎತ್ತಿ ಎದೆಗೆ ಒರಗಿಸಿಕೊಂಡು ಒಳಗೆ ನಡೆದ.

ವಿಷ್ಣುವರ್ಧನ ಬಲ್ಲಾಳನನ್ನು ಒಳಗೆ ಕರೆದುಕೊಂಡು ಬರುವ ವೇಳೆಗೆ ಆಳುಗಳು ಆತನನ್ನು ಮಲಗಿಸಲು ಸಜ್ಜೆಯನ್ನು ಸಿದ್ಧಪಡಿಸಿದ್ದರು. ಆ ಶಯ್ಯೆಯ ಮೇಲೆ ಬಲ್ಲಾಳನನ್ನು ಹೂವಿನಂತೆ ಮಲಗಿಸಿ, ಆತನ ಮೈ ಮೇಲೆ ಕತ್ತಿನವರೆಗೂ ಮುಚ್ಚುವಂತೆ, ಮೃದುವಾದ ಉಣ್ಣೆಯ ಹೊದಿಕೆಯನ್ನು ಹೊದಿಸಿದ ವಿಷ್ಣುವರ್ಧನ ಹಾಗೆ ಹೊದಿಕೆ ಹೊದಿಸುವಾಗ, ಆತನಿಗೆ ಬಲ್ಲಾಳನ ಕಣ್ಣು ತೇವವಾಗಿರುವುದು ಕಂಡಿತು. ನೀರು ತುಂಬಿದ ಆ ಕಣ್ಣುಗಳಲ್ಲಿ ತನ್ನ ಸಹೋದರನ ಬಗ್ಗೆ ಆಗಾಧ ಪ್ರೇಮ, ಕೃತಜ್ಞತೆಗಳು ತುಂಬಿ ತುಳುಕುತ್ತಿದ್ದುವು. ತನ್ನ ನೆತ್ತಿಯ ಮೇಲಿದ್ದ ತಮ್ಮನ ಕೈಯನ್ನು ವಿಶ್ವಾಸದಿಂದ ನೇವರಿಸಿ-

'ಬಿಟ್ಟಿಯಣ್ಣಾ ಅಪ್ಪಾಜಿಯವರು ನಿನಗಿಟ್ಟ ಹೆಸರು ಸಾರ್ಥಕವಾಯಿತು!'

—ಎಂದ ಕ್ಷೀಣವಾಗಿ, ಎದೆಯಾಳದ ಕಂಬನಿಯಲ್ಲಿ ತೊಯ್ದ ಧ್ವನಿಯಲ್ಲಿ

'ಹಾಗಂದರೇನು ಅಣ್ಣಾಜಿ?'

—ಬಲ್ಲಾಳನ ಮಾತಿನ ಅರ್ಥ ತಿಳಿಯದೆ ಕೇಳಿದ ವಿಷ್ಣುವರ್ಧನ.

'ನನ್ನನ್ನು ಹೀಗೆ ಹೊತ್ತು ಇಳಿಸುವ 'ಬಿಟ್ಟಿ'ಯನ್ನು ಮಾಡಲು ಹುಟ್ಟಿದವನೆಂದೇ ನಿನಗೆ 'ಬಿಟ್ಟಿ' ಎಂದು ಅಪ್ಪಾಜಿ ಹೆಸರಿಟ್ಟಿರಬೇಕು!'

ತನ್ನ ಅಣ್ಣ ಹೇಳಿದ ಮಾತನ್ನು ಕೇಳಿ ಅಳಬೇಕೋ ನಗಬೇಕೋ ತಿಳಿಯದೆ ವಿಷ್ಣುವರ್ಧನ ಮೂಕನಾಗಿ ಸುಮ್ಮನೆ ನಿಂತ.

ಆದರೆ ಮಗನ ಮಾತನ್ನು ಕೇಳಿದ ಎರೆಯಂಗದೇವನಿಗೆ, ಏಚಲಾದೇವಿಗೆ ಮಾತ್ರ ಕಣ್ಣು ತೇವವಾಯಿತು.

'ಹ್ಞು-ಯಾರ ತಪ್ಪಿಗೆ ಯಾರು ಪ್ರಾಯಶ್ಚಿತ್ತ ಕೂಡುವುದು.'

—ಎಂದು ಕರುಳನ್ನೇ ಕತ್ತರಿಸಿದಂಥ ಧ್ವನಿಯಲ್ಲಿ ಹೇಳಿ, ಎರೆಯಂಗದೇವ, ತನ್ನ ಹೆಂಡತಿ ಮಕ್ಕಳಿಗೆ—

'ನಾನು ಒಂದು ಗಳಿಗೆ ಬಲ್ಲಾಳನ ಹತ್ತಿರ ಇರುತ್ತೇನೆ. ನೀವು ಹೋಗಿ ಮಿಂದು ಬನ್ನಿ. ಹೆಗ್ಗಡೆಯವರು ಆಗಲೇ ಸ್ನಾನ, ಊಟಕ್ಕೆ ಸಿದ್ಧತೆಗಳಾಗಿವೆ ಎಂದು ಹೇಳಿದರು. ನಿಮ್ಮದು ಮುಗಿದ ಮೇಲೆ ನಾನೂ ಸ್ನಾನಕ್ಕೇಳುತ್ತೇನೆ'

—ಎಂದು ಹೇಳಿದ.

'ನೀವು ಸ್ಥಾನ ಮಾಡಿ ಅಪ್ಪಾಜಿ. ಬೇಕಾದರೆ ಅಣ್ಣಾಜಿಗೆ ನಾನು ಗಾಳಿ ಹಾಕುತ್ತಿರುತ್ತೀನಿ ಅಣ್ಣಾಜಿ ಬೇಕೆಂದರೆ ಉದಯಣ್ಣ ಕಾಲು ಒತ್ತುತ್ತಾರೆ.'

—ಎಂದಳು ಅದುವರೆಗೂ ಒಂದೂ ಮಾತನಾಡದೆ ತಾಯಿಯ ಒತ್ತಿನಲ್ಲಿ ನಿಂತ ಮಗಳು-ವಾಸನ್ತಿಕೆ.

ಮಗಳ ನಿಶ್ವಾಸದ ಮಾತನ್ನು ಕೇಳಿ ಎರೆಯಂಗದೇವನಿಗೆ ಆಕೆಯ ಬಗ್ಗೆ ಪ್ರೀತಿ ಎದೆಯಲ್ಲಿ ತುಂಬಿ ಬಂತು.

'ಹೌದೇ-ಚಿಗುರೇ, ನಿನಗಿಂತಲೂ ನನಗೇ ಹಸಿವು ಹೆಚ್ಚು—ಅಲ್ಲವೇ? ಚೆನ್ನಾಗಿ ಹೇಳಿದೆ ಜಾಣೆ'

—ಎಂದು ಮಗಳ ಕೆನ್ನೆಯನ್ನು ಪ್ರೀತಿಯಿಂದ ನೇವರಿಸಿ—

'ನೀವು ಹೋಗಿ, ಬಲ್ಲಾಳನಿಗೆ ಕಾಲು ಒತ್ತಬೇಕೆಂದರೆ ಆಳುಗಳಿದ್ದಾರೆ'

—ಎಂದ ಎರೆಯಂಗದೇವ.

'ಆಳುಗಳು ಅಣ್ಣಾಜಿಯ ಕಾಲೊತ್ತುವುದು ಬೇಡ ಅಪ್ಪಾಜಿ, ಇಲ್ಲಿ ಸೇವೆ ಮಾಡಿದರೂ ಹಿಂದೆ ಬೇಸರಪಟ್ಟುಕೊಳ್ಳುತ್ತಾರೆ. ಅಣ್ಣಾಜಿಯ ಕಾಲು ಒತ್ತಿದರೆ, ಗಾಳಿ ಹಾಕಿದರೆ ನನಗೇನೂ ದಣಿವಾಗುವುದಿಲ್ಲ.'

—ಎಂದು ತಂದೆಗೆ ಹೇಳಿದ ವಾಸನ್ತಿಕೆಗಿಂತ ಎರಡು ವರ್ಷ ದೊಡ್ಡವನಾದ ಮೂರನೆಯ ಮಗ ಉದಯಾದಿತ್ಯ.

'ನೀವು ಯಾರೂ ಇರುವುದು ಬೇಡ ಹೇಗೂ ಅಣ್ಣಾಜಿ ನನಗೆ ಹೆಸರು ಕಟ್ಟಿದಾರೆ. ನಾನೇ ಅವರ ಬಳಿ ಇರುತ್ತೇನೆ. ನೀವೆಲ್ಲಾ ಹೋಗಿ ಮಿಂದು ಬನ್ನಿ ಅಪ್ಪಾಜಿ'

—ವಿಷ್ಣುವರ್ಧನ ತಾನೇ ತನ್ನ ಅಣ್ಣನ ಸೇವೆಯ ಹೊಣೆ ಹೊರಲು ಸಿದ್ಧವಾಗಿ ಹೇಳಿದ.

'ನನಗೀಗ ಏನಾಗಿದೆ ಅಂತ ಯಾರಾದರೂ ಹತ್ತಿರ ಇರಬೇಕು ಎನ್ನುತ್ತೀರ ಅಪ್ಪಾಜಿ? ಎಲ್ಲರೂ ಹೋಗಿ ಮಿಂದು ದಣಿವಾರಿಸಿಕೊಂಡು ಬನ್ನಿ, ನಾನು ಒಂಟಿಯಾಗಿದ್ದರೆ, ನನ್ನನ್ನು ಯಾವ ಗಿಡುಗವೂ ಹೊತ್ತುಕೊಂಡು ಹೋಗುವುದಿಲ್ಲ, ಅಪ್ಪೆ- ಮೊದಲು ಆ ಹೊಟ್ಟೆಬಾಕಿ ವಾಸನ್ತಿಕೆಗೆ ಏನಾದರೂ ತಿನ್ನುವುದಕ್ಕೆ ಕೊಡಿ. ಬರುವಾಗಲೇ 'ಈ ಹಾಳು ಬಳ್ಳಿಗಾಮೆ ಎಷ್ಟುದೂರ' ಎನ್ನುತ್ತಿದ್ದಳು.'

—ಎಂದು ತನ್ನಿಂದ ಮೂಡಿದ ಸಮಸ್ಯೆಯನ್ನು ತಾನೇ ಬಗೆಹರಿಸಿ ಹೇಳಿದ ಬಲ್ಲಾಳ.

'ಸರಿಸರಿ-ಮಕ್ಕಳೇ ದೊಡ್ಡವರಿಗೆ ಬುದ್ಧಿ ಹೇಳುವಂತಾಯಿತು. ನೋಡಿದೆಯಾ- ನೀನು ಹಡೆದ ಮಕ್ಕಳ ಕಾಡುತನವನ್ನು, ನೀನೂ ಅವರ ಹಾಗೇ ಅವರ ಗಿಳಿ ಮಾತನ್ನು ಕೇಳುತ್ತಾ ನಿಂತರೆ ಹೇಗೆ? ಅಪ್ಪಾಜಿಯವರು ಹೊರಗೆ ಹೋಗಿದ್ದರು. ಅವರು

ಬಂದರೇನೋ ನೋಡಿ, ಏನು ಬೇಕೋ ವಿಚಾರಿಸು. ಹೊಸಸ್ಥಳದಲ್ಲೂ ಎಲ್ಲ ಕೆಲಸವನ್ನು ಆಳುಕಾಳುಗಳಿಗೆ ಬಿಟ್ಟರೆ ಹೇಗೆ?'

—ಎಂದ ಮಕ್ಕಳ ಮೇಲಿನ ಅಸಮಾಧಾನವನ್ನು ಹೆಂಡತಿಯ ಮೇಲೆ ತೋರಿಸುವಂತೆ, ಎರೆಯಂಗದೇವ.

'ನಿಮ್ಮ ಹಾಗೇ ಮಾತನಾಡುವುದನ್ನು ನಿಮ್ಮ ಮಕ್ಕಳಿಗೂ ಕಲಿಸಿದೀರ. ಹಾಗಿರುವಾಗ, ಕಿವಿಯಿದ್ದ ನಾನು ಕೇಳುತ್ತಾ ನಿಲ್ಲುವುದೇನು, ಗೋಡೆ ಕಂಬಗಳಿಗೂ ಕಿವಿ ಬರುತ್ತದೆ. ಇವರ ಮಾತು ಕೇಳುತ್ತಾ ನಿಂತರೆ ಹೊತ್ತು ಗೊತ್ತು ಎಲ್ಲಾ ಮರೆತು ಹೋಗುತ್ತದೆ. ಬಾ ತಾಯಿ, ನಾವಿಬ್ಬರೂ ಸ್ನಾನ ಮುಗಿಸಿ, ದೇವರ ದರ್ಶನ ಮಾಡಿಕೊಂಡು ಬರೋಣ'

—ಎಂದು ಮಗಳಿಗೆ ಹೇಳಿ, ಆಕೆಯನ್ನು ತನ್ನ ಜೊತೆಗೆ ಕರೆದುಕೊಂಡು, ಏಚಲಾದೇವಿ ಮಜ್ಜನಕ್ಕೆ ಹೊರಟಳು.

*        *        *        *        *        *

ಏಚಲಾದೇವಿ ತನ್ನ ಮಗಳೊಂದಿಗೆ ಸ್ನಾನವನ್ನು ಮುಗಿಸಿಕೊಂಡು, ಆಕೆಯೊಂದಿಗೇ ದೋರಸಮುದ್ರದಿಂದ ಬಂದ ದಾಸಿಯರು ತೆಗೆದುಕೊಟ್ಟ ಮಡಿಯಾದ ದುಕೂಲವನ್ನುಟ್ಟು, ದಾಸಿಯಿಂದ ಕೇಶಾಲಂಕಾರ ಮಾಡಿಸುತ್ತಿರುವಾಗಲೇ, ಪಡಿಯರತಿ ಒಳಗೆ ಬಂದು—

'ಹೆಗ್ಗಡತಿಯವರು ತಮ್ಮ ದರ್ಶನಕ್ಕೆಂದು ಬಂದಿದಾರೆ. ವೇಳೆ ಹೇಗೋ ತಿಳಿದು ಬಾ ಎಂದು ಅಪ್ಪಣೆ ಮಾಡಿದರು'

—ಎಂದು ಸುದ್ದಿ ತಿಳಿಸಿದಳು.

ಪಡಿಯರತಿ ಹೇಳಿದುದನ್ನು ಕೇಳಿ, ಏಚಲಾದೇವಿಗೆ, ಆ ವೇಳೆಯಲ್ಲಿ ತನ್ನನ್ನು ನೋಡಲು ಬಂದಾಕೆ, ಹೆಗ್ಗಡೆ ಮಾರಸಿಂಗಮಯ್ಯನವರ ಮಡದಿಯೇ ಇರಬೇಕೆಂದು ಊಹಿಸಿ—

'ಒಳಗೆ ಕರೆತಾ'

—ಎಂದು ಪಡಿಯರತಿಗೆ ಅಪ್ಪಣೆ ಮಾಡಿ, ಅವಳು ಹೋಗುತ್ತಿದ್ದ ಹಾಗೇ, ತನ್ನ ನೀಳವಾದ ಕೇಶರಾಶಿಯನ್ನು ಕವಲುಕವಲಾಗಿ ಸೀಳಿಕೊಂಡು ಹೆಣೆಯುತ್ತಿದ್ದ ದಾಸಿಗೆ—

'ವಿಶೇಷ ಅಲಂಕಾರವೇನೂ ಬೇಡ. ಬೇಗ ಮುಗಿಸು'

—ಎಂದು ಹೇಳಿ, ಮೈಮೇಲಿನ ಬಟ್ಟೆಯನ್ನು ಸರಿಪಡಿಸಿಕೊಂಡು, ಹೆಗ್ಗಡತಿ ಒಳಗೆ ಬರುವುದನ್ನೇ ಕಾಯುತ್ತಾ ಕುಳಿತಳು.

ಪಡಿಯರತಿ ಬಾಗಿಲಿನಿಂದಾಚೆಗೆ ಹೋದ ಎರಡು ಗಳಿಗೆಯಲ್ಲೇ ನಡು ವಯಸ್ಸಿನ ಹೆಂಗಸೊಬ್ಬಳು ಒಳಗೆ ಬಂದಳು. ಆ ಹೆಂಗಸನ್ನು ನೋಡಿಯೇ ಕುಳಿತಿದ್ದ ಏಚಲಾದೇವಿಗೆ ಎದ್ದು ನಿಲ್ಲುವಂತಾಯಿತು.

ಆಕೆ ಒಳಗೆ ಬರುತ್ತಿದ್ದ ಹಾಗೇ ಏಚಲಾದೇವಿಗೆ, ಬೇಸಿಗೆಯಲ್ಲಿ ತಣ್ಣನೆಯ ಗಾಳಿ ಸುಳಿದಂತಾಯಿತು. ಎಷ್ಟೋ ವರ್ಷಗಳ ಹಿಂದೆ ಅಗಲಿದ ಅಕ್ಕರೆಯ ನೆಂಟರನ್ನು ಮತ್ತೆ ಅಪರೂಪವಾಗಿ ಕಂಡಂತಾಯಿತು. ಆಷ್ಟು ಸೌಮ್ಯ ಸುಂದರ ರೂಪ ಹೆಗ್ಗಡತಿಯದು! ಸರಳ ಸುಂದರ ಶಾಂತಿಯೇ ಹೆಣ್ಣಾಗಿ ಅವತಾರವೆತ್ತಿದಂತಿತ್ತು ಆಕೆಯ ಆಕಾರ. ಬಿಳೀ ರೇಶಿಮೆಯ ದುಕೂಲವನ್ನುಟ್ಟು, ಯಾವ ಆಲಂಕಾರವೂ ಇಲ್ಲದೆ ತುರುಬು ಸುತ್ತಿದ ತಲೆಗೆ ಮೊಗ್ಗು ಮುಡಿದು, ಹಣೆಯಲ್ಲಿ ಅಗಲವಾದ ಕುಂಕುಮವಿಟ್ಟು, ಮುಖದ ಮೇಲೆ ಮೃದುವಾದ ಮಂದಹಾಸವನ್ನು, ನಡಗೆಯಲ್ಲಿ ನಯವನ್ನು ತುಳುಕಿಸುತ್ತಾ, ಅಕ್ಕರೆಯೇ

ಮೈ ತೆಳೆದಂತೆ ಒಳಗೆ ಬಂದ ಹೆಗ್ಗಡತಿಯನ್ನು ನೋಡಿಯೇ ಏಚಲಾದೇವಿಗೆ ಏಕೋ 'ಈಕೆ ತನ್ನ ಯಾವುದೋ ಜನ್ಮದ ಸೋದರಿ' ಎನಿಸಿತು.

ಆಕೆಯನ್ನು ನೋಡುತ್ತಿದ್ದ ಹಾಗೇ ಎದ್ದುನಿಂತು—

'ಹೆಗ್ಗಡತಿಯರು ಬರಬೇಕು'

—ಎಂದು ಹೇಳಿ, ಆಕೆ ಕುಳಿತುಕೊಳ್ಳಲು ಆಸನ ತೋರಿಸಿದಳು.

'ಈಗ ತಾನೇ ಮಜ್ಜನ ಮುಗಿದ ಹಾಗಿದೆ. ಆವೇಳೆಯಲ್ಲಿ ಬಂದು ತೊಂದರೆ ಕೊಟ್ಟಹಾಗಾಯಿತೇನೋ. ಮನ್ನಿಸಬೇಕು. ತಾವು ಬಂದದ್ದು ತಿಳಿಯಿತು. ನೋಡಿ, ಇಲ್ಲಿ ಎಲ್ಲಾ ಅನುಕೂಲವಾಗಿದೆಯೊ ಇಲ್ಲವೋ ವಿಚಾರಿಸಿಕೊಂಡು ಹೋಗೋಣವೆಂದು ಬಂದೆ. ನನ್ನ ಆತುರದಿಂದ ನಿಮಗೆ ತೊಂದರೆಯಾಯಿತು. ಹೀಗೆಂದು ತಿಳಿದಿದ್ದರೆ ಇನ್ನೂ ಒಂದು ಗಳಿಗೆ ಬಿಟ್ಟುಕೊಂಡು ಬರುತ್ತಿದ್ದೆ.'

—ಎಂದಳು ಹೆಗ್ಗಡತಿ, ಏಚಲಾದೇವಿ 'ಹಾಗೇ ಆಗಬಹುದು' ಎಂದರೆ ಹಿಂದಕ್ಕೆ ಹೋಗಲು ಸಿದ್ಧಳಾಗಿ.

'ಎಂಥ ಮಾತು. ಎಲ್ಲಿಯಾದರೂ ನೀವು ಬಂದು ನಮಗೆ ತೊಂದರೆಯಾಗುವುದುಂಟೆ? ಇನ್ನೂ-ನಾವು ಬಂದಿರುವುದು ನಿಮಗೆ ತೊಂದರೆ ಕೊಡಲು. ಬನ್ನಿ ಕುಳಿತುಕೊಳ್ಳಿ'

—ಎಂದು ಏಚಲಾದೇವಿಯೇ ನಿಂತೇ ಮಾತಾಡುತ್ತಿದ್ದ ಹೆಗ್ಗಡತಿಯನ್ನು ಕುಳಿತುಕೊಳ್ಳಲು ಬಲಾತ್ಕಾರ ಮಾಡಿದಳು.

ಆದರೂ ಹೆಗ್ಗಡತಿ ಕುಳಿತುಕೊಳ್ಳದೆ, ಏಕೋ ತಾನು ಬಂದ ಬಾಗಿಲ ಕಡೆಯೇ ತಿರುಗಿ ನೋಡುತ್ತಿದ್ದುದನ್ನು ನೋಡಿ—

'ಮತ್ತೆ ಯಾರಾದರೂ ಬರುವವರಿದಾರೆಯೇ?'

—ಎಂದು ಏಚಲಾದೇವಿಯೇ ಪ್ರಶ್ನೆಮಾಡಿದಳು

'ಹೂ.'

'ಯಾರು?'

'ನನ್ನ ಮಗಳು ಶಾನ್ತಲೆ. ನೀವು ಬರುವುದನ್ನು ಕೇಳಿದಾಗಿನಿಂದ 'ಎಂದು ಬರುತ್ತಾರೊ, ನೋಡಬೇಕು' ಎನ್ನುತ್ತಿದ್ದಳು. ಈಗ ನಾನು ನಿಮ್ಮನ್ನು ನೋಡಲು ಹೊರಟಾಗ 'ಅವ್ವೆ, ನಾನೂ ಬರಲೆ?' ಎಂದು ಕೇಳಿದಳು. ಇಲ್ಲಿಯವರೆಗೂ ಕುಣಿಯುತ್ತಾ ಬಂದಳು, ಬಾಗಿಲ ಹತ್ತಿರ ಬಂದಾಗ ಮನೆಯಲ್ಲಿ ಮರೆತು ಬಂದ ನಾಚಿಕೆ ನೆನಪಾಯಿತೇನೊ-ಹೊಸ್ತಿಲಾಚೆಯೇ ನಿಂತಿದ್ದಾಳೆ'

—ಎಂದು ನಗುತ್ತಾ ಹೇಳಿ—

'ತಂದದ್ದನ್ನು ಬಾಗಿಲಿಗೇ ಒಪ್ಪಿಸಿ ಹೋಗುತ್ತೀಯಾ? ಒಳಗೆ ಬಾ'

—ಎಂದು ಹೊರಗೆ ನಿಂತ ಮಗಳನ್ನು ಒಳಗೆ ಬರುವಂತೆ ಕರೆದಳು ಹೆಗ್ಗಡತಿ.

ತಾಯಿಯ ರೂಪವನ್ನೇ ಕಂಡು ಮೆಚ್ಚಿಕೊಂಡ ಏಚಲಾಜೀವಿ, ಇನ್ನು ಆಕೆಯ ಮಗಳು ಹೇಗೋ ಎಂಬ ಹೆಣ್ಣಿಗೆ ಸಹಜವಾದ ಕುತೂಹಲದಿಂದ ತಾನೂ ಬಾಗಿಲ ಕಡೆ ನೋಡಿದಳು. ಆಕೆ ಬಾಗಿಲ ಕಡೆ ನೋಡಿದಾಗಲೇ ಹೊಸ್ತಿಲನ್ನು ದಾಟಿ ಒಳಗೆ ಪ್ರವೇಶಿಸಿದ ಶಾನ್ತಲೆಯೂ ಒಮ್ಮೆ ಮೊಗವೆತ್ತಿ ಏಚಲಾದೇವಿಯ ಕಡೆ ನೋಡಿದಳು.

ಶಾನ್ತಲೆಯನ್ನು ನೋಡಿದ ಏಚಲಾದೇವಿಯ ಕಣ್ಣಿದಿರು ಮಿಂಚು ಹೊಳೆದಂತಾಯಿತು. ಒಳಗೆ ಬಂದುದು ಹೆಣ್ಣಲ್ಲ, ಆ ಹೆಸರು ಧರಿಸಿದ ವಿದ್ಯುಲ್ಲತಾ ಕಾಂತಿಯಿಂದೊಡಗೂಡಿದ ಲಾವಣ್ಯಲತೆ ಎನಿಸಿತು.

ಅಲ್ಲಲ್ಲಿ ಜರತಾರಿಯ ಸಣ್ಣ ನಕ್ಷತ್ರಗಳು ನೆಯ್ದ ನಿಂಬೆಯ ಬಣ್ಣದ ದುಕೂಲವನ್ನುಟ್ಟು, ತಲೆಯಿಂದ ಹಿಡಿದು ಪಾದದವರೆಗೆ ಮೈ ಮುಚ್ಚುವ ಆಕಾಶ ನೀಲಿಯ ಬಣ್ಣದ ಅವಕುಂಠನವನ್ನು ಧರಿಯಿಸಿ, ನೀರ ಮೇಲೆ ತೇಲುವ ಹಂಸದಂತೆ, ನೆಲಕ್ಕೆ ಹೆಜ್ಜೆ ಸೋಕಿದುದೂ ಅರಿವಾಗದಂತೆ ನಡೆದು ಬಂದು, ಕೈಯಲ್ಲಿ ಹಿಡಿದ ಬೆಳ್ಳಿಯ ತಳಿಗೆಯನ್ನು ಏಚಲಾದೇವಿಯ ಮುಂದಿಟ್ಟು-

'ಒಪ್ಪಿಸಿಕೊಳ್ಳಬೇಕು'

—ಎಂದು ಹೇಳಿ, ನಮಸ್ಕರಿಸಿ ಅಷ್ಟು ದೂರದಲ್ಲಿ ತಲೆ ತಗ್ಗಿಸಿ ನಿಂತಳು ಶಾನ್ತಲೆ.

ಲಜ್ಜಾಭಾರ ವಿನಮ್ರ ಶಿರಳಾಗಿ ದೂರ ನಿಂತ ಶಾನ್ತಲೆಯನ್ನು ಕಂಡು, ಏಚಲಾದೇವಿ, ಆಕೆಯತ್ತ ಕೈ ಚಾಚಿ, ಹತ್ತಿರಕ್ಕೆ ಎಳೆದುಕೊಂಡು ತನ್ನ ಪಕ್ಕದಲ್ಲಿಯೇ ಕೂರಿಸಿಕೊಂಡು-

'ಹತ್ತಿರ ಕೂತುಕೋ ತಾಯಿ. ದೂರದಲ್ಲಿ ಮಿಂಚಿನ ಹಾಗೆ ಕಂಡೆ. ಹತ್ತಿರ ಹೇಗೆ ಕಾಣುತ್ತೀಯೋ ನೋಡೋಣ'

—ಎಂದು ಹೇಳಿ, ಆ ಮಾತು ಕೇಳಿ ಮತ್ತಷ್ಟು ನಾಚಿದ ಶಾನ್ತಲೆಯ ಮೊಗವನ್ನು ಆಛ್ಛಾದಿಸಿದ ಅವಕುಂಠನವನ್ನು ಓಸರಿಸಿ, ನೆಲದತ್ತ ಬಾಗಿದ ಮುಖದ ಗಲ್ಲವನ್ನು ಮೃದುವಾಗಿ ಹಿಡಿದು ಮೇಲೆತ್ತಿ ನೋಡಿದಳು.

ಕುಶಲ ಶಿಲ್ಪಿ ರೂಪಲಕ್ಷ್ಮಿಯನ್ನು ಕುರಿತು ತಪಸ್ಸು ಮಾಡಿ, ಆ ಆರಾಧನೆಯಿಂದ ಪುಟಗೊಂಡ ತನ್ನ ಪ್ರತಿಭೆಯೆಲ್ಲವನ್ನೂ ಧಾರೆ ಎರೆದು ಸೃಷ್ಟಿಸಿದಷ್ಟು ಕಮನೀಯವಾಗಿತ್ತು ಶಾನ್ತಲೆಯ ಮುಖ. ಒಳಗೆ ಹರಿವ ರಕ್ತದ ಕಾಂತಿಯಿಂದ ಅರುಣ ವರ್ಣವಾಗಿ, ತೊಳೆದ ಕನ್ನಡಿಯಂತೆ ಧಳಧಳಿಸುವ ಕಪೋಲಗಳು, ಹವಳದ ಬಣ್ಣದ ತುಂಬು ತುಟಿಗಳು, ಮಿಂಚಿನ ಮರಿಗಳೆರಡನ್ನು ನೀರಿನಲ್ಲಿ ಸೆರೆಯಿಟ್ಟಂತೆ ಧಳಧಳಿಸುವ ಕಣ್ಣುಗಳು, ಆ ಕಣ್ಣು ತುಟಿಗಳ ಮಧ್ಯೆ ಸೌಂದರ್ಯ ಸೇತುವಿನಂತೆ ರಂಜಿಸುವ ಎಸಳಾದ ನಾಸಿಕ, 'ಇಗೋ ಈಕೆಯ ಸೌಂದರ್ಯವೆಲ್ಲ ಇಲ್ಲಿದೆ' ಎಂದು ಬೊಟ್ಟಿಟ್ಟು ತೋರಿಸಿದಂತೆ, ಮುಂದಲೆಯ ಅಳಕಾವಳಿಯಿಂದಲಂಕೃತವಾದ, ದಂತದ ಫಲಕದಂಥ ಹಣೆಯ ಮೇಲಿಟ್ಟ ಕುಂಕುಮದ ಸಣ್ಣ ಬೊಟ್ಟು-ಒಂದೊಂದೂ ಏಚಲಾದೇವಿಯ ಕಣ್ಣಲ್ಲಿ ಬಿಂಬಿಸಿ ಹೃದಯವನ್ನು ಗೆದ್ದು ಸೆರೆ ಹಿಡಿದುವು.

ಏಚಲಾದೇವಿ ಸ್ವಯಂ ಆರಿಸಿದ ಆಣಿಮುತ್ತಿನಂಥ ರೂಪವತಿ. ತನ್ನ ಸೌಂದರ್ಯವನ್ನೇ ಆಕೆ ಎಷ್ಟೋ ಬಾರಿ ಮುಕುರದಲ್ಲಿ ನೋಡಿಕೊಂಡು 'ನನಗಿಂತ ಸೌಂದರ್ಯವತಿಯರು ಈ ಲೋಕದಲ್ಲಿರುವುದು ಸಾಧ್ಯವಿಲ್ಲ' ಎಂದುಕೊಂಡಿದ್ದಳು. ಹಾಗೇ ಜನ ಸೌಂದರ್ಯವತಿಯರು ಎಂದ ಎಷ್ಟೋ ಹೆಣ್ಣುಗಳನ್ನು ನೋಡಿದ್ದಳು. ಆದರೆ ಶಾನ್ತಲೆಯ ಮುಖವನ್ನು ನೋಡಿದಾಗ 'ರೂಪವತಿ ಎಂದರೆ ಈಕೆ ಈಕೆಯ ಮುಂದೆ ನಾವೆಲ್ಲಾ, ಈ ಲಾವಣ್ಯಕ್ಕೆ ಎಲ್ಲಿ ದೃಷ್ಟಿಯಾದೀತೋ ಎಂದು ಬ್ರಹ್ಮ ಸೃಷ್ಟಿಸಿದ ದೃಷ್ಟಿದೋಷದ ಗೊಂಬೆಗಳು ನನ್ನಲ್ಲೂ ಬೆಳಕಿದೆ ಎಂದು ಮಿಂಚಿನಿದಿರು ಹಾರಿದ ಮಿಣುಕು ಹುಳುಗಳು-ಅಷ್ಟೆ' ಎನಿಸಿತು.

ತನ್ನ ಕಣ್ಣಿದುರು ಕುಳಿತ ಆ ಸೌಂದರ್ಯ ಖನಿಯನ್ನು, 'ಆಕೆ ಹೊಸಬಳು, ಪಕ್ಕದಲ್ಲಿ ಆಕೆಯ ತಾಯಿದ್ದಾಳೆ. ಹೊಸಬರನ್ನು ಹಾಗೆ ದೃಷ್ಟಿಸಿ ನೋಡುವುದು ತಪ್ಪು' ಎನ್ನುವುದೆಲ್ಲವನ್ನೂ ಮರೆತು, ಮೂಕಳಾಗಿ ನೋಡುತ್ತಾ ಕುಳಿತಳು ಏಚಲಾದೇವಿ.

'ಅವ್ವೆ, ಇವೆಲ್ಲಿಯ ಮಲ್ಲಿಗೆಯ ಹೂವು? ಎಷ್ಟು ವಾಸನೆಯಾಗಿದೆ'

—ಎಂದು ಪಕ್ಕದ ಕೊಠಡಿಯಿಂದ ತನ್ನ ಪ್ರಸಾಧನವನ್ನು ಮುಗಿಸಿಕೊಂಡು, ತಾಯಿಯ ಬಳಿ ಬಂದು, ಆಕೆಯ ಇದಿರಿನ ಬೆಳ್ಳಿಯ ಹರಿವಾಣದ ಮೇಲೆ ಹೊದಿಸಿದ ಒದ್ದೆಯ ಬಟ್ಟೆಯನ್ನು ತೆಗೆದು ಅದರಲ್ಲಿ ಬೆಳದಿಂಗುಳನ್ನೇ ಹಿಡಿದು ಹೂವಾಗಿ ಕೊರೆದಂತೆ ಕಾಣಿಸುವ ದುಂಡುಮಲ್ಲಿಗೆಯ ದಂಡೆಗಳನ್ನು ನೋಡಿ, ಅದರ ಸೌಂದರ್ಯ, ಪರಿಮಳವನ್ನು ಮೆಚ್ಚಿಕೊಂಡ ವಾಸನ್ತಿಕೆ ಮಾತನಾಡಿದಾಗಲೇ ಏಚಲಾದೇವಿಗೆ ಮೈ ತಿಳಿದದ್ದು ಹಾಗೆ ಎಚ್ಚರವಾಗಿ, ತನ್ನ ಮೈಮರೆವಿಗೆ ತಾನೇ ನಾಚಿ ಶಾನ್ತಲೆಯ ಕೆನ್ನೆಗಳನ್ನು ನೇವರಿಸಿ, ತನ್ನ ಕೆನ್ನೆಯ ಮೇಲೆ ಕೈಬೆರಳುಗಳಿಂದ ನೆಟಿಕೆ ತೆಗೆದು, ವಾಸನ್ತಿಕೆಯ ಮಾತೇ ಕಿವಿಗೆ ಬೀಳದವಳಂತೆ, ತನ್ನ ಹತ್ತಿರದಲ್ಲಿ ಕುಳಿತ ಹೆಗ್ಗಡತಿಯತ್ತ ತಿರುಗಿ-

'ದೇವರು ನನಗೆ ಕಣ್ಣು ಕೊಟ್ಟದ್ದು ಈ ದಿನ ಸಾರ್ಥಕವಾಯಿತು. ಯಾವ ದೇವಿಯನ್ನು ಉಪಾಸನೆ ಮಾಡಿ, ಈಕೆಯನ್ನು ಮಗಳಾಗಿ ಪಡೆದಿರಿ. ಆ ಮಂತ್ರ ಪ್ರತವನ್ನು ನಮಗೂ ಅಷ್ಟು ಹೇಳಿಕೊಡಿ'

—ಎಂದಳು.

ಏಚಲಾದೇವಿ ಹೇಳಿದ ಮಾತನ್ನು ಕೇಳಿದ ಹೆಗ್ಗಡತಿ ನಕ್ಕು, ಏಚಲಾದೇವಿಯ ಬಳಿಯಲ್ಲಿ ಎಲೆಯ ಮರೆಯ ಹೂವಿನಂತೆ ನಿಂತ ವಾಸನ್ತಿಕೆಯತ್ತ ನೋಡಿ-

'ಚೆನ್ನಾಯಿತು. ಬಂಗಾರ ಮಾಡುವುದನ್ನು ಕಲಿತವರು, ಹೆಂಚಿನ ಬಿಲ್ಲೆ ಮಾಡುವುದು ಹೇಗೆ ಎಂದು ಕೇಳಿದ ಹಾಗಿದೆ ನಿಮ್ಮ ಮಾತು. ಆ ಸೊಟ್ಟಮೋರೆಯವಳನ್ನು ಏನೆಂದು ಮೆಚ್ಚಿಕೊಳ್ಳುತ್ತೀರ-ಬಿಡಿ'

—ಎಂದಳು.

'ಉಂಟೆ....ಉಂಟೆ. ಹಾಗಾಡಬಾರದು. ಈಕೆ ನೀವು ಹಡೆದು ಪಡೆದ ಮಗಳಲ್ಲ, ಸಾಕ್ಷಾತ್ ರಾಜರಾಜೇಶ್ವರಿಯೇ ಮನುಷ್ಯಳಾಗಿ ಹುಟ್ಟಬೇಕೆಂದು ಬಯಸಿ ಬಂದವಳು. ಅದರಲ್ಲಿ ದೋಷ ಹುಡುಕುವುದಿರಲಿ, ಮೆಚ್ಚುವುದೂ ಅಪಚಾರವೇ ಆಗುತ್ತದೇನೋ. ಇಂಥವಳನ್ನು ಮಗಳಾಗಿ ಪಡೆದ ನೀವು ಭಾಗ್ಯವಂತರು. ಅಷ್ಟಕ್ಕಿಂತ ಹೆಚ್ಚೇನು ಹೇಳಲಿ? ಮನೆಗೆ ಹೋದ ಕೂಡಲೇ ಅಷ್ಟು ಮೆಣಸಿನಕಾಯಿ ನಿವಾಳಿಸಿ ಕೆಂಡಕ್ಕೆ ಹಾಕಿಸಿ. ನನ್ನ ಕಣ್ಣ ದೋಷ ತಾಕದಿರಲಿ.'

'ಆಯಿತು-ನಾನೇಕೆ ಬೇಡವೆನ್ನಲಿ ಹೂವನ್ನು ಹೊಗಳಿದರೆ ಬಳ್ಳಿಗೆ ತಾನೇ ಆ ಕೀರ್ತಿ! ಹೇಗೂ ಎರಡು ದಿನ ಇಲ್ಲಿರುತ್ತೀರಲ್ಲ-ಎಷ್ಟು ಬೇಕೋ ಅಷ್ಟು ನೋಡುವಿರಂತೆ. ಈಗ ಭೋಜನಕ್ಕೆ ಏಳಿ. ಈಗಾಗಲೇ ಸಾಕಷ್ಟು ಹೊತ್ತಾಯಿತು.'

—-ಎಂದು ಹೆಗ್ಗಡತಿ ಏಚಲಾದೇವಿಗೆ ಮರೆತ ಮಾತನ್ನು ಜ್ಞಾಪಿಸಿ—

'ಶಾನ್ತಲಾ, ಇಲ್ಲಿಗೆ ಹೂವು ಕೊಡುವ ನೆಪದಲ್ಲಿ ಬಂದು ಹೊಗಳಿಸಿಕೊಂಡದ್ದಾಯಿತಲ್ಲಾ ಇನ್ನು ಹೋಗಿ, ಭೋಜನಶಾಲೆಯಲ್ಲಿ ಎಲ್ಲಾ ಸಿದ್ಧವಾಗಿದೆಯೇನೋ ನೋಡು'

—ಎಂದು ಮಗಳಿಗೆ ಅಪ್ಪಣೆ ಮಾಡಿದಳು.

'ಊಟಕ್ಕೆ ಈಗಲೇ ಏನು ಅವಸರ. ಇನ್ನೂ ಗಂಡಸರ ಸ್ನಾನವೇ ಮುಗಿದಿದೆಯೊ ಇಲ್ಲವೋ. ಅವರ ಸ್ನಾನದ ಕೆಲಸ ಮುಗಿಯುವ ವೇಳೆಗೆ ದೇವರ ದರ್ಶನ ಮಾಡಿಕೊಂಡು ಬರೋಣವೆಂದು ನಾನೇ ಬೇಗ ಸ್ನಾನ ಮುಗಿಸಿದೆ. ನಿಮಗೂ ಬಿಡುವಿದ್ದು ಜೊತೆಗೆ ಬಂದರೆ ಮೇಲು, ಇಲ್ಲವಾದರೆ ದಾರಿ ತೋರಿಸುವವರನ್ನು ಯಾರನ್ನಾದರೂ ಕಳಿಸಿಕೊಟ್ಟರೂ ಆಯಿತು.'

—ಎಂದಳು ಏಚಲಾದೇವಿ, ತಾನು ದೇವಾಲಯಕ್ಕೆ ಹೋಗಿ ದೇವರದರ್ಶನ ಮಾಡಿಕೊಂಡು ಬರಬೇಕೆಂದಿದ್ದುದನ್ನು ಜ್ಞಾಪಿಸಿಕೊಂಡು. ಆ ಮಾತಿನೊಂದಿಗೆ, ಅದುವರೆಗೆ ಮರೆತು ಹೋದ ಉಳಿದ ಮಾತುಗಳೂ ನೆನವಾಗಿ ಹೇಳಿದಳು—

'ಅಂದಹಾಗೆ-ನೀವು ಬಂದಾಗ ನಿಮ್ಮನ್ನು ಒಂದು ಮಾತು ಕೇಳಬೇಕು ಎಂದುಕೊಂಡೆ, ಮರತೇ ಹೋಗಿತ್ತು.'

'ಏನಾಗಬೇಕಿತ್ತು ಹೇಳಿ?'

—ಹೆಗ್ಗಡತಿ ಕೇಳಿದಳು.

'ಏನು ಹೇಳಿಕೊಳ್ಳುವುದೋ-ಹೇಳುವುದಕ್ಕೇ ಬೇಸರವಾಗುತ್ತದೆ.'

—ಇದ್ದಕ್ಕಿದ್ದ ಹಾಗೇ ಜಡವಾದ ಧ್ವನಿಯಲ್ಲಿ ಹೇಳಿದಳು ಏಚಲಾದೇವಿ—

'ಬಳ್ಳಿಗಾಮೆಯಲ್ಲಿ ಬಹಳ ಒಳ್ಳೆ ವೈದ್ಯರು, ಮಂತ್ರ ತಂತ್ರ ತಿಳಿದವರು ಇದಾರಂತೆ. ಅಂಥವರು ಯಾರದಾದರೂ ಪರಿಚಯವಿದೆಯೇ ನಿಮಗೆ?'

ಎತ್ತಲ ಮಾತು ಎತ್ತಲೋ ತಿರುಗಿದುದು ಅರಿವಾದ ಹೆಗ್ಗಡತಿ, ತಮ್ಮಿಬ್ಬರ ಮಾತು ಕೇಳುತ್ತಾ, ಹೋಗುವುದೋ ಬೇಡವೋ ಎಂದು ಚಿಂತಿಸುತ್ತಿದ್ದ ಶಾನ್ತಲೆಗೆ—

'ನೀನು ಹೋಗಿ, ದೇವಿಯವರು ದೇವಾಲಯಕ್ಕೆ ಹೋಗಬೇಕಂತೆ ಎಂಬುದನ್ನು ಹೆಗ್ಗಡೆಯವರಿಗೆ ಹೇಳು. ಮೇನೆ ಸಿದ್ಧವಾದ ಕೂಡಲೇ ಹೇಳಿಕಳಿಸು.'

—ಎಂದು ಮಗಳಿಗೆ ಅಲ್ಲಿಂದ ಹೊರಡಲು ಸೂಚಿಸಿದಳು.

ಹೆಗ್ಗಡತಿಯ ಮಾತಿನೊಳಗೆ ಹುದುಗಿದ ಸೂಕ್ಷ್ಮವನ್ನರಿತ ಏಚಲಾದೇವಿ-

'ವಾಸನ್ತಿಕೆ, ನನಗೆ ಹೆಗ್ಗಡತಿಯವರ ಜೊತೆಯಾಯಿತು. ನಿನಗೆ ಶಾನ್ತಲೆ ಜೊತೆಯಾಯಿತು. ಚೆನ್ನಾಗಿ ಪರಿಚಯಮಾಡಿಕೊ, ಆಕೆಯ ಜೊತೆಯಲ್ಲಿದ್ದರೆ, ಆ ಗಾಳಿ ಸೋಕಿ ನಿನ್ನ ಮೈಗೂ ಅಷ್ಟು ಶಾಂತಿ ಬರಬಹುದು'

—ಎಂದು ತನ್ನ ಮಗಳಿಗೂ, ಶಾನ್ತಲೆಯ ಜೊತೆಯಲ್ಲಿ ಹೋಗಲು ತಿಳಿಸಿ, ಶಾನ್ತಲೆಗೆ—

'ಕಂದಾ, ನಿನ್ನ ರೂಪು ನನ್ನ ಮಗಳಿಗೆ ಕೊಡುವುದು ಆಗದ ಕೆಲಸ, ಅದು ಬೇಡ-ನಿನಗೆ ಗೊತ್ತಿದ್ದ ಯಾವುದಾದರೂ ಹಾಡು ಹಸೆಯನ್ನು ಹೇಳಿಕೊಡು. ಅವಳು ಇಲ್ಲಿರುವಷ್ಟು ದನ ಅಂಥದು ಏನನ್ನಾದರೂ ಕಲಿಯಲಿ'

—ಎಂದು ಹೇಳಿ, ಅವರಿಬ್ಬರನ್ನು ಜೊತೆ ಮಾಡಿ, ಅಲ್ಲಿಂದ ಕಳಿಸಿದಳು.

ಹುಡುಗರಿಬ್ಬರೂ ಹೋದ ಬಳಿಕ ಏಚಲಾದೇವಿ, ಹೆಗ್ಗಡತಿಗೆ ಬಲ್ಲಾಳನ ಖಾಯಿಲೆಯ ವಿಷಯ, ದಾರಿಯಲ್ಲಿ ಬರುತ್ತಾ ಜ್ವರ ಬಂದುದು ಎಲ್ಲವನ್ನು ತಿಳಿಸಿ—

'ಯಾವ ಜನುಮದಲ್ಲಿ ನಾನೇನು ಪಾಪ ಮಾಡಿದ್ದೆನೋ, ಅದೀಗ ಬಲ್ಲಾಳನ ಜೀವವನ್ನು ಹೀಗೆ ಅರೆದು ತಿನ್ನುತ್ತಿದೆ. ಯಾರ ಕೈ ಪುಣ್ಯದಿಂದಲಾದರೂ ಅವನು ಎದ್ದು ಓಡಾಡಿಕೊಂಡಿರುವುದಾದರೆ ಸಾಕು'

—ಎಂದಳು ಹೃದಯದಲ್ಲಿ ಹುದುಗಿದ ದುಃಖ ಮಾತಿನಲ್ಲಿ ಮರುಕಳಿಸಿ, ಕಂಬನಿಯಾಗಿ ಹರಿಯುತ್ತಿರಲು.

ಎರಡು ಹೃದಯಗಳನ್ನು ಒಂದಾಗಿ ಬೆಸೆಯಲು ದುಃಖಕ್ಕಿಂತ ಹೆಚ್ಚಿನ ಸಾಧನ ಮತ್ತೊಂದಿಲ್ಲ ಕಣ್ಣಿನಲ್ಲಿ ನೀರಿಟ್ಟುಕೊಂಡು ಏಚಲಾದೇವಿ ಹೇಳಿದುದನ್ನು ಕೇಳಿ ಹೆಗ್ಗಡತಿಯ ಕಣ್ಣಿನಿಂದಲೂ ನೀರು ಹರಿಯಿತು. ತನ್ನ ಕಣ್ಣಿನಿಂದಿಳಿಯುವ

ಕಂಬನಿಯನ್ನು ತನ್ನ ಎದುರಿಗೆ ಕುಳಿತವಳು ಮಹಾಮಂಡಲೇಶ್ವರನ ಸೊಸೆ, ತಾನು ಸಾಮಾನ್ಯ ಹೆಗ್ಗಡೆಯ ಮಡದಿ ಎಂಬ ಅಂತಸ್ತಿನ ಭೇದ ಎಲ್ಲವನ್ನೂ ಮರೆತು, ಎಲ್ಲವನ್ನೂ ಮರೆಸುವ ಹೆಣ್ಣಿನಲ್ಲಿಯ ತಾಯ್ತನ ತಾನೇತಾನಾಗಿ ವಿಝ್ರುಂಭಿಸಿ, ಸೆರಗಿನ ಕುಡಿಯಿಂದ ಏಚಲಾದೇವಿಯ ಕಣ್ಣನ್ನು ಒರೆಯಿಸಿ—

'ಈ ಅಲ್ಪಕ್ಕೆ ನೀವು ಕಂಬನಿಗರೆಯುವುದೇ? ಬಿಡಿ ದೇವರ ಅನುಗ್ರಹಕ್ಕೆ ಅಸಾಧ್ಯವಾದುದು ಯಾವುದಿದೆ. ಮನುಷ್ಯನ ಕಷ್ಟ ಪರಿಹರಿಸುವುದಕ್ಕೆಂದೇ ಒಬ್ಬರಲ್ಲ ಇಪ್ಪತ್ತುನಾಲ್ಕು ಮಂದಿ ತೀರ್ಥಂಕರರಿದಾರ, ಮೂವತ್ತು ಮೂರು ಕೋಟಿ ದೇವತೆಗಳಿದಾರೆ. ಒಬ್ಬ ಮುನಿಸಿಕೊಂಡರೆ, ಅನುಗ್ರಹಿಸುವುದಕ್ಕೆ ಹತ್ತು ಜನ. ಅವರಲ್ಲಿ ಯಾರೊಬ್ಬರ ಕಾಲನ್ನಾದರೂ ಹಿಡಿದು 'ನೀನೇ ಗತಿ' ಎಂದು ಬೇಡಿದರೆ, ತೀರುತ್ತದೆ. ಸುಮ್ಮನೆ ಕೊರಗಬೇಡಿ'

—ಎಂದು ಸಮಾಧಾನ ಹೇಳಿದಳು ಹೆಗ್ಗಡತಿ.

'ನಮಗೆ ದೈವಾನುಗ್ರಹ ಉಂಟೋ ಇಲ್ಲವೋ? ಹೆಗ್ಗಡತಿಯವರ ಬಾಯಿ ಹರಕೆಯಿಂದಲಾದರೂ ಅಷ್ಟಾದರೆ-ನಾನು ಬದುಕಿದೆ.'

—ಎಂದಳು ಏಚಲಾದಜೇವಿ.

'ನನ್ನ ನಾಲಗೆಗೆ ಅಷ್ಟು ಪುಣ್ಯವಿರುವುದಾದರೆ ಅದೂ ಆಗಲಿ. ಆದರೆ ಒಂದು ಮಾತು...'

'ಏನು?'

'ನನಗೆ ನನ್ನ ತಂದೆತಾಯಿಂದಿರು ಇಟ್ಟ ಹೆಸರಿದೆ ಅದನ್ನು ಹಿಡಿದು ಕರೆಯಬೇಕು. ಮಾತು ಮಾತಿಗೆ ಹೆಗ್ಗಡತಿ ಎಂದು ಕರೆಯಬಾರದು'

—ಎಂದು ಕೇಳಿದಳು ಹೆಗ್ಗಡತಿ.

’ಅದೂ ನಿಜವೇ. ನಾನೇ ನಿಮ್ಮ ಹೆಸರೇನು ಎಂದು ಕೇಳಬೇಕೆಂದಿದ್ದೆ. ನನ್ನ ಕಥೆ ಹೇಳುವುದರಲ್ಲಿ ಅದು ಮರತೇ ಹೋಗಿತ್ತು.’

’ಹೋಗಲಿ-ಈಗಲಾದರೂ ನನ್ನ ಹೆಸರು ಹೇಳಲೇ? ಆ ಹೆಸರು ಹಿಡಿದೇ ಕರೆಯುತ್ತೀರಾ?’

’ಹೂ.’

’ನನ್ನ ಹೆಸರು ಮಾಚಲೆ.’

’ಹಾಗಾದರೆ ನನ್ನದೂ ನಿಮಗೆ ತಿಳಿದಿರಲಿ-ನನ್ನ ಹೆಸರು ಏಚಲೆ. ನನ್ನ ಹೆಸರನ್ನು ನೀವು ಮರೆತಾಗ, ನಿಮ್ಮದೂ ನನಗೆ ಮರೆತುಹೋಗುತ್ತದೆ.’

—ಎಂದಳು ಏಚಲಾದೇವಿ.

ಆ ಪರಸ್ಪರ ನಾಮ ಪರಿಚಯ, ಅದಾದ ರೀತಿ, ಆ ಎರಡು ಹೆಣ್ಣುಗಳ ಹೃದಯದಲ್ಲಿ ಮೊಳೆತ ಸ್ನೇಹವನ್ನು, ಮಂತ್ರದೋಹದದಿಂದೆಂಬಂತೆ ಬಲಿಸಿ, ಒಂದಕ್ಕೆ ಒಂದನ್ನು ಹಬ್ಬಿಸಿ ಬೆಸೆದು ಬೆಳೆಯಿಸಿತು.

’ಅಬ್ಬಾ! ನಾನು ನನ್ನ ಹೆಸರು ಹೇಳಿಕೊಳ್ಳಬೇಕು ಎಂದು ಆತುರ ಮಾಡಿದರೆ, ಅದಕ್ಕೆ ಬೇರೆ ಬಣ್ಣವನ್ನೇ ಕೊಟ್ಟುಬಿಟ್ಟರಲ್ಲಾ, ಇಷ್ಟು ಜಾಣ್ಮೆ ಇಲ್ಲದಿದ್ದರೆ, ದೇಶವನ್ನೆಲ್ಲಾ ಆಳುವ ದೊರೆಯನ್ನೇ ಅಳುತ್ತಿದ್ದೀರಾ?’

—ಎಂದಳು ಮಾಚಿಕಬ್ಬೆ ನಗುತ್ತಾ.

’ನಿಜ, ನಿಜ-ಇಂಥ ಮಾತಿನ ಕೌಶಲ್ಯವಿಲ್ಲದಿದ್ದರೆ, ನೀವು ಯಾವುದೋ ದೇವತೆಯನ್ನು ಮರುಳು ಮಾಡಿ ಅಂಥ ಮಗಳನ್ನು ಪಡೆಯುತ್ತಿದ್ದಿರಾ?’

—ಎಂದು ಏಚಲಾದೇವಿಯೂ ದುಃಖವನ್ನು ಮರೆತು ನಗುತ್ತಾ ಹೇಳಿದಳು.

’ನನ್ನನ್ನು ಹೊಗಳುವುದು ಹಾಗಿರಲಿ. ಕಣ್ಣೀರಿನಲ್ಲಿ ಕಣ್ಣಿನ ಕಾಡಿಗೆಯೆಲ್ಲಾ ಕದಡಿಹೋಯಿತು. ಮೊದಲದನ್ನು ತಿದ್ದಿಕೊಳ್ಳಿ. ಮೇನೆ ಸಿದ್ದವಾಗಿದ್ದರೆ ಹೋಗಿ ದೇವರ ದರ್ಶನದ ಕೆಲಸ ಮುಗಿಸಿಕೊಂಡು ಬಂದು ಊಟಕ್ಕೇಳೋಣ. ಮೊದಲೇ ಹೆಗ್ಗಡೆಯವರು, ಮಾತಿ ಮಾತಿಗೂ ’ಮಾಚಿ, ನಿನ್ನ ಬಾಯಿ ಬುಡುಬುಡಿಕೆ’ ಎಂದು ಆಕ್ಷೇಪಿಸುತ್ತಾರೆ’

—ಎಂದು, ಮಾಚಿಕಬ್ಬೆ ಏಚಲಾದೇವಿಗೆ ಮತ್ತೆ ಮರೆತುಹೋದ ದೇವತಾ ದರ್ಶನದ ವಿಷಯವನ್ನು ನೆನಪಿಸಿದಳು.

೪

ದ್ವಾರಸಮುದ್ರದಿಂದ ಬಂದವರೆಲ್ಲರದೂ ಸ್ನಾನ-ಊಟಗಳು ಮುಗಿಯುವ ವೇಳೆಗೆ, ಬಲ್ಲಾಳನ ಆರೋಗ್ಯ ಪರೀಕ್ಷಗೆಂದು, ಹೆಗ್ಗಡೆ ಮಾರಸಿಂಗಮಯ್ಯ ವೈದ್ಯರನ್ನು ಕರೆತಂದರು. ಆಗ ಇಳಿ ಮಧ್ಯಾಹ್ನದ ವೇಳೆಯಾದುದರಿಂದ ನಾಡೀಪರೀಕ್ಷೆಗೆ ಅವಕಾಶವಿರಲಿಲ್ಲವಾಗಿ, ವೈದ್ಯರು ಏಚಲಾದೇವಿಯಿಂದ ರೋಗ ಲಕ್ಷಣಗಳನ್ನು ಕೇಳಿಕೊಂಡು—

'ಗಾಬರಿ ಏನೂ ಇಲ್ಲ. ಪಿತ್ತ ಪ್ರಕೋಪದಿಂದ ಹೀಗಾಗಿರಬಹುದೆಂದು ಕಾಣುತ್ತದೆ. ನಾಳೆ ಬೆಳಿಗ್ಗೆಯೇ ಬಂದು ಪರೀಕ್ಷೆ ಮಾಡಿ ನೋಡುತ್ತೇನೆ.'

—ಎಂದು ಹೇಳಿ, ತಾತ್ಕಾಲಿಕ ಉಪಶಮನಕ್ಕೆ, ತಮ್ಮೊಂದಿಗೆ ತಂದ ಕುಪ್ಪಿಯ ಮಾತ್ರೆಯನ್ನು ಎರಡು ಸುತ್ತು ಅರೆದು, ಅದನ್ನು ಹಾಲಿನಲ್ಲಿ ಬಲ್ಲಾಳನಿಗೆ ಕುಡಿಸಿ ಹೋದರು.

ವೈದ್ಯರು 'ಭಯವಿಲ್ಲ' ಎಂದು ಹೇಳಿದುದರಿಂದ ಎಲ್ಲರ ಮನಸ್ಸಿಗೂ ಸಮಾಧಾನವಾಗಿ ಮಾರಸಿಂಗಮಯ್ಯ—

'ಮನಸ್ಸಿಗೆ ಈ ಚಿಂತೆಯೂ ತೀರಿತಲ್ಲ. ಎರಡು ಮೂರು ದಿನದ ಪ್ರಯಾಣದಿಂದ ಬಳಲಿದೀರ. ಒಂದು ಗಳಿಗೆ ವಿಶ್ರಾಂತಿ ತೆಗೆದುಕೊಳ್ಳಿ. ನಿಮ್ಮ ನಿದ್ದೆ ತೀರುವ ವೇಳೆಗೆ ಮತ್ತೆ ಬಂದು ಕಾಣಿಸಿಕೊಳ್ಳುತ್ತೇನೆ'

—ಎಂದು ಹೇಳಿದ.

'ನಿಜ, ನಿಜ, ಒಂದು ಗಳಿಗೆ ಹಾಸಿಗೆಯ ಮೇಲೆ ಮೈ ಚಾಚುವವರೆಗೂ ಈ ಅನ್ನದ ಅಮಲು ಇಳಿಯುವುದಿಲ್ಲ'

—ಎಂದು ವಿನಯಾದಿತ್ಯನೂ, ಮನಸ್ಸು ಹಗುರವಾಗಿ, ಮೈ ಜಡವಾಗುತ್ತಾ ಆಕಳಿಸಿ ಹೇಳಿದ.

'ನೀವು ಮಲಗಿ' ಎಂದು ಮಾರಸಿಂಗಮಯ್ಯ ಹೇಳಿ ಹೋದರೂ, ನಿದ್ರೆ ಮಾಡಬೇಕು ಎಂದು ಮೈ ಬಯಸುತ್ತಿದ್ದರೂ, ವಿನಯಾದಿತ್ಯನಿಗೆ ಆ ದಿನ ಮಧ್ಯಾಹ್ನ ಹಾಸಿಗೆಯ ಮೇಲೆ ಮೈ ಚಾಚುವ ಯೋಗವಿದ್ದಂತಿರಲಿಲ್ಲ.

ಮಾರಸಿಂಗಮಯ್ಯ ಹೋಗುತ್ತಿದ್ದ ಹಾಗೇ ಚಕ್ರವರ್ತಿಗಳ ಬಿಡಾರದಿಂದ ಬಂದ ಹೆಗ್ಗಡೆಗಳು 'ಸಂಜೆಯೋಲಗದಲ್ಲಿ ಚಕ್ರವರ್ತಿಗಳು ನಿಮ್ಮನ್ನು ಕಾಣಲು ಅಪೇಕ್ಷಿಸುತ್ತಾರೆ' ಎಂಬ ಸುದ್ದಿಯನ್ನು ಹೇಳಿ, ಓಲಗಕ್ಕೆ ತೆರಳುವ ಸಿದ್ಧತೆಗಳ ಸಡಗರ ಆರಂಭವಾಯಿತು. ಪ್ರಯಾಣದಿಂದ ಸಾಕಷ್ಟು ದಣಿದು, ಒಂದು ಗಳಿಗೆ ಉರುಳಿಕೊಳ್ಳಬೇಕು ಎಂದಿದ್ದರೆ, ಚಕ್ರವರ್ತಿಗಳು ಅದಕ್ಕೂ ಅವಕಾಶ ಕೊಡದಿದ್ದುದನ್ನು ನೋಡಿ, ಅಜ್ಜನಲ್ಲಿ ತನಗಿದ್ದ ಸಲಿಗೆಯ ಬಲದ ಮೇಲೆ ವಿಷ್ಣುವರ್ಧನ—

'ಚಕ್ರವರ್ತಿಗಳಿಗೆ ಇದೊಳ್ಳೆ ಆತುರವಾಯಿತಲ್ಲಾ ಅಜ್ಜಾ ಅವರನ್ನು ನೋಡಲಿಕ್ಕೆಂದೇ ಬಂದವರು, ಅವರನ್ನು ನೋಡದೆ ಹಾರಿ ಹೋಗುತ್ತಿದ್ದೆವೇ? ಬೆಳಗಿನವರೆಗೂ ಬಿಡುವು ಕೊಟ್ಟಿದ್ದರೆ ಆಗುತ್ತಿರಲಿಲ್ಲವೇ?'

—ಎಂದು ತನಗಾದ ಬೇಸರವನ್ನು ನಗುಮಾತಾಗಿ ಮಾರ್ಪಡಿಸಿ ಹೇಳಿದ.

'ಇದು ಆತುರವಲ್ಲ ಬಿಟ್ಟಿಯಣ್ಣ ವಿಶ್ವಾಸ. ಹೊಯ್ಸಳರೆಂದರೇ ಚಕ್ರವರ್ತಿಗಳಿಗೆ ತುಂಬಾ ಅಭಿಮಾನ. ಅದರಲ್ಲೂ ನಿನ್ನ ಅಪ್ಪಾಜಿಯವರಲ್ಲಿ ಇದ್ದದ್ದೂ

ಹೆಚ್ಚಿಗೆ ಪ್ರೇಮ. ನಾನೂ ಚಕ್ರವರ್ತಿಗಳನ್ನು ನೋಡಿ ನಾಲ್ಕಾರು ಸಂವತ್ಸರಗಳುದುವು. ಎಷ್ಟಾದರೂ ನನ್ನ ಸೋದರಿಯ ಬಲ ಮಕ್ಕಳಲ್ಲವೇ ಚಕ್ರವರ್ತಿಗಳು. ಅದಕ್ಕೇ ಇಷ್ಟು ಅವಸರವಾಗಿ ಹೇಳಿ ಕಳಿಸಿದಾರೆ. ಅವರಿಗೆ ನಮ್ಮಲ್ಲಿಷ್ಟು ವಿಶ್ವಾಸವಿರುವುದು ನಮ್ಮ ಭಾಗ್ಯ.'

—ಎಂದು ವಿನಯಾದಿತ್ಯ ಮೊಮ್ಮಗನಿಗೆ ಸಮಾಧಾನ ಹೇಳಿದ.

'ಊಟ, ನಿದ್ರೆ, ವಿಶ್ರಾಂತಿಗಳಿಗೂ ಅವಕಾಶ ಕೊಡದ ವಿಶ್ವಾಸ ಇದೆಂಥದು ಅಜ್ಜ. ನೆಂಟರು, ಆಪ್ತರು ಎನ್ನುವ ವಿಶ್ವಾಸವಿದ್ದರೆ, ಪ್ರಯಾಣದಿಂದ ದಣಿದು ಬಂದ ನಮ್ಮನ್ನು ಚಕ್ರವರ್ತಿಗಳೇ ಇಲ್ಲಿಯವರೆಗೂ ಪಾದ ಬೆಳೆಯಿಸಿ ಬಂದು, 'ಕ್ಷೇಮವೇ?' ಎಂದು ವಿಚಾರಿಸಿಕೊಂಡು ಹೋಗಿದ್ದರೆ, ಮಾಡಬಾರದ ಕೆಲಸ ಮಾಡಿದ ಹಾಗಾಗುತ್ತಿತ್ತೆ?'

—ವಿಷ್ಣುವರ್ಧನ ತನ್ನ ಅಜ್ಜನ ಮಾತನು ನಂಬದವನಂತೆ ಚಂಡಿಸಿ ಕೇಳಿದ.

ಅಜ್ಜ-ಮೊಮ್ಮಗನ ಈ ವಾಗ್ವಾದವನ್ನು, ನಡುವೆ ಮಾತಾಡದೆ ಕೇಳುತ್ತಾ ಕುಳಿತಿದ್ದ ಎರೆಯಂಗದೇವ, ಚಕ್ರವರ್ತಿಯ ವಿಷಯದಲ್ಲಿ ಮಗ ಹೀಗೆ ಅಸಡ್ಡೆಯ ಮಾತನಾಡುವುದರಿಂದ, ತನ್ನ ತಂದೆಯ ಮನಸ್ಸಿಗೆ ಎಷ್ಟು ನೋವಾಗುವುದೆಂದು ತಿಳದಿದ್ದುದರಿಂದ, ಆ ಮಾತನ್ನು ಮುಂದೆ ಬೆಳೆಯಗೊಡಬಾರದು ಎಂದು—

'ಹೊಲ ಯಾವುದು ಹುಲ್ಲುಗಾವಲು ಯಾವುದು ಎಂದು ತಿಳಿಯದೆ ಹಚ್ಚಗಿದ್ದುದೆಲ್ಲಾ ನನ್ನ ಮೇವೇ ಎಂದು ತಿಳಿಯುವ ಹುಡುಗು ಬುದ್ಧಿಗೆ ನೀವು ಏನು ವಿವೇಚನೆ ಹೇಳಿ ಏನು ಉಪಯೋಗ? ನಿಮ್ಮ ಹೊತ್ತು ವ್ಯರ್ಥವಾಗುತ್ತದೆ-ಅಷ್ಟೆ ಅಪ್ಪಾಜಿ. ನೀವು ಹೋಗಿ ಮುಖ ಮಾರ್ಜನ ತೀರಿಸಿ, ಉಡುಪು ಧರಿಸಿ. ಓಲಗದ ವೇಳೆ ಸನ್ನಿಹಿತವಾಯಿತು.'

—ಎಂದು ಆ ಸಂಭಾಷಣೆಯನ್ನು ಅಲ್ಲಿಗೆ ಮುರಿದ.

'ನಿಜ-ನಿಜ-ವೃದ್ಧಾಪ್ಯಕ್ಕೆ ವಾಚಾಳತ್ವ ಬಹಳ. ಈ ಮಾತಿನಲ್ಲಿ ಓಲಗಕ್ಕೆ ಹೋಗಬೇಕು ಎಂಬುದೇ ಮರೆತುಹೋಗಿತ್ತು'

—ಎಂದುಕೊಳ್ಳುತ್ತಲೇ ವಿನಯಾದಿತ್ಯ ಸ್ನಾನಗೃಹದ ಕಡೆ ತೆರಳಿದ.

ಎರೆಯಂಗದೇವ ತಮ್ಮಿಬ್ಬರ ಮಾತು ಮುರಿದ ರೀತಿಯಲ್ಲೇ, ತನ್ನ ಮಾತಿನಿಂದ ಆತನಿಗೆ ಅಸಮಧಾನವಾಗಿದೆ ಎಂಬುದನ್ನರಿತುಕೊಂಡ ವಿಷ್ಣುವರ್ಧನ-

'ನಾನಾಡಿದುದು ತಪ್ಪು ಮಾತಾಗಿದ್ದರೆ ಕ್ಷಮಿಸಿ, ಅಪ್ಪಾಜಿ'

—ಎಂದು ಕೇಳಿದ.

'ನಿನ್ನದು ತಪ್ಪು ಮಾತೋ, ದುಡುಕು ಮಾತೋ-ಅದನ್ನು ವಿಮರ್ಶಿಸುವುದಕ್ಕೆ ನನಗೀಗ ವೇಳೆಯಿಲ್ಲ ಬಿಟ್ಟಿಯಣ್ಣ. ಆದರೆ ಇಷ್ಟು ತಿಳಿದುಕೋ. ನೀನು ನಮಗೆ ಬೇಕಾದವನು. ಆದುದರಿಂದ ಇತರರು ನಮ್ಮ ಇದುರಿಗೆ ನಿನ್ನನ್ನು ಆಡಿಕೊಂಡರೆ ನಮಗದು ಸಹನೆಯಾಗುವುದಿಲ್ಲ. ಚಕ್ರವರ್ತಿಗಳ ವಿಷಯವೂ ಅಷ್ಟೇ. ಅದಕ್ಕಿಂತ ಹೆಚ್ಚಾಗಿ ಬೆಳೆಯುವ ಬುದ್ಧಿ ಒಂದು ಮಾತನ್ನೂ ತಿಳಿದಿರಬೇಕು—'

'ಏನು ಅಪ್ಪಾಜಿ ?'

—ತಂದೆಯ ನಿರ್ದಾಕ್ಷಿಣ್ಯವಾದ ಮಾತಿನಿಂದ ಮೆತ್ತಗಾಗಿ ಕೇಳಿದ ವಿಷ್ಣುವರ್ಧನ.

'ಶ್ರೇಯೋಭಿಲಾಷಿಯಾದವನು ತನ್ನ ಅಭಿವೃದ್ಧಿ ಮಾರ್ಗವನ್ನು ಚಿಂತಿಸಬೇಕೇ ಹೊರತು, ಪರರ ದೋಷಾನ್ವೇಷಣೆಯಲ್ಲಿ ತನಗಿರುವ ಶಕ್ತಿಯನ್ನು ಅಪವ್ಯಯ

ಮಾಡಬಾರದು. ಮನಸ್ಸಿದ್ದರೆ ಯೋಚನೆ ಮಾಡಿ, ಇದರಲ್ಲಿ ಏನು ಹುರುಳಿದೆ ಎಂದು ಕಂಡುಕೋ. ಇಲ್ಲವಾದಲ್ಲಿ-ನಾವು ನಿನಗಿಂತ ಹಿರಿಯರು. ನಮ್ಮ ಮಾತಿಗೆ ಬೆಲೆ ಕೊಡಬೇಕು ಎಂಬ ಕಾರಣದಿಂದಲಾದರೂ, ಈ ಪರನಿಂದೆಯನ್ನು ಬಿಡು. ಆಯಿತೇ- ಇನ್ನು ನೀನೂ ಎದ್ದು ಓಲಗಕ್ಕೆ ಹೊರಡಲು ಸಿದ್ದನಾಗು.'

—ಎಂದು ಹೇಳಿ, ಎರೆಯಂಗದೇವ ಅಲ್ಲಿ ನಿಲ್ಲದೆ, ತಾನೂ ಓಲಗಕ್ಕೆ ಹೋಗುವುದಕ್ಕೆ ಸಿದ್ಧನಾಗಲು ಹೋದ.

'ಅಪ್ಪಾಜಿ ಇದೇನು ಹೇಳಿದರು?'

—ಎಂದು ಚಿಂತಿಸುತ್ತಲೇ ವಿಷ್ಣುವರ್ಧನ ತಾನೂ ಮುಖ ತೊಳೆಯಲು ಹೊರಟ.

*　　*　　*　　*　　*　　*

ನೀರಿಗೆ, ದೇವತಾಲಯಕ್ಕೆ ಸಮೀಪವಾಗಿ, ಭೋಗವಾಗಿ ಬೆಳೆದ ವೃಕ್ಷಗಳಿಂದ ಕಣ್ಣಿಗೆ ರಂಜಕವಾಗಿ, ರಾಜವಾಸಕ್ಕೆ ಪ್ರಶಸ್ತವಾದ ಬಳ್ಳಿಗಾಮೆಯ ಹುಲ್ಲೆ ಬಯಲಿನಲ್ಲಿ ಚಾಲುಕ್ಯ ಚಕ್ರವರ್ತಿಯ ತಾತ್ಕಾಲಿಕ ವಾಸಕ್ಕೆ, ಅರಮನೆಯನ್ನು ಹೋಲುವಂಥ ಹತ್ತಾರು ಗುಡಾರಗಳು ನಿರ್ಮಿತವಾಗಿದ್ದವು.

ಅವುಗಳಲ್ಲಿ ಮಧ್ಯವರ್ತಿಯಾಗಿ ಬಹು ವಿಶಾಲವಾಗಿ ಓಲಗಸಾಲೆಯ ಗುಡಾರವಿತ್ತು. ಪೂರ್ವಾಭಿಮುಖವಾದ ದ್ವಾರವನ್ನುಳ್ಳ, ಆ ಓಲಗ ಸಾಲೆಯ ಗುಡಾರದ ಮುಂಭಾಗದಲ್ಲಿ ಉನ್ನತವಾದ ಧ್ವಜಸ್ತಂಭ ನಿಲ್ಲಿಸಲ್ಪಟ್ಟು, ಅದರ ಅಗ್ರಭಾಗದ ಮೇಲೆ, ಚಾಲುಕ್ಯ ಚಕ್ರವರ್ತಿಯ ವರಾಹಧ್ವಜ ಗಾಳಿಯೊಂದಿಗೆ ಸರಸವಾಡುತ್ತಾ ವಿರಾಜಮಾನವಾಗಿತ್ತು.

ಚಕ್ರವರ್ತಿಗಳ ಪಾಳಯ ಇನ್ನೂ ಅಷ್ಟು ದೂರವಿದೆ ಎನ್ನುವಾಗಲೇ, ಭಯಂಕರವಾದ ಆಯುಧಗಳನ್ನು ಧರಿಸಿದ ಭಟರ ಕಾವಲು ಪಡೆಯ ಕೋಟೆ, ಆ ಪಾಳಯವನ್ನು ಸುತ್ತುವರಿದಿತ್ತು. ಓಲಗ ಸಾಲೆಯ ಗುಡಾರವನ್ನು ಪ್ರವೇಶಿಸುವಾಗಲೂ, ಇಬ್ಬದಿಯಲ್ಲೂ ನಿಂತ ಶಸ್ತ್ರಧಾರಿಗಳಾದ ಅಶ್ವಾರೋಹಿಗಳ ನಡುವೆ ನಡೆದು ಹೋಗಬೇಕಾಗಿತ್ತು.

ಪಾಳಯದ ಮಹಾದ್ವಾರದಲ್ಲೇ ತಮ್ಮನ್ನು ಉಚಿತ ಮರ್ಯಾದೆಗಳೊಂದಿಗೆ ಇದಿರುಗೊಂಡ ಓಲಗದ ಹೆಗ್ಗಡೆಯವರೊಂದಿಗೆ, ವಿನಯಾದಿತ್ಯ, ತನ್ನ ಕುಮಾರ ಎರೆಯಂಗದೇವ, ಮೊಮ್ಮಗ ವಿಷ್ಣುವರ್ಧನ, ಚಕ್ರವರ್ತಿಗೆ ಕೊಡಲೆಂದು ತಂದ ಕಾಣಿಕೆಗಳನ್ನು ಹೊತ್ತ ಆಳುಗಳೊಂದಿಗೆ, ಓಲಗ ಸಾಲೆಯ ಪಟಗೃಹವನ್ನು ಪ್ರವೇಶಿಸಿದ.

ವಿನಯಾದಿತ್ಯ ಅಲ್ಲಿಗೆ ಬರುವ ವೇಳೆಗೇ ಸಭಾಗೃಹದಲ್ಲಿ ವಿಕ್ರಮಾದಿತ್ಯನ ಹಲವಾರು ಜನ ಸಾಮನ್ತರು ಬಂದು ಆಸನಾಸೀನರಾಗಿದ್ದರು. ವಿರಾಟಪುರದ ಕದಂಬ ದೊರೆ, ಉಚ್ಚಂಗಿಯ ಪಾಂಡ್ಯ, ಪೊಟ್ಟಿಪೊಂಬುರ್ಚಪುರದ ಸಾಂತರ ದೊರೆ ಮೊದಲಾದ ಮಹಾಮಂಡಲೇಶ್ವರರೊಂದಿಗೆ, ನಾಗರಖಂಡ, ಸಾಂತಳಿಗೆ, ಮಯ್ಯೆನಾಡು, ಮೊದಲಾದ ಬನವಾಸಿ ಹನ್ನೆರಡು ಸಾವಿರ ಸೀಮೆಯ ಹಲವಾರು ಉಪಭಾಗಗಳ ಸಾಮನ್ತರೂ ಬಂದು, ತಮತಮಗೆ ಗೊತ್ತಾದ ಪೀಠಗಳಲ್ಲಿ ಮಂಡಿಸಿದ್ದರು. ಅವರಲ್ಲಿ ಬಹುಮಂದಿ ವಿನಯಾದಿತ್ಯನಿಗೆ, ಎರೆಯಂಗದೇವನಿಗೆ ಪರಿಚಿತರು. ಅವರ ವಂದನೆಗಳನ್ನು ಸ್ವೀಕರಿಸಿ, ಅವರ ಕುಶಲ ಪ್ರಶ್ನೆಗಳಿಗೆ ಸೂಕ್ತ ಉತ್ತರವಿತ್ತು, ವಿನಯಾದಿತ್ಯ ತಮಗೆ ಮೀಸಲಾದ ಪೀಠಗಳಲ್ಲಿ ಕುಳಿತುಕೊಂಡ.

ಆದರೆ ವಿಷ್ಣುವರ್ಧನನ ಕಣ್ಣು, ಆ ಜನರಾರನ್ನೂ ನೋಡದೆ, ಓಲಗಸಾಲೆಯ ಪಟಗೃಹವನ್ನು ಈಕ್ಷಿಸುತ್ತಿತ್ತು.

ಹೊರ ನೋಟಕ್ಕೆ ಕೇವಲ ಪಟಸಾಲೆಯಂತೆಯೇ ಕಂಡ ಓಲಗಸಾಲೆಯ ಗುಡಾರ, ಒಳಭಾಗದಲ್ಲಿ ಚಾಲುಕ್ಯ ಚಕ್ರೇಶ್ವರನ ಹಿರಿಮೆ, ವೈಭವಗಳನ್ನು ಪ್ರತಿಬಿಂಬಿಸುವಂತೆ ಆಲಂಕೃತವಾಗಿದ್ದು, ಪಟಗೃಹದ ಛಾವಣಿಗೆ ಬಿಗಿದ ಮುಗಿಲು ಬಣ್ಣದ ರೇಷ್ಮೆಯ ವಸ್ತ್ರ, ಅಲ್ಲಲ್ಲಿಯ ಕಂಭಗಳಿಗಾದ ಅಲಂಕಾರ, ಅಷ್ಟು ಎತ್ತರವಾದ ವೇದಿಕೆಯ ಮೇಲೆ ರಾಜನಿಲ್ಲದ ಸಭೆಯಲ್ಲಿ ತಾನೇ ರಾಜನಂತೆ ವಿರಾಜಿಸುವ. ಬಗೆಬಗೆಯ ಪುತ್ತಳಿಗಳಿಂದ ರಂಜಿಸುವ, ಮುತ್ತಿನಗೊಂಡೆಗಳ ಬೆಳ್ಗೊಡೆಯನ್ನು ಧರಿಸಿದ ರಾಜಾಸನ, ಉಸಿರಿನ ಸದ್ದು ನಡೆಯುವಾಗಿನ ಹೆಜ್ಜೆಯ ಸದ್ದು ಯಾವುದೂ ಆಗದಂತೆ ಚಲಿಸುವ ಪರಿಚಾರಕರು—

ಇದೆಲ್ಲವನ್ನೂ ವಿಷ್ಣುವರ್ಧನನ ಕಣ್ಣುಗಳು ನೋಡುತ್ತಿರುವಾಗಲೇ, ಹತ್ತಿರದಲ್ಲೆಲ್ಲೋ ಭೇರೀನಿನಾದವಾಗಿ, ಕಹಳೆಗಳ ಸದ್ದು ಕೇಳಿ ಬಂದು, ಆ ವಾದ್ಯರವ ಅಡಗುತ್ತಿದ್ದ ಹಾಗೇ, ಸಭೆಯಲ್ಲಿನ ಪಿಸುಸದ್ದೂ ಅಡಗಿ, ಅನತಿದೂರದಿಂದ, ನಿರ್ಬಂಧಿತ ಸಾಗರ ಘೋಷದಂತೆ, ಸಮಧ್ವನಿಯಲ್ಲಿ, ಚಕ್ರವರ್ತಿಗಳ ಆಗಮನ ಸೂಚಕವಾದ ವಂಧಿಮಾಗದರ ಪ್ರಶಸ್ತಿಘೋಷ ಕೇಳಿ ಬಂದಿತು-

'ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕ ಸತ್ಯಾಶ್ರಯ ಕುಲತಿಲಕ ಚಾಲುಕ್ಯಾಭರಣ ತ್ರಿಭುವನಮಲ್ಲ ವಿಕ್ರಮಾದಿತ್ಯ ದೇವಾ ಪರಾಕ್...ಭೋ... ಪರಾಕ್'

ವಿಷ್ಣುವರ್ಧನ ಆ ಸದ್ದು ಕೇಳಿ ಬಂದ ಪಟಗೃಹದ ಬಲಪಾರ್ಶ್ವದತ್ತ ನೋಡಿದ.

ಸಾರ್ವಭೌಮ ಪದವೀಸೂಚಕಗಳಾದ ಧ್ವಜಲಾಂಛನಗಳನ್ನು ಹಿಡಿದವರು, ಕಳಶ ಕನ್ನಡಿಯವರು, ಆಶೀರ್ವಚನ ಮಂತ್ರವನ್ನು ಪಠಿಸುತ್ತಿರುವ ಪುರೋಹಿತರು, ಕನಕದಂಡಿಕೆ, ಚಾಮರ, ಹಡಪ, ಕಾಳಂಜಿಯನ್ನು ಹಿಡಿದ ಸುಂದರಿಯರ

ಪರಿವಾರದಿಂದ ಸೇವಿತನಾದ ಚಾಲುಕ್ಯ ಸಾರ್ವಭೌಮ ವಿಕ್ರಮಾದಿತ್ಯ ಗಜಗತಿಯಿಂದ ನಡೆದು ಬಂದು, ಸಾಮಂತರು ಅವನತ ಶಿರರಾಗಿ ಸಲ್ಲಿಸುವ ವಂದನೆಗಳನ್ನು ತಲೆತೂಗಿನಿಂದ ಸ್ವೀಕರಿಸುತ್ತಾ ಆಸನಾಸೀನನಾದ. ನಂತರ ಒಬ್ಬೊಬ್ಬರಾಗಿ ಸಾಮಂತರು, ತಾವು ಚಕ್ರವರ್ತಿಗಳಿಗೆ ಕೊಡಲೆಂದು ತಂದ ಉಡುಗೊರೆಗಳನ್ನು ತಂದು ಒಪ್ಪಿಸಿದರು. ಹಲವರದಾದ ಬಳಿಕ ವಿನಯಾದಿತ್ಯನ ಸರದಿ ಬಂದು, ವಿನಯಾದಿತ್ಯ ತನ್ನ ಮಗ ಮೊಮ್ಮಗನೊಂದಿಗೆ, ತಾನು ತಂದ ಉಡುಗರೆಗಳನ್ನು ಒಪ್ಪಿಸಲು ರಾಜಾಸನದ ಬಳಿ ಸಾರಿದ.

ವಿಕ್ರಮಾದಿತ್ಯನ ಬಳಿ ಸಾರಿ, ಆತನ ಇದಿರು ಸೊಂಟದವರೆಗೂ ಮೈ ಬಗ್ಗಿಸಿ, ನಮಸ್ಕರಿಸುವ ತನ್ನ ತಾತ ತಂದೆಯನ್ನು ನೋಡಿ, ವಿಷ್ಣುವರ್ಧನನಿಗೆ ಏಕೋ ಕರುಳಿನಲ್ಲಿ ಕೊಳ್ಳಿಯಾಡಿಸಿದಂತಾಯಿತು. ಅವರ ಹಿಂದೆಯೇ ತಾನೂ ನಮಸ್ಕರಿಸಬೇಕೆಂಬ ಸಭಾ ಮರ್ಯಾದೆಯನ್ನು ಮರೆತು ಹಾಗೇ ಚಕ್ರವರ್ತಿಯ ಮುಖವನ್ನು ದಿಟ್ಟಿಸಿನೋಡಿದ.

ವಿಷ್ಣುವರ್ಧನ ತನ್ನ ತಾತ, ತಂದೆಯರಿಂದ ವಿಕ್ರಮಾದಿತ್ಯನ ವಿಷಯ ಕೇಳಿದ್ದನೇ ಹೊರತು, ಅಂದಿನವರೆಗೂ ಕಣ್ಣಾರೆ ನೋಡಿರಲಿಲ್ಲ. ನೋಡಿದಾಗ ಚಕ್ರವರ್ತಿಯ ಬಗ್ಗೆ ವಿಷ್ಣುವರ್ಧನನ ಹೃದಯದಲ್ಲಿ ಭಯವಾಗಲಿ, ಭಕ್ತಿ ಗೌರವವಾಗಲಿ ಮೂಡದೆ, ಬೆನ್ನು ಬಾಗದೆ, ಇದಿರು ಆಸನಾಸೀನನಾದಾತ ತನ್ನ ಪ್ರಭು ಎಂಬ ಭಾವನೆ ಉದ್ಭವಿಸದೆ, ಯಾರೋ ತನ್ನ ಎದುರಾಳಿಯೊಬ್ಬ, ತನ್ನ ಪೌರುಷವನ್ನೇ ಪ್ರಶ್ನಿಸುತ್ತಾ ಕುಳಿತಿರುವಂತೆ ಬೋಧೆಯಾಗಿ, ಬೆನ್ನಲಬು ಬಾಗುವುದಕ್ಕೆ ಪ್ರತಿಯಾಗಿ ಸೆಟೆದು ನಿಂತಿತು. ಆ ಭಾವನೆಯೊಂದಿಗೆ ವಿಕ್ರಮಾದಿತ್ಯನನ್ನು ನೋಡುತ್ತಿದ್ದ ವಿಷ್ಣುವರ್ಧನನ ಕಣ್ಣನೋಟದಲ್ಲಿದ್ದ ಮೃದುತ್ವ ಮಾಯವಾಗಿ, ಏನೋ ಒಂದು ಬಗೆಯ ಬಿರುಸು ಮೂಡಿ, ಆ ಕಣ್ಣುಗಳು ಸಾಣೆ ಕೊಟ್ಟ ವಜ್ರದಂತೆ ಹೊಳೆದವು.

ಹಾಗೇ ವಿಕ್ರಮಾದಿತ್ಯನೂ ತನ್ನೆದುರು ನಿಂತ ವಿಷ್ಣುವರ್ಧನನನ್ನು ನೋಡಿದ.

ಪ್ರಮಾಣ ಬದ್ಧವಾದ ಮುಖದ ಒಂದೊಂದು ರೇಖೆಯಲ್ಲೂ ಗಂಡುತನವನ್ನು ಬೀರುವ ನಸುನೀಳವಾದ ಮುಖ್ಯ ಧೃಡನಿರ್ಧಾರವನ್ನು ಸೂಚಿಸುವ ಗದ್ದ, ನೀಳವಾದ ನಾಸಿಕ, ವ್ಯರ್ಥವಾದ ಮಾತನ್ನು ಆಡುವುದಿಲ್ಲವೆಂಬಂತೆ, ಒಂದನ್ನೊಂದು ಬಿಗಿದ ತುಂಬು ತುಟಿಗಳು, ತಮ್ಮ ಗುಟ್ಟನ್ನು ಬಿಟ್ಟು ಕೊಡದೆ, ನೋಡಿದವನ ಎದೆಯಾಳವನ್ನೇ ಹೊಕ್ಕು ನೋಡುವಂಥ ಕೂರಾದ ನೋಟವನ್ನು ಬೀರುವ ಕಣ್ಣುಗಳ ಮೇಲೆ, ಆ ನೋಟದ ರಕ್ಷಣೆಗೆ ನಿರ್ಮಿಸಿದ ಅರ್ಧ ಚಂದ್ರವ್ಯೂಹದಂತೆ ಬೆಳೆದ ಹುಬ್ಬು ಲೋಕದ ಸಮಸ್ತ ಭಾಗ್ಯವನ್ನೂ ಈ ಹಣೆಯಲ್ಲಿ ಬರೆಯಬೇಕು ಎಂಬ ಉದ್ದೇಶದಿಂದಲೇ ವಿಧಿ ನಿರ್ಮಿಸಿದರೇನೋ ಎನ್ನುವಷ್ಟು ವಿಶಾಲವಾದ ಫಾಲ, ಈ ಮುಖ ಮಕುಟದ ಭಾರವನ್ನು ಧರಿಸಲು ಸೃಷ್ಟಿಯಾದಂಥ ವಿಶಾಲವಾದ ಎದೆ, ಪುಷ್ಟವೂ ದೀರ್ಘವೂ ಆದ ತೋಳುಗಳಿಂದ ಕೂಡಿದ ಮೈ, ನಿಂತ ನೆಲ ನನ್ನದು ಎಂಬಂತೆ, ಭೂಮಿಯನ್ನು ಮೆಟ್ಟಿ ನಿಂತ ನಿಲವು-

ಆ ಆಕಾರವನ್ನು ನೋಡ ನೋಡುತ್ತಾ ವಿಕ್ರಮಾದಿತ್ಯನಿಗೆ ತನ್ನ ಕಣ್ಣೆದುರು ನಿಂತವನು ಸಾಮನ್ತನ ಮಗನಲ್ಲ, ಹರಿತವಾದ ಕತ್ತಿ ಎನಿಸಿತು.

ಆ ಭಾವನೆ ಮೂಡಿ ಒಂದು ಕ್ಷಣ ಮಂದಹಾಸ ಮಿನುಗುತ್ತಿದ್ದ ವಿಕ್ರಮಾದಿತ್ಯನ ಕಣ್ಣುಗಳೂ ಬಲವಾದ ಇದಿರಾಳಿಯನ್ನು ಕಂಡ ಕಾಡ ಪಶುವಿನ ಉದ್ದೀಪ್ತ ನಯನಗಳಂತೆ ಹೊಳೆದವು.

ಆ ಎರಡು ನೋಟಗಳ ಸಂಗಮದಲ್ಲಿ ಏನೋ ಒಂದು ಮಿಂಚು ಮೂಡಿ, ನೋಡುವ ಇಬ್ಬರ ಮೈಯಲ್ಲೂ ಹರಡಿದಂತೆ ಭಾಸವಾಯಿತು-ಇಬ್ಬರಿಗೂ.

ಒಂದು ಗಳಿಗೆ ಹಾಗೇ ವಿಷ್ಣುವರ್ಧನನ್ನು ನೋಡಿ, ಬಳಿಕ ದೃಷ್ಟಿಯನ್ನು ಎರೆಯಂಗದೇವನ ಕಡೆ ಹೊರಳಿಸಿ-

'ಇವರೇ ತಮ್ಮ ಹಿರಿಯ ಕುಮಾರರೋ?'

—ಎಂದು ಕೇಳಿದ ವಿಕ್ರಮಾದಿತ್ಯ ನಿರ್ವಿಕಾರವಾದ ಧ್ವನಿಯಲ್ಲಿ.

'ಊಹೂ ಇವನು ನಡುಕಲವನು; ವಿಷ್ಣುವರ್ಧನ'

—ಎಂದು ಚಕ್ರವರ್ತಿಯ ಪ್ರಶ್ನೆಗೆ ಉತ್ತರವಿತ್ತು ಎರೆಯಂಗದೇವ ಚಕ್ರವರ್ತಿಗೆ ನಮಸ್ಕರಿಸದೆ ನಿಂತ ಮಗನಿಗೆ ನಮಸ್ಕರಿಸುವಂತೆ, ಕಣ್ಣು ಸೂಚನೆ ಮಾಡಿದ.

ನಮಸ್ಕರಿಸುವ ಮನಸ್ಸಿಲ್ಲದಿದ್ದರೂ ತಂದೆಯ ಮಾತಿಗೆ ಇದಿರು ನಡೆಯಲಾಗದೆ ವಿಷ್ಣುವರ್ಧನ, ಬಾಗುವುದಿಲ್ಲವೆನ್ನುವ ಮೈಯನ್ನು ಬಾಗಿಸಿದ.

ಹಾಗೆ ಬಾಗಿಸಿದ ಮೈಯನ್ನು ಮೇಲೆ ಎತ್ತುತ್ತಿದ್ದ ಹಾಗೇ, ಏಕೋ ವಿಷ್ಣುವರ್ಧನನ ಮೈಯಲ್ಲಿ, ಹಸಿಯ ಕಟ್ಟಿಗೆ ತುಂಬಿದ ಒಲೆಯನ್ನು ಬಲವಂತವಾಗಿ ಉರಿಸಲು ಗಾಳಿ ಬೀಸಿದಾಗ ಹಬ್ಬುವ ಹೊಗೆಯಂಥ ಏನೋ ಒಂದು ಅಶಾಂತಿ ತುಂಬಿತು. ಮೈಯ ನಾನಾ ಭಾಗದಲ್ಲಿ ಹರಿಯುತ್ತಿದ್ದ ರಕ್ತ, ಕಿವಿಗಳಲ್ಲಿ ಕೇಂದ್ರೀಕೃತವಾದಂತೆ ಭೋರ್ಗರೆಯಿತು ಮುಖ ಕೆಂಪೇರಿತು.

ವಿಷ್ಣುವರ್ಧನ ಚಕ್ರವರ್ತಿಗೆ ಮಣಿದ ಒಲ್ಲದ ರೀತಿ ಎಲ್ಲರಿಗೂ ಕಾಣುವಂತಿತ್ತು. ಅದನ್ನು ಗಮನಿಸಿದ, ಚಕ್ರವರ್ತಿಗಳ ಬಳಿ ಅದುವರೆಗೂ ಏನೊಂದೂ ಮಾತನಾಡದೆ ನಿಂತಿದ್ದ ಪ್ರಧಾನಾಮಾತ್ಯ ಕಾಳಿದಾಸಯ್ಯ—

'ನಿಮ್ಮ ಕುಮಾರರಿಗೆ ಕ್ರಮವಾದ ವಿದ್ಯಾಭ್ಯಾಸ ನಡೆಯುತ್ತಿದೆಯೇ?'

—ಎಂದು ಕೇಳಿದ ಎರೆಯಂಗದೇವನತ್ತ ತಿರುಗಿ.

ಅನಿರೀಕ್ಷಿತವಾದ ಆ ಪ್ರಶ್ನೆಯನ್ನು ಕೇಳಿ ವಿನಯಾದಿತ್ಯ, ಎರೆಯಂಗದೇವ ಇಬ್ಬರಿಗೂ ಆಶ್ಚರ್ಯವಾಯಿತು. 'ಒಡ್ಡೋಲಗದಲ್ಲಿ ಇವನ ವಿದ್ಯಾಭ್ಯಾಸದ ಮಾತೇಕೆ?' ಎಂದುಕೊಂಡರೂ ಪ್ರಧಾನಿಗಳ ಪ್ರಶ್ನೆಗೆ ಉತ್ತರ ಕೊಡದಿರಲು ಆಗದೆ, ಎರೆಯಂಗದೇವ—

'ನಡೆಯುತ್ತಿದೆ'

—ಎಂದು ಹೇಳಿದ.

'ಯಾರಲ್ಲಿ?'

'ಷಟ್ತರ್ಕ ಷಣ್ಮುಖ ಶ್ರೀಪಾಲ ತ್ರೈವಿದ್ಯದೇವರಲ್ಲಿ.'

'ಹಾಗೇ ಅವರು ಬಹಳ ಸಮರ್ಥರೆಂದು ನಾವೂ ಕೇಳಿದ್ದೇವೆ. ನಮ್ಮ ಪರವಾಗಿ, ಅವರಲ್ಲಿ ತಾವು ಒಂದು ಮಾತು ತಿಳಿಸಬೇಕು'

'ಅಪ್ಪಣೆಯಾಗಲಿ'

'ನಿಮ್ಮ ಕುಮಾರರಿಗೆ ಉಳಿದ ಶಾಸ್ತ್ರಗಳನ್ನು ಕಲಿಸಿದಂತೆಯೇ, ಗುರುಗಳು ವಿನಯವನ್ನೂ ಅಷ್ಟು ಚೆನ್ನಾಗಿ ಉಪದೇಶ ಮಾಡಬೇಕೆಂದು ಹೇಳಿ.'

ವಿಷ್ಣುವರ್ಧನನಲ್ಲಿ ವಿನಯ ಸಾಕಷ್ಟಿಲ್ಲವೆಂದು, ಕಾಳಿದಾಸಯ್ಯ ಹೀಗೆ ವ್ಯಂಗ್ಯವಾಗಿ ಸೂಚಿಸಿದುದನ್ನು ಕೇಳಿ, ವಿಕ್ರಮಾದಿತ್ಯನ ಮುಖದ ಮೇಲೆ ನಗು ಮೂಡಿದಂತೆಯೇ, ಎರೆಯಂಗದೇವನ ಮುಖ ಕಪ್ಪಿಟ್ಟು ಹೋಯಿತು. ವೃದ್ಧ ವಿನಯಾದಿತ್ಯನ ಮುಖ ಓಕುಳಿಯಲ್ಲಿ ಅದ್ದಿ ತೆಗೆದಂತಾಯಿತು. ಅವರಿಬ್ಬರಿಗೂ,

ಪ್ರಧಾನರ ಮಾತಿಗೆ ಉತ್ತರ ಹೇಳುವುದೂ ಸಾಧ್ಯವಾಗಲಿಲ್ಲ. ಪ್ರಧಾನಿಗಳ ವ್ಯಂಗವಾದ ಮಾತು ಅವರಿಬ್ಬರ ಬಾಯಿ ಕಚ್ಚಿಸಿದರೆ, ಅದೇ ಮಾತು ವಿಷ್ಣುವರ್ಧನನ ಅಭಿಮಾನಕ್ಕೆ ಚಾವಟಿಯ ಏಟಿನಂತಾಯಿತು. 'ಆ ಮಾತಿಗೆ ತಾನು ಉತ್ತರ ಕೊಡುವುದು ಸೌಜನ್ಯವಲ್ಲ' ಎಂಬುದು ತಿಳಿದಿದ್ದರೂ, ಆ ಅಭಿಮಾನ ಭಂಗವನ್ನು ಸಹಿಸಲಾಗದೆ, ಅಷ್ಟೇ ವ್ಯಂಗ್ಯ ತುಂಬಿದ ಧ್ವನಿಯಲ್ಲಿ ತಾನೇ ಉತ್ತರ ಕೊಟ್ಟ—

'ಯಾರಿಗೆ ಏನು ಕಲಿಸಬೇಕೆಂದು ನಮ್ಮ ಗುರುಗಳಿಗೆ ತಿಳಿದಿದೆ.'

ಆತನ ಮಾತು ಕಾಳಿದಾಸಯ್ಯನ ಮುಖಕ್ಕೆ ಹೊಡೆದಂತಿತ್ತು.

'ಅಂದರೆ?....'

''ವಿನಯ'ವನ್ನು ಕಲಿಯಲು ನಾವು ಬೌದ್ಧ ಸನ್ಯಾಸಿಗಳಲ್ಲ; ಕ್ಷತ್ರಿಯರು! ಆದುದರಿಂದ ನಮಗದನ್ನು ಕಲಿಸುವ ಅಗತ್ಯವಿಲ್ಲವೆಂದೇ ಗುರುಗಳು ನಮಗೆ ಅದನ್ನು ಹೇಳಿಕೊಟ್ಟಿಲ್ಲ'

—ಕೊಂಚವೂ ಅಳುಕದೆ, ಖಡ್ಗಾಸ್ಫಾಲನಕ್ಕೆ ಖಡ್ಗಾಸ್ಫಾಲನದಿಂದಲೇ ಉತ್ತರ ಕೊಡುವ ರೀತಿಯಲ್ಲಿ ಹೇಳಿದ ವಿಷ್ಣುವರ್ಧನ.

ವಿಷ್ಣುವರ್ಧನ ಸುತ್ತಲ ನಾಲ್ಕು ಜನಕ್ಕೆ ಕೇಳುವಷ್ಟು ಗಟ್ಟಿಯಾಗಿಯೇ ಆಡಿದ ಆ ಮಾತನ್ನು ಕೇಳಿ ಸಭೆಯಲ್ಲಿ ಸಿಡಿಲು ಹೊಡೆದಂತಾಯಿತು. ಎರೆಯಂಗದೇವ ಮಗನ ಮಾತನ್ನು ಕೇಳಿ ಗರ ಬಡಿದಂತೆ ನಿಂತು ಬಿಟ್ಟ. ವಿನಯಾದಿತ್ಯನ ಮುಖದ ಮೇಲೆ ಅಲ್ಲಲ್ಲಿ ಬೆವರಿನ ಹನಿಗಳು ಹೊಳೆದವು. ವಿಕ್ರಮಾದಿತ್ಯ ಹೆಡೆ ಮೆಟ್ಟಿದ ಹಾವಿನಂತೆ ಸೆಟೆದು ಕುಳಿತು-ಕರ್ಕಶವಾದ ಧ್ವನಿಯಲ್ಲಿ ಹೇಳಿದ—

'ಪ್ರಾಯಶಃ ನಿಮಗೆ ಆ ವಾರವನ್ನು ಕಲಿಸಬೇಕಾದುದನ್ನು ನಮಗೇ ಉಳಿಸಿರುವಂತೆ ಕಾಣುತ್ತದೆ. ಪ್ರಧಾನಿಗಳೇ-ಮುಂದಿನ ಕೆಲಸ ನಡೆಯಲಿ.'

ಪರ್ಯಾಯವಾಗಿ ವಿಕ್ರಮಾದಿತ್ಯ 'ನೀನಿನ್ನು ಹೋಗಿ ಕುಳಿತುಕೊಳ್ಳಬಹುದು' ಎಂದು ಹೇಳಿದುದನ್ನು ಕೇಳಿ ವಿನಯಾದಿತ್ಯ, ಎರೆಯಂಗದೇವ ಇಬ್ಬರೂ ಚಕ್ರವರ್ತಿಗೆ ಮಣಿದು ತಮ್ಮ ಸ್ಥಾನಗಳಲ್ಲಿ ಹೋಗಿ ಕುಳಿತರು. ಹಾಗೆ ಪೀಠಕ್ಕೆ ಹಿಂದಿರುಗುವಾಗ, 'ನೀನೂ ನಮಸ್ಕರಿಸಬೇಕೆಂ'ದು ವಿಷ್ಣುವರ್ಧನನಿಗೆ ಹೇಳುವುದು ಎರೆಯಂಗದೇವನಿಗಾಗಲಿ, ವಿನಯಾದಿತ್ಯನಿಗಾಗಲಿ ನೆನಪಾಗದಷ್ಟು ಆವರ ಚಿತ್ತ ಅಲ್ಲಕಲ್ಲೋಲವಾಗಿತ್ತು. ಅಲ್ಲಿ ನಡೆದ ಪ್ರಶ್ನೋತ್ತರಗಳಿಂದ ಉದ್ರೇಕಿತನಾದ ವಿಷ್ಣುವರ್ಧನ, ಚಕ್ರವರ್ತಿಗೆ ನಮಸ್ಕರಿಸದೆ ಆತನಿಗೆ ಬೆನ್ನು ತೋರಿಸಿ ನಡೆಯಬಾರದೆಂಬ ಸಭಾ ಔಚಿತ್ಯವನ್ನೂ ಮರೆತು ತನ್ನ ಸ್ಥಾನಕ್ಕೆ ಹಿಂದಿರುಗಿದ.

ವಿಷ್ಣುವರ್ಧನ ಹಿಂದಿರುಗುವುದನ್ನೇ ಕೆರಳಿದ ಕಣ್ಣುಗಳಿಂದ ನೋಡುತ್ತಿದ್ದ ವಿಕ್ರಮಾದಿತ್ಯ, ತನ್ನ ಬಳಿ ನಿಂತ ಕಾಳಿದಾಸಯ್ಯನಿಗೆ—

'ತನ್ನ ರಕ್ಷಣೆಗೆಂದು ಇರುವೆ ಕಟ್ಟಿಕೊಂಡ ಹುತ್ತದಲ್ಲಿಯೇ ಅಲ್ಲವೇ ಹಾವು ವಾಸ ಮಾಡುವುದು ಪ್ರಧಾನಿಗಳೇ?'

—ಎಂದ, ಬೇರೆ ಯಾರಿಗೂ ಕೇಳದಷ್ಟು ಸಣ್ಣ ಧ್ವನಿಯಲ್ಲಿ.

'ನಿಜ, ಆಡಿಕೆಯ ಮಾತು ಸುಳ್ಳಲ್ಲವೆಂದೇ ತೋರುತ್ತದೆ.'

—ಎಂದು ಕಾಳಿದಾಸಯ್ಯನೂ ವಿಕ್ರಮಾದಿತ್ಯನ ಮಾತನ್ನು ಪುಷ್ಟೀಕರಿಸಿ ಹೇಳಿದ.

’ಆಯಿತು. ಮತ್ತೆ ನಮ್ಮನ್ನು ನೋಡಬೇಕೆಂದು ವಿನಯಾದಿತ್ಯರಿಗೆ ತಿಳಿಸಿ. ಹಾಗೇ-ಆದಷ್ಟು ಬೇಗ ಇಂದಿನ ಓಲಗ ಮುಗಿಯಲಿ.’

—ಎಂದು ಪ್ರಧಾನಿಗಳಿಗೆ ಅಪ್ಪಣೆ ಮಾಡಿದ ವಿಕ್ರಮಾದಿತ್ಯ.

ಆತನ ಅಪ್ಪಣೆಯಂತೆಯೇ ಚಕ್ರವರ್ತಿಗಳ ದರ್ಶನಕ್ಕೆಂದು ಬಂದ ಉಳಿದ ಮಾಂಡಲಿಕರ ಭೇಟಿಯ ಕೆಲಸವನ್ನು ಆದಷ್ಟು ಚುರುಕಾಗಿ ಮುಗಿಸಿದ ಕಾಳಿದಾಸಯ್ಯ.

ಸಭೆಯಲ್ಲಾದ ಅನಿರೀಕ್ಷಿತ ಘರ್ಷಣೆಯ ಇರಿಸು-ಮುರಿಸಿನಲ್ಲೇ ಓಲಗ ಮುಗಿದು, ನೆರೆದವರೆಲ್ಲರೂ ತಮ್ಮ ತಮ್ಮ ಬಿಡಾರಗಳಿಗೆ ಹಿಂದಿರುಗಿದರು.

೩೬

ಓಲಗದಲ್ಲಿ ವಿಷ್ಣುವರ್ಧನನಿಗೂ, ಪ್ರಧಾನಿ ಕಾಳಿದಾಸಯ್ಯನವರಿಗೂ ಆದ ಅಲ್ಪ ವಾಗ್ವಾದದ ವಿಷಯವನ್ನು ಗಟ್ಟಿಯಾಗಿ ಚರ್ಚಿಸಲು ಯಾರೊಬ್ಬರಿಗೂ ಧೈರ್ಯವಿರಲಿಲ್ಲವಾದರೂ, ಎಲ್ಲರಲ್ಲೂ ಆಸಕ್ತಿಯನ್ನು ಕೆರಳಿಸಿದ ಆ ಮಾತನ್ನು ಆಡದಿರುವಷ್ಟು ಸಂಯಮ ಮಾತ್ರ ಯಾರಿಗೂ ಇರಲಿಲ್ಲ. ಕೆಲವರು—

'ಅಬ್ಬಾ-ಆ ಹುಡುಗನ ಪೊಗರೇ ! ಚಾಲುಕ್ಯ ಚಕ್ರವರ್ತಿಗಳ ಪ್ರಧಾನಿಗಳಿಗೂ ತುಂಬಿದೋಲಗದಲ್ಲಿ ಮುಖ ಮುರಿಯುವಂತೆ ಎದುರು ಉತ್ತರ ಕೊಟ್ಟನಲ್ಲಾ, ಗಂಡಸುತನ ಎಂದರೆ ಹಾಗಿರಬೇಕು!'

—ಎಂದು ಮೆಚ್ಚಿಕೊಂಡರೆ, ಮತ್ತೆ ಕೆಲವರು—

'ವಿನಾಶಕಾಲಕ್ಕೆ ವಿಪರೀತ ಬುದ್ಧಿ. ಆ ಹುಡುಗನ ಗ್ರಹಚಾರದಲ್ಲಿ ಯಾವುದೋ ಗ್ರಹ ಕ್ರೂರವಾಗಿ ಕುಳಿತು ಹಾಗೆ ಮಾತಾಡಿಸಿರಬೇಕು. ಇಲ್ಲವಾದರೆ, ಸಾಕ್ಷಾತ್ ಅಗ್ನಿಯಂತೆ ಇದುರಿಗೆ ಕುಳಿತ ಚಕ್ರವರ್ತಿಗಳ ಇದಿರು ಅಷ್ಟು ಮಾತನಾಡುವುದೆಂದರೇನು? ಅಂತೂ-ಹೊಯ್ಸಳರಿಗೆ ಏನೋ ಕಾದಿದೆ'

—ಎಂದು ಭೀತಿಯನ್ನು ವ್ಯಕ್ತಪಡಿಸಿದರು.

'ಅಪರೂಪಕ್ಕೆ ಆದ ಮಕ್ಕಳನ್ನು ಮುದ್ದಿನಿಂದ ಬೆಳೆಸಬೇಕೆಂಬುದು ಸರಿಯಾದರೂ, ಇಷ್ಟು ಉದ್ಧಟರನ್ನಾಗಿ ಬೆಳೆಸುವುದು ತಪ್ಪು. ಹೇಗೆ ಬೆಳಸಬೇಕೋ ಹಾಗೆ ಬೆಳಸಿದ್ದರೆ, ಆ ಹುಡುಗನ ಬಾಯಲ್ಲಿ ತುಟಿ ಮೀರಿದ ಮಾತು ಬರುತ್ತಿರಲಿಲ್ಲ.'

—ಎಂದು ಕೆಲವರು, ವಿಷ್ಣುವರ್ಧನನ ನಡತೆಗೆ, ಅವನನ್ನು ತಂದೆತಾಯಿಗಳು ಬೆಳೆಸಿದ ಕ್ರಮವನ್ನು ದೂಷಿಸಿದರೆ, ಇನ್ನು ಕೆಲವರು—

'ತಪ್ಪು ಅವರದು ಯಾರದೂ ಅಲ್ಲ. ಸಭೆ ನಡೆದದ್ದೇ ಹಗಲಿನ ಕಡೆಯ ಜಾವದಲ್ಲಿ. ಆಗೇನು ಅಗ್ನಿ ಮುಹೂರ್ತವೋ, ನಕ್ತಂಚರಿ ಮುಕೂರ್ತವೋ ಇದ್ದಿರಬೇಕು. ಅದಕ್ಕೆ ಇಷ್ಟು ವಿರಸವಾಯಿತು'

—ಎಂದು ಓಲಗ ನಡೆದ ಹೊತ್ತನ್ನು ದೂಷಿಸಿದರು.

'ನೀವು ಏನಾದರೂ ಹೇಳಿ. ಓಲಗ ನಡೆದ ಹೊತ್ತಿನ ಗುಣವೋ ಅಥವ ಆ ಹುಡುಗ ನಿಂತ ನೆಲದ ಗುಣನೋ-ಏನಾದರೂ ಅನ್ನಿ, ಅಂತೂ ಅಂತಿಂಥವರಿಗೆ ನೋಡುತ್ತಿದ್ದ ಹಾಗೇ ಬಾಯಿ ಕಟ್ಟಿ ಹೋಗುವಂಥ ಚಕ್ರವರ್ತಿಗಳ ಇದುರಿನಲ್ಲೂ ಅಷ್ಟು ನಿರ್ಭಯ ಉತ್ತರ ಕೊಟ್ಟನಲ್ಲ, ಆ ಶಕ್ತಿ ಸಾಮಾನ್ಯವಲ್ಲ, ಆ ಶಕ್ತಿ ಇಲ್ಲದಿದ್ದಲ್ಲಿ ಚಕ್ರವರ್ತಿಗಳು ಆ ಗಳಿಗೆಯಲ್ಲೇ ಶೂಲಕ್ಕೇರಿಸಲು ಅಪ್ಪಣೆ ಮಾಡುತ್ತಿದ್ದರು'

—ಎಂದು ಕೆಲವರು, ಆ ಗಳಿಗೆಯಲ್ಲಿ ವಿಷ್ಣುವರ್ಧನನಲ್ಲಿ ವ್ಯಕ್ತವಾದ ಶಕ್ತಿವಿಶೇಷವನ್ನು ಆಭಿನಂದಿಸಿದರು.

'ಹಾಗೆಲ್ಲಿಯಾದರೂ ಉಂಟೇ. ಎಲ್ಲೋ ತಮ್ಮ ಹತ್ತಿರದ ನೆಂಟರ ಹುಡುಗ. ತಮಗೆ ತುಂಬಾ ಆಪ್ತರಾದವರ ಮಗ ಎಂದುಕೊಂಡು ಚಕ್ರವರ್ತಿಗಳು ಸುಮ್ಮನಾಗಿರಬೇಕು'

—ಎಂದು ಕೆಲವರು ಅಂದಿನ ವಿಕ್ರಮಾದಿತ್ಯನ ನಡತೆಗೆ ನೆಂಟತನದ ಕಾರಣವನ್ನು ಊಹಿಸಿದರೆ, ಇನ್ನು ಕೆಲವರು —

'ಅಯ್ಯೋ-ನಿಮಗೆ ಚಕ್ರವರ್ತಿಗಳ ಸ್ವಭಾವ ತಿಳಿಯದು. ಇದಿರುಬಿದ್ದ ತಮ್ಮನನ್ನೇ ಬಿಡಲಿಲ್ಲ, ಇನ್ನು ಈ ಬಾದರಾಯಣ ಸಂಬಂಧಕ್ಕೆ ಸುಮ್ಮನಾಗುತ್ತಾರೆಯೇ? ಏನಾಗುವುದೊ ನೋಡುತ್ತಿರಿ'

—ಎಂದು ಎಲ್ಲ ಅಂತರಂಗದ ವಿಚಾರವನ್ನೂ ತಾವು ತಿಳಿದವರಂತೆಯೇ ಆಡಿದರು.

ಹೀಗೆ ಅಂದಿನ ಓಲಗದಲ್ಲಿ ನಡೆದ ಆ ಒಂದು ಘಟನೆ ಹತ್ತು ಜನರ ಬಾಯಲ್ಲಿ ಹತ್ತು ರೂಪಾಗಿ ತಳೆದು, ಯಾರೊಬ್ಬರಿಗೂ ಅದನ್ನು ಹರಡುವ ಇಚ್ಛೆ ಇಲ್ಲದಿದ್ದರೂ ಬಳ್ಳಿಗಾಮೆಯಲ್ಲೆಲ್ಲಾ ಹರಡಿತು. ಕಂಡವರು ಒಂದು ರೀತಿ ಹೇಳಿದರೆ, ಕಾಣದವರು ಅದಕ್ಕೆ ತಮ್ಮ ಊಹೆಗೆ ಬಂದ ಬಣ್ಣ ಆಕಾರ ಕೊಟ್ಟು ಹಬ್ಬಿಸಿದರು. ಆ ವಿಷಯವನ್ನು ಬಗೆಬಗೆಯಾಗಿ ಆಡುವ ಎಲ್ಲರಲ್ಲೂ, ಒಂದು ಮಾತಿನ ವಿಷಯದಲ್ಲಿ ಮಾತ್ರ ಐಕಮತ್ಯವಿತ್ತು—

'ಅಂತೂ ಇದು ಇಷ್ಟಕ್ಕೇ ನಿಲ್ಲುವುದಿಲ್ಲ, ಮುಂದೆ ಏನೋ ಆಗುತ್ತದೆ.'

ಈ ಭಾವನೆಯಿಂದ ಬಳ್ಳಿಗಾಮೆಯ ವಾತಾವರಣ ಕಾವೇರಿತು.

ಹೀಗೆ ಒಬ್ಬೊಬ್ಬರಿಗೂ ಬಗೆಬಗೆಯಾಗಿ ಮಾತನಾಡಿಕೊಳ್ಳಲು ಕಾರಣವಾದ ಆ ಘಟನೆ, ಅದರ ಆವರ್ತದಲ್ಲಿ ನೇರವಾಗಿ ಸಿಲುಕಿದ ವಿನಯಾದಿತ್ಯ, ಎರೆಯಂಗದೇವ, ವಿಷ್ಣುವರ್ಧನರ ಬಾಯನ್ನು ಮಾತ್ರ ಮಾತನಾಡಲಾಗದಂತೆ ಬಂಧಿಸಿತ್ತು.

ಚಾಲುಕ್ಯ ಸಾಮ್ರಾಟರ ಸೇವೆಯಲ್ಲಿ ಮೈ ಮುಪ್ಪಾದ ವಿನಯಾದಿತ್ಯನಿಗೆ—

'ಇದೇನು ಹೀಗಾಯಿತಲ್ಲ, ಚಾಲುಕ್ಯ ಸಿಂಹಾಸನದ ಆಧಾರಸ್ತಂಭವೆನಿಸಿಕೊಂಡ ನಮ್ಮ ವಂಶದಲ್ಲೇ ಇಂಥವರು ಹುಟ್ಟುವುದೇ? ನನ್ನ

ಮೊಮ್ಮಗ ತಮ್ಮ ಸನ್ನಿಧಾನದಲ್ಲಿ ಇಷ್ಟು ಅವಿನಯದಿಂದ ವರ್ತಿಸಿದುದರಿಂದ ಚಕ್ರವರ್ತಿಗಳ ಮನಸ್ಸಿಗೆ ಎಷ್ಟು ನೋವಾಯಿತೋ ಏನೋ. ನನ್ನ ಮೊಮ್ಮಗನೇ ಹೀಗಾದ ಬಳಿಕ, ಸರೀಕರಾದ ಮಾಂಡಲಿಕರ ಮುಂದೆ ಮಾತನಾಡುವುದು ಹೇಗೆ? ನೀನು ಮಾಡಿದ ಮುದ್ದೇ ಇಷ್ಟಕ್ಕೆ ಕಾರಣವಾಯಿತು ಎನ್ನಲಿಕ್ಕಿಲ್ಲವೇ? ಯಾರಲ್ಲಿಯೂ ಅವಿನಯದಿಂದ ವರ್ತಿಸದ ಈ ಹುಡುಗನಿಗೆ ಇದೇಕೆ ಇಂಥ ಬುದ್ಧಿ ಬಂತು? ಇದೇನು ಕಾಲ ಗತಿಯೋ, ದೈವ ನಮ್ಮಲ್ಲಿ ಮುನಿಸಿಕೊಳ್ಳುತ್ತಿರುವುದರ ಮುಂಗುರುಹೋ? ಈಗಾದುದನ್ನು ಸರಿಪಡಿಸುವುದು ಹೇಗೆ? ಹುಡುಗ ಹೀಗೇಕೆ ಆದ ಎಂದು ಚಕ್ರವರ್ತಿಗಳು ಕೇಳಿದರೆ ಏನು ಹೇಳುವುದು?'

—ಎಂಬ ಕೊರಗು.

ಎರೆಯಂಗದೇವನಿಗೂ ಒಂದು ಕಡೆ ಈ ಕೊರಗಾದರೆ, ಮತ್ತೊಂದು ಕಡೆ ಏನೋ ಒಂದು ಭಯ, ವಿಕ್ರಮಾದಿತ್ಯನ ಸ್ವಭಾವವನ್ನು ಚೆನ್ನಾಗಿ ತಿಳಿದವನು ಆತ. ವಿಕ್ರಮಾದಿತ್ಯ ಪಟ್ಟಕ್ಕೆ ಬಂದುದು ಹೇಗೆ ಎಂಬುದೂ ಆತನಿಗೆ ತಿಳಿದಿತ್ತು. ವಿಕ್ರಮಾದಿತ್ಯನ ರಾಜ್ಯತೃಷೆ ಎಷ್ಟು ಬಲವಾದುದು, ಅದು ಎಷ್ಟು ದೂರ ಹೋಗಬಲ್ಲದು ಎನ್ನುವುದರ ಆಪ್ತ ಪರಿಚಯವಿತ್ತು ಎರೆಯಂಗದೇವನಿಗೆ.

ತಾನು ಚಾಲುಕ್ಯ ಸಿಂಹಾಸನಾಧಿಪತಿಯಾಗಬೇಕು ಎನ್ನುವ ಮಹತ್ವಾಕಾಂಕ್ಷೆಯಿಂದ ತಾನು ಬನವಾಸಿಯ ರಾಜಪ್ರತಿನಿಧಿಯಾಗಿದ್ದಾಗಲೇ ಚಾಲುಕ್ಯರ ಆಜನ್ಮ ವೈರಿಗಳಾಗಿದ್ದ ಚೋಳರೊಂದಿಗೆ ಸಖ್ಯ ಬೆಳೆಸಿ, ಅವರ ಹೆಣ್ಣನ್ನು ಮದುವೆಯಾಗಿ ತನ್ನ ಅಣ್ಣನನ್ನೇ ಕಾರಾಗೃಹಕ್ಕಟ್ಟಿ, ತಾನೇ ಸಿಂಹಾಸನಾಧಿಪತಿಯಾಗಿದ್ದ-ವಿಕ್ರಮಾದಿತ್ಯ, ಆ ಕಾಲದಲ್ಲಿ ತನಗೆ ನೆರವಾದ ಸೋದರ ಯುವರಾಜ ಜಯಸಿಂಹನನ್ನು, ತಾನು ಸಿಂಹಾಸನದಮೇಲೆ ಸ್ಥಾಪಿತನಾದ ಬಳಿಕ, ತಾನು ತನ್ನ ಅಣ್ಣನಿಗೆ ದ್ರೋಣ ಬಗೆದಂತೆ,

ಜಯಸಿಂಹನೂ ತನಗೆ ದ್ರೋಹ ಬಗೆಯಬಹುದೆಂದು ಹೆದರಿ, ಅವನ ಮೇಲೆ ಒಳಸಂಚಿನ ಆಪಾದನೆ ಹೊರಿಸಿ, ಮೂಲೋತ್ಪಾದನ ಮಾಡಿ, ತನ್ನ ಆಧಿಕಾರ ಪಥವನ್ನು ನಿರಾಪದ ಮಾಡಿಕೊಂಡಿದ್ದ.

ಮೋಸದಿಂದ ಸಿಂಹಾಸನಕ್ಕೆ ಬಂದ ವಿಕ್ರಮಾದಿತ್ಯನಿಗೆ ಯಾರಲ್ಲೂ ನಂಬಿಕೆಯಿರಲಿಲ್ಲ. ಎಂತಲೇ ಎಲ್ಲ ಕಡೆಯಲ್ಲೂ ಸಂಶಯದ ಕರಾಳ ಛಾಯೆಯನ್ನು ಕಾಣುವ ಆತನ ಚಿತ್ತ, ಪರಿವಾರದ ಜನ ಆಡುವ ಮಾತುಗಳಿಗೆ ತನ್ನ ಕಿವಿಗಳನ್ನು ಮಾರಿಕೊಂಡಿತ್ತು.

ವಿಕ್ರಮಾದಿತ್ಯನ ಸ್ವಭಾವ ಹಾಗಿದ್ದರೆ, ಹೊಯ್ಸಳರ ಮೇಲೆ ಅಸೂಯೆಯಿಂದ ಕುದಿಯುತ್ತಿರುವವರ ಸಂಖ್ಯೆಗೂ ಕಡಮೆಯಿರಲಿಲ್ಲ. ಹೊಯ್ಸಳರ ಅಭ್ಯುದಯ, ಅವರು ಚಕ್ರವರ್ತಿಗಳೊಂದಿಗೇ ನೆಂಟಸ್ತಿಕೆ ಬೆಳೆಸಿದುದು, ಎರೆಯಂಗದೇವ, ವಿಕ್ರಮಾದಿತ್ಯನಿಗೆ ಅಚ್ಚುಮೆಚ್ಚಾದುದು-ಇದು ಹಲವರು ಮಾಂಡಲಿಕರ ಅಸೂಯೆಯನ್ನು ಕೆರಳಿಸಿದ್ದರೆ, ಹೊಯ್ಸಳರು ಗಂಗವಾಡಿಯ ಮಹಾಮಂಡಲೇಶ್ವರರಾದುದು, ಮತ್ತೆ ಕೆಲವರು ಸಾಮನ್ತರ ಕರುಬು ಬುದ್ಧಿಯನ್ನು ಕೆರಳಿಸಿತ್ತು. ಬನವಾಸಿ, ಗಂಗವಾಡಿಯ ಪ್ರಾಂತಗಳಲ್ಲಿ, ಅಲ್ಲಲ್ಲಿ ಮುರಿದ ಮಹಾಸೌಧದ ಭಗ್ನಾವಶೇಷಗಳಂತೆ ಉಳಿದುಕೊಂಡಿದ್ದ ಗಂಗವಂಶದ ಒಂದೆರಡು ಮನೆತನಗಳಂತೂ, ತಮ್ಮಸೀಮೆಗೆ ಹೊಯ್ಸಳರು ಒಡೆಯರಾದುದನ್ನು ಕಂಡು, ಅವರ ವಿಷಯದಲ್ಲಿ ದಾಯಾದಿ ಭಾವನೆಗಳನ್ನೇ ತಳೆದಿದ್ದರು.

ಇಂಥ ಪರಿವಾರದಿಂದ ಸುತ್ತುವರಿಯಲ್ಪಟ್ಟ, ಚಪಲಚಿತ್ತನಾದ ಚಕ್ರವರ್ತಿಯ ಸ್ನೇಹವನ್ನು ಕಾಪಾಡಿಕೊಂಡು ನಡೆಯುವುದು ಹೊಯ್ಸಳರ ಪಾಲಿಗೆ ಅಸಿಧಾರಾವ್ರತವಾಗಿತ್ತು.

ಪರಿಸ್ಥಿತಿ ಹೀಗಿರುವಾಗ ತುಂಬಿದೋಲಗದಲ್ಲಿ ತನ್ನ ಮಗ ಚಕ್ರವರ್ತಿಯನ್ನು ಮೀರಿ ನಡೆಯುವಂತೆ ವರ್ತಿಸಿದುದರ ಪರಿಣಾಮ ಏನಾದೀತೋ, ಚಕ್ರವರ್ತಿಗಳು 'ಇದು ಹುಡುಗು ಬುದ್ಧಿ' ಎಂದು ಮರೆಯದೆ ತಮ್ಮಲ್ಲೇ ಎಲ್ಲಿ ದ್ವೇಷ ಬೆಳೆಸುವರೋ, ಮುಂದೇನು ಗತಿಯೋ ಎಂಬ ಅಳುಕು ಒಂದು ಕಡೆ ಎರೆಯಂಗದೇವನ ಹೃದಯವನ್ನು ಇರಿಯುತ್ತಿತ್ತು.

ಈ ಭಾವನೆ ಕವಿದು ಬಂದಾಗ ತನ್ನ ಮಗನ ವಿಷಯದಲ್ಲಿ ವಿಶೇಷ ಅಸಮಾಧಾನ ಮೂಡುವುದು.

ಆ ಅಸಮಾಧಾನದ ಭಾವನೆ ನಾಲಗೆಯನ್ನು ಕಹಿ ಮಾಡುತ್ತಿರುವಾಗಲೇ, ಹೆಂಚಿನ ಮನೆಯಲ್ಲಿ ಎಲ್ಲ ಕಿಟಕಿ ಬಾಗಿಲುಗಳನ್ನು ಮುಚ್ಚಿದ್ದರೂ, ಎಲ್ಲಿಂದಲೋ ನುಸುಳಿಕೊಂಡು ಬರುವ ಗಾಳಿಯಂತೆ, ಹಸಿಮಡಕೆಯಲ್ಲಿ ಕಾಣದ ರಂಧ್ರದಿಂದ ಜಿನುಗುವನೀರಿನಂತೆ, ತನ್ನ ಮಗನ ವಿಷಯದಲ್ಲಿ ಅಭಿಮಾನದ ಭಾವನೆಯೂ ಮೂಡುತ್ತಿತ್ತು.

'ಅಗೋ ಚಕ್ರವರ್ತಿಗಳು' ಎಂದಾಗ, ಅಷ್ಟು ದೂರದಲ್ಲೇ ತಲೆ ತಗ್ಗಿಸುವ ಸಹಸ್ರಾರು ಜನರನ್ನು ಎರೆಯಂಗದೇವ ನೋಡಿದ್ದ. ಆತ ಇದಿರು ಕುಳಿತು, ಅವನ ಇದಿರು ಮಾತನಾಡಲೇ ಬೇಕಾಗಿ ಬಂದಾಗ, ನೆಲವನ್ನೇ ನೋಡುತ್ತ ಮಾತನಾಡುವ ನೂರಾರು ಜನರನ್ನು ಕಂಡಿದ್ದ 'ಅಂಥ ಚಕ್ರವರ್ತಿ ಸಾರ್ವಭೌಮನನ್ನು ನನ್ನ ಮಗ ದೃಷ್ಟಿಸಿ ನೋಡಲು ಹಿಂಜರಿಯಲಿಲ್ಲ, ಆಗತ್ಯ ಬಿದ್ದಾಗ, ಅವನ ಮಾತಿಗೆ ತಕ್ಕ ಪ್ರತ್ಯುತ್ತರ ಕೊಡಲೂ ಅಳುಕಲಿಲ್ಲ. ಗಂಡು ಮಗ ಎಂದರೆ ಹೀಗಿರಬೇಕು. ನನ್ನ ಮಗ ಅವಿಧೇಯನಿರಬಹುದು, ಆದರೆ ಹೇಡಿಯಲ್ಲ' ಎಂಬ ಅಭಿಮಾನ ಮೂಡಿ ಬಂದು ಮಗನ ಬೆನ್ನು ಚಪ್ಪರಿಸಬೇಕು ಎನಿಸುತ್ತಿತ್ತು.

ಹೀಗೆ ಎರೆಯಂಗದೇವನ ಮನಸ್ಸು ಇಬ್ಬಗೆಯ ಭಾವನೆಯಲ್ಲಿ ಹೊಯ್ದಾಡುತ್ತಿರುವಾಗ ವಿಷ್ಣುವರ್ಧನನ ಮನಸ್ಸು ಹತ್ತಾರು ಬಗೆಯ ಭಾವನೆಗಳ ಸುಳಿಯಲ್ಲಿ ನಿಲ್ಲಲು ನೆಲೆಗಾಣದೆ ಸುತ್ತುತ್ತಿತ್ತು.

ಪ್ರಧಾನಿ ಕಾಳಿದಾಸಯ್ಯನ ವ್ಯಂಗ್ಯ ತುಂಬಿದ ಮಾತಿಗೆ ತಕ್ಕ ಉತ್ತರ ಕೊಟ್ಟ ಗಳಿಗೆಯಿಂದಲೂ ವಿನಯಾದಿತ್ಯನಾಗಲಿ, ಎರೆಯಂಗದೇವನಾಗಲಿ ವಿಷ್ಣುವರ್ಧನನೊಂದಿಗೆ ಮಾತಾಡಿರಲಿಲ್ಲ. ಏನೋ ಮೋಡ ಕಟ್ಟಿಕೊಂಡ ಹಾಗಿತ್ತು ಅವರ ಮುಖ. ಅದನ್ನು ನೋಡಿದ ಗಳಿಗೆಯಿಂದಲೂ ವಿಷ್ಣುವರ್ಧನ—

'ಇವರು ಹೀಗೇಕಾದರು? ನಾನು ಆಡಿದುದು ತಪ್ಪೇ?'

—ಎಂದು ತನ್ನ ನಡತೆಯನ್ನೇ ತಾನು ಹತ್ತಾರು ಬಾರಿ ಪ್ರಶ್ನಿಸಿಕೊಂಡಿದ್ದ.

ಚಾಲುಕ್ಯ ಚಕ್ರವರ್ತಿಯ ವಿಷಯದಲ್ಲಿ ತನ್ನ ತಾತ, ತಂದೆಗಿದ್ದ ಅಭಿಮಾನದ ಭಾವನೆ ವಿಷ್ಣುವರ್ಧನನಿಗೆ ಪರಿಚಯವಿತ್ತು. ಅವರ ವಿಷಯದಲ್ಲಿ ತಾನು ತಪ್ಪು ನಡೆದರೆ ಅವರಿಗೆ ಅಸಮಧಾನವಾಗುವುದೆಂದೂ ತಿಳಿದಿತ್ತು.

ಆದರೆ ತಾನು ಮಾಡಿದುದು ತಪ್ಪೇ?

ಚಕ್ರವರ್ತಿಗಳಿಗೆ ತಾವು ಸಾಮನ್ತರಾದ ಮಾತ್ರಕ್ಕೆ, ಅವರ ಪರಿವಾರದಲ್ಲಿಯ ಯಾರಾದರೂ ತಮ್ಮನ್ನು ಹೇಗಾದರೂ ಮಾತನಾಡಿಸಬಹುದೇ? ಅವರು ಏನಾಡಿದರೂ, ನಾವು ಸ್ವಾಭಿಮಾನವನ್ನು ಮರೆತು ನುಂಗಿಕೊಳ್ಳಬೇಕೇ?

ಹಾಗಿರುವುದೇ ಸಾಮನ್ತ ಧರ್ಮ ಎನ್ನುವುದಾದರೆ, ಸ್ವಾಭಿಮಾನಿಯಾದವರಿಗೆ ಅಂಥ ಸಾಮನ್ತ ಪದವಿಗಿಂತಲೂ ಸಾವು ಮೇಲು.

ಆ ಅಭಿಮಾನ ತನ್ನಲ್ಲಿದ್ದುದು ನಿಜ.

ಹಾಗೇ ಮಾರ್ಗದಲ್ಲಿಯೇ ಬಲ್ಲಾಳನಿಗೆ ಜ್ವರ ಕೆರಳಿದಾಗ 'ಚಕ್ರವರ್ತಿಗಳ ಆಜ್ಞೆ' ಎಂದು ಅವನನ್ನು ಬಳ್ಳಿಗಾಮೆಗೆ ಕರೆತಂದಾಗಲೇ ವಿಷ್ಣುವರ್ಧನನಿಗೆ ಚಕ್ರವರ್ತಿಯ ವಿಷಯದಲ್ಲಿ ಅಸಮಾಧಾನ ಮೂಡಿತ್ತು.

ದಾರಿಯಲ್ಲಿ ಮೂಡಿದ ಆ ಅಸಮಾಧಾನದೊಂದಿಗೆ, ಬಳ್ಳಿಗಾಮೆಗೆ ಬಂದಾಗ ಅಲ್ಲಿಯ ಸಾಮನ್ತ ತಮ್ಮನ್ನು ಎದುರುಗೊಂಡ ಸಾಮಾನ್ಯ ರೀತಿ, ಅವನ ಸ್ವಾಭಿಮಾನಕ್ಕೆ ಸವಾಲು ಹಾಕಿದಂತಿತ್ತು.

ಯಾರು ಬರುವಾಗ, ನಾಡಿನ ಹಿರಿಯರೆಲ್ಲರೂ ನಡೆಮಡಿ ಹಾಸಿಕೊಂಡು ಕಾಯುವರೋ ಅಂಥ ತನ್ನ ಅಜ್ಜನನ್ನು ಸ್ವಾಗತಿಸಲು ಈ ಸರ್ವದೇವ ಸಾಮಾನ್ಯ ಹೆಗ್ಗಡೆಗಳೊಬ್ಬರನ್ನು ಕಳಿಸುವುದೇ? ಎಷ್ಟು ಸೊಕ್ಕು ಆತನಿಗೆ? ತಾನು ಪ್ರಧಾನಿಗಳ ಚಿಕ್ಕಪ್ಪ ಎನ್ನುವ ಪಿತ್ತ ಅವನಿಗೆ ನೆತ್ತಿಗೇರಿರಬೇಕು ಎನಿಸಿ ಅವನ ಹೃದಯದಲ್ಲಿ ಕ್ರೋಧ ಕೆರಳಿತ್ತು.

ತನ್ನ ಅಜ್ಜ, ತಂದೆ ಆ ಸಾಮನ್ತ ಮಾಡಿದ ಅಪಮಾನವನ್ನು ನುಂಗಿಕೊಂಡು, ಮಲಗಬೇಕಾದಾಗ ಮಲಗುವ ಸ್ವಾತಂತ್ರ್ಯವೂ ಇಲ್ಲದೆ, ಚಕ್ರವರ್ತಿಯ ಕರೆ ಬಂದಿತೆಂದು ಕೇಳಿದ ಕೂಡಲೇ, ಆಳುಗಳಂತೆ ಎದ್ದು ಹೊರಟುದನ್ನು ನೋಡಿದಾಗಲಿಂದಲೂ, ಈ ಚಕ್ರವರ್ತಿ ಎನ್ನಿಸಿಕೊಂಡವನಿಗೆ ಎಷ್ಟು ದರ್ಪ? ತನಗೆ ಚಕ್ರವರ್ತಿ ಪದವಿಯನ್ನು ಗಳಿಸಿಕೊಟ್ಟವರ ಮೇಲೆ, ತನ್ನ ನೆಂಟರಿಷ್ಟರ ಮುಂದೂ ತನ್ನ ಹಿರಿತನವನ್ನು ಮೆರೆಸಬೇಕೆ? ಇಂಥವರ ಊಳಿಗಕ್ಕಿಂತ, ನೇಗಿಲು ಹಿಡಿದು ಉತ್ತರೆ, ಹೆಚ್ಚು ಮರ್ಯಾದೆಯಾಗಿ ಬಾಳಬಹುದಲ್ಲಾ' ಎನ್ನುವ ಭಾವನೆ ಅವನ ಹೃದಯದಲ್ಲಿ ಬೆಳೆದು ಹಬ್ಬಿತ್ತು.

ಈ ಭಾವನೆಯೇ ವಿಷ್ಣುವರ್ಧನನ ಬೆನ್ನು ವಿಕ್ರಮಾದಿತ್ಯನ ಇದಿರು ಬಾಗದಂತೆ ತಡೆದಿತ್ತು.

ಹಾಗೇ ವಿಕ್ರಮಾದಿತ್ಯನ ಓಲಗದ ವೈಭವವನ್ನು ನೋಡಿದಾಗ, ಅವನಿದಿರು ಹತ್ತಾರು ಮಾಂಡಲಿಕರು ಮಣಿದುದನ್ನು ಕಂಡಾಗ 'ಅರಸಾಗಿ ಬದುಕಿದರೆ, ಹೀಗೆ ಚಕ್ರವರ್ತಿಯಾಗಿ ಯಾರೊಬ್ಬರಿಗೂ ಮಣಿಯದೆ ಬಾಳಬೇಕು. ಮುಕುಟ ಹೊತ್ತ ತಲೆಯನ್ನು ಯಾರ ಮುಂದೂ ಬಾಗಿಸಬಾರದು' ಎನ್ನುವ ಹೆಬ್ಬಯಕೆಯೂ ಅವನ ಹೃದಯದಲ್ಲಿ ಚಿಗುರೊಡೆದಿತ್ತು.

ಸಹಜವಾಗಿ ಮೂಡಿದ ಅಸಮಧಾನ, ಸಕಾರಣವಾಗಿ ಮೂಡಿದ ಹೆಬ್ಬಯಕೆಗಳೇ, ವಿಷ್ಣುವರ್ಧನನ ಅಂದಿನ ನಡತೆಗೆ ಪ್ರೇರೇಪಕವಾಗಿದ್ದವು.

ಈ ಭಾವನೆಗಳೊಂದಿಗೇ ಯೌವನಕ್ಕೆ ಸಹಜವಾದ ಸಾಹಸಬುದ್ಧಿ 'ಯಾರೇನಾದರೂ ಅನ್ನಲಿ. ಹತ್ತು ಜನ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂತೆ ಮಾಡಿದೆನಲ್ಲಾ. ಇನ್ನು ಆ ಚಕ್ರವರ್ತಿ ಅದೇನು ಮಾಡುತ್ತಾರೋ ಮಾಡಲಿ' ಎಂದು ಬೀಗುವುದು.

ಈ ಆಲೋಚನೆಗಳ ನಡುವೆಯೇ—

'ಚಕ್ರವರ್ತಿಯ ಭಯ ನನಗಿಲ್ಲ. ಆದ್ದರೆ ಅಜ್ಜ ಅಪ್ಪಾಜಿಯವರು ಸಿಟ್ಟಾದರೆ ಏನು ಹೇಳುವುದು?'

—ಎಂಬ ಚಿಂತೆ ಇಣುಕುವುದು.

ಆ ಚಿಂತೆ ಸುಳಿದಾಗ, ಎದೆಯನ್ನು ತುಂಬಿದ ಹೆಮ್ಮೆಯ ನೆರೆ ಹಾಗೇ ಇಳಿದುಹೋಗಿ—

'ನನಗೆ ಇದೇನು ಮಂಕು ಕವಿಯಿತು. ಆ ವಿಕ್ರಮಾದಿತ್ಯನ ಇದಿರು ನನ್ನ ಪೌರುಷ ತೋರಿಸಲು ಹೋಗಿ, ತನ್ನ ಪ್ರೀತಿಯ ಅಜ್ಜ ಅಪ್ಪಾಜಿ ಇಬ್ಬರೂ ನೋಯುವಂತೆ

ಮಾಡಿದೆನಲ್ಲಾ? ಅವರ ಪ್ರೀತಿ, ವಿಶ್ವಾಸಕ್ಕಿಂತಲೂ, ಆ ಪ್ರಧಾನಿಯ ಕ್ಷುಲ್ಲಕ ಮಾತಿನಿಂದ ಮೂಡಿದ ಅಸಮಧಾನವೇ ಹೆಚ್ಚಿನದೇ? ಒಂದು ಗಳಿಗೆ ಅದನ್ನು ಹಾಗೇ ನುಂಗಿಕೊಂಡಿದ್ದರೆ, ನನ್ನವರು ನನ್ನ ವಿಷಯದಲ್ಲಿ ಅಸಮಧಾನ ತಾಳಲು ಕಾರಣವಾಗುತ್ತಿರಲಿಲ್ಲ. ಅವರ ದೊಡ್ಡಸ್ತಿಕೆ ಒಂದು ಗಳಿಗೆ ಮೆರೆಯಲು ಅವಕಾಶ ಕೊಡದೆ ಶಾಶ್ವತವಾಗಿ ಇವರ ಅಸಮಧಾನಕ್ಕೆ ದಾರಿ ಮಾಡಿಕೊಂಡೆನಲ್ಲಾ?'

—ಎಂಬ ಪಶ್ಚಾತ್ತಾಪ ಅವನ ಹೃದಯವನ್ನು ಬೇಯಿಸುವುದು.

ಮರುಗಳಿಗೆಯೇ ಸ್ವಾಭಿಮಾನ ಉಕ್ಕಿ ಬಂದು, ಆ ಪಶ್ಚಾತ್ತಾಪದ ಭಾವನೆಯನ್ನು ಕೊಚ್ಚಿ—

'ಇಲ್ಲ ನಾನು ಪ್ರಧಾನಿಗಳಿಗೆ ಉತ್ತರ ಕೊಟ್ಟುದೇ ಸರಿಯಾಯಿತು. ಇಲ್ಲವಾದರೆ ತುಂಬಿದೋಲಗದಲ್ಲೂ ಹೊಯ್ಸಳರು ಬುದ್ಧಿ ಹೇಳಿಸಿಕೊಂಡು ಬಂದರು ಎಂಬ ಅಪಖ್ಯಾತಿಯ ಕಲಂಕ ಮನೆತನದ ಹೆಸರಿಗೇ ಶಾಶ್ವತವಾಗಿ ಅಂಟುತ್ತಿತ್ತು. ಹಗುರವಾಗಿ ಮಾತನಾಡಿದ ಪ್ರಧಾನಿಗಳಿಗೆ ಚಕ್ರವರ್ತಿಯ ಇದಿರೇ ಮುಖ ಮುರಿದುದರಿಂದ, ಉಳಿದವರು ನಮ್ಮ ವಿಷಯದಲ್ಲಿ ಗೌರವದಿಂದ ನಡೆದುಕೊಳ್ಳುವಂತಾಯಿತು. ಇಲ್ಲವಾದರೆ ಎಲ್ಲರ ಇದಿರು ನಾವು ಸಣ್ಣವರಾಗುತ್ತಿದ್ದೆವು. ಚಕ್ರವರ್ತಿಯ ವಿಶ್ವಾಸ ಉಳಿದರೆ ಉಳಿಯಲಿ, ಹೋದರೆ ಹೋಗಲಿ. ಹೊಯ್ಸಳರು ಯಾರಿಂದಲೂ ಅವಮಾನ ಸಹಿಸುವವರಲ್ಲ ಎಂಬ ಕೀರ್ತಿಯಂತೂ ಉಳಿಯಿತಲ್ಲ.'

—ಎನಿಸಿ ಆತನ ಸ್ವಾಭಿಮಾನೀ ಮನಸಿಗೆ ಸಮಾಧಾನವಾಗುವುದು.

ಈ ಸ್ವಾಭಿಮಾನದ ಏರುಗಾಳಿಗೆ ಸಿಲುಕಿದ ಮನಸು, ಹಾಗೇ ಮೇಲೇರಿ, ಭವಿಷ್ಯದಗರ್ಭವನ್ನು ಹೊಕ್ಕು ಮತ್ತೇನನ್ನೊ ಕಾಣಬಯಸಿ-

'ಒಂದು ವೇಳೆ, ನನ್ನ ನಡತೆಯಿಂದ ಅಸಮಾಧಾನಗೊಂಡ ಚಾಲುಕ್ಯ ಚಕ್ರವರ್ತಿ, ನಾವು ಆತನ ವೈರಿಗಳು ಎಂದೇ ಭಾವಿಸಿ ತನ್ನ ತಮ್ಮನನ್ನು ಮುರಿಯಲು ಸೇನೆಯಟ್ಟಿದಂತೆ, ನಮ್ಮ ಮೇಲೂ ಸೇನೆಯಟ್ಟಿದರೆ? ನಿಜ. ಚಕ್ರವರ್ತಿ ಆ ಪ್ರಯತ್ನ ಮಾಡಿದರೆ, ಆಗ ಅಲ್ಲಲ್ಲಿಯ ತುಂಡರಸರನ್ನು ಮೆಟ್ಟಲು ವ್ಯರ್ಥವಾಗುತ್ತಿರುವ ಈ ತೋಳಬಲ ಎಂಥದೆಂದು ಆತನಿಗೂ ಒಮ್ಮೆ ತೋರಿಸಬಹುದು'

—ಎಂಬ ಮಹಾಸಾಹಸದ ಕನಸನ್ನು ಕಾಣುವುದು.

ಮತ್ತೊಂದು ಯೋಚನೆ-

'ಈಗಂತು ಆದದ್ದಾಯಿತು. ಮುಂದೆ ಏನು ಆಗುವುದಿದೆಯೋ ಆಗಲಿ. ಅಪ್ಪಾಜಿಯವರು 'ತಪ್ಪು ಮಾಡಿದೆ' ಎಂದರೆ, ಅದು ಏಕಾಯಿತೆಂದು ಹೇಳುವುದು. ಕ್ಷಮಿಸಿ ಎಂದು ಬೇಡುವುದು'

ಆ ಯೋಚನೆಯ ನಡುನೆಯೇ ಇನ್ನೊಂದು ಅಡ್ಡ ಯೋಚನೆ-

'ನೀನು ಮಾಡಿದುದು ತಪ್ಪು ಎಂದೆಯಲ್ಲಾ. ನಮ್ಮನ್ನು ಕೇಳಿದುದನ್ನೇ ಚಕ್ರವರ್ತಿಗಳ ಕಾಲಮೇಲೆ ಬಿದ್ದು ಕೇಳಿ, ಅವರ ಕ್ಷಮಾಪಣೆ ಪಡೆದು ಬಾ' ಎಂದು ಅಪ್ಪಾಜಿ ಸೂಚಿಸಿದರೆ-ಆಗ? ಚಕ್ರವರ್ತಿಯ ವಿಷಯದಲ್ಲಿ ಅತ್ಯಂತ ಅಭಿಮಾನಿಗಳಾದ ಅಪ್ಪಾಜಿ ಹಾಗೆ ಹೇಳಬಹುದು. ಹೇಳಿದರೆ ನಾನೇನು ಮಾಡುವುದು? ವಿಕ್ರಮಾದಿತ್ಯನ ಕಾಲ ಮೇಲೆ ಬಿದ್ದು ತಲೆ ಚಾಚುವುದೇ?'

ಈ ಮಾತು ಮನಸಿನಲ್ಲಿ ಬಂದಾಗಲೇ ವಿಷ್ಣುವರ್ಧನನ ಮನಸ್ಸಿನಲ್ಲಿ ನಿರ್ಧಾರವೂ ಮೂಡಿತು—

'ಕ್ಷಮಾಯಾಚನೆಯಂತೂ ಸಾಧ್ಯವಿಲ್ಲ. ಅಪ್ಪಾಜಿ 'ನೀನು ಮಾಡಿದ ತಪ್ಪಿಗೆ ತಲೆ ಒಪ್ಪಿಸು' ಎಂದರೆ ಕತ್ತರಿಸಿ ಅವರ ಕಾಲ ಬಳಿ ಇಡುವುದು. ಚಕ್ರವರ್ತಿಯ ಬಳಿ ಕ್ಷಮೆ ಯಾಚಿಸುವುದು ಸಾಧ್ಯವಿಲ್ಲ ಎಂದು ಸ್ಪಷ್ಟವಾಗೇ ಹೇಳಿಬಿಡುವುದು.'

ಈ ನಿರ್ಧಾರಕ್ಕೆ ಬಂದ ಬಳಿಕ ವಿಷ್ಣುವರ್ಧನನ ಹೊಯ್ದಾಡುತ್ತಿದ್ದ ಚಿತ್ತ ಒಂದು ನೆಲೆಗೆ ಬಂದು ಸ್ಥಿರವಾಯಿತು.

ತನ್ನ ತಾತ, ತಂದೆ ಏನು ಹೇಳುವರೋ ಹೇಳಲಿ, ಏನು ಕೇಳುತ್ತಾರೋ ಕೇಳಲಿ ಎಂದುಕೊಂಡು ಅವರು ತನ್ನನ್ನು ಮಾತಾಡಿಸುವುದನ್ನೇ ಕಾದು ಕುಳಿತ.

ಹೀಗೆ ಒಬ್ಬೊಬ್ಬರು ಒಂದೊಂದು ರೀತಿ ಚಿಂತಿಸುತ್ತಾ ಮೂವರೂ ಓಲಗದಿಂದ ಹಿಂದಿರುಗಿದರು.

* * * * * *

ನಗು ನಗುತ್ತಾ ಓಲಗಕ್ಕೆ ಹೋದವರು, ಹಬೆ ಸೋಕಿದ ಕನ್ನಡಿಯಂತೆ ಮಲಿನವಾದ ಮುಖಗಳನ್ನು ಹೊತ್ತು ಹಿಂದಿರುಗಿದುದನ್ನು ನೋಡುತ್ತಿದ್ದ ಹಾಗೇ ಏಚಲಾದೇವಿಗೆ ಓಲಗದಲ್ಲೇನೋ ಅಚಾತುರ್ಯ ನಡೆದಿರಬೇಕು ಎನಿಸಿತು. ಆದರೆ ತನ್ನ ಮಾವನನ್ನಾಗಲಿ, ಗಂಡನನ್ನಾಗಲಿ ಏನಾಯಿತೆಂದು ಕೇಳುವಷ್ಟು ಧೈರ್ಯವಿಲ್ಲದ ಏಚಲಾದೇವಿ, ಆ ರಾತ್ರಿ ಕಳೆದು ಹಗಲಾಗುತ್ತಿದ್ದ ಹಾಗೇ, ಅವರೊಂದಿಗೆ ಓಲಗಕ್ಕೆ ಹೋದ ಆಳೊಬ್ಬನನ್ನು, ಗುಟ್ಟಾಗಿ ಕರೆಯಿಸಿಕೊಂಡು, ಬಾಯಿ ಬಿಡಲೂ ಹೆದರುತ್ತಿದ್ದ ಅವನಿಂದ ಏನಾಯಿತೆಂದು ಅರಿತುಕೊಂಡಳು.

ಆಳು ಹೇಳಿದುದನ್ನು ಕೇಳಿ, ಒಂದು ಗಳಿಗೆ ಆಕೆಗೆ ತನ್ನ ಕಿವಿಯನ್ನೇ ನಂಬುವುದಾಗಲಿಲ್ಲ.

'ನಿಜವೇ? ಓಲಗದಲ್ಲಿ... ಸಾಕ್ಷಾತ್ ಚಕ್ರವರ್ತಿಗಳ ಸಮ್ಮುಖದಲ್ಲಿ ಕುಮಾರರು ಹಾಗೆ ಮಾತನಾಡಿದರೇ?'

—ಎಂದು ಎರಡು ಮೂರು ಬಾರಿ ಕೇಳಿ, ಆಣೆ ಪ್ರಮಾಣ ಮಾಡಿ ಹೇಳುತ್ತಿರುವ ಆಳು ಸುಳ್ಳಾಡುತ್ತಿಲ್ಲವೆಂದು ಮನಸಿಗೆ ನಂಬಿಕೆ ಮಾಡಿಕೊಂಡು, ಮಿಂಚುಮುಟ್ಟಿದವಳ ಹಾಗೆ ಒಂದು ಗಳಿಗೆ ಸುಮ್ಮನೆ ಕುಳಿತಿದ್ದು ಕೊನೆಗೆ—

'ಕುಮಾರರನ್ನು ಇಲ್ಲಿ ಬರುವಂತೆ ಹೇಳು'

—ಎಂದು ಆಳಿಗೆ ವಿಷ್ಣುವರ್ಧನನ್ನು ತನ್ನ ಬಳಿ ಕಳಿಸುವಂತೆ ಹೇಳಿ, ಮಗ ಬರುವುದನ್ನೇ ಎದುರು ನೋಡುತ್ತಾ ಕುಳಿತಳು.

ಪತಿಯ ಸಂತೋಷವೇ ಬಾಳಿನ ಪರಮ ಗುರಿ ಎಂದು ನಂಬಿದ ಆ ಸಾಧ್ವಿಗೆ, ಹತ್ತಾರು ವರ್ಷಗಳ ಸಹಚರ್ಯದಿಂದ ಯಾವುದರಿಂದ ತನ್ನ ಗಂಡನಿಗೆ ಸಂತೋಷವಾಗುತ್ತದೆ, ಯಾವುದರಿಂದ ನೋವಾಗುತ್ತವೆ ಎನ್ನುವುದು ತಿಳಿದಿತ್ತು. ಎಂತಲೇ ತನ್ನ ಮಗನ ನಡತೆಯಿಂದ ಅವರ ಮನಸ್ಸಿಗೆ ಹೆಚ್ಚು ವ್ಯಥೆಯಾಗಿರಬೇಕೆಂಬುದನ್ನು ಊಹಿಸಿದ ಏಚಲಾದೇವಿಗೆ, ಮಗನ ಮೇಲೆ ಸಿಟ್ಟೇ ಬಂದಿತ್ತು.

ಎಂತಲೇ—

'ಅವ್ವೆ, ಏನು ಬರಹೇಳಿದಿರಂತಲ್ಲಾ?'

—ಎಂದು ಕೇಳಿಕೊಂಡೇ ಒಳಗೆ ಬಂದ ವಿಷ್ಣುವರ್ಧನನನ್ನು ಕೂಡಲೇ ಮಾತನಾಡಿಸದೆ, ಅಸಮಾಧಾನ ತುಂಬಿದ ದೃಷ್ಟಿಯಿಂದ ಒಂದು ಗಳಿಗೆ ಅವನ ಮುಖವನ್ನ ದಿಟ್ಟಿಸಿ ನೋಡಿ, ಭಾರವಾದ ಧ್ವನಿಯಲ್ಲಿ—

'ಹೆತ್ತವರಿಗೆ ಒಳ್ಳೇ ಹೆಸರು ತರುವ ಮಗನೇ ಆದೆಯಪ್ಪ ಬಿಟ್ಟಿಯಣ್ಣ'

—ಎಂದಳು.

ತಾಯಿ ಬಾಯಿಂದ ಆ ಮಾತನ್ನು ಕೇಳುತ್ತಿದ್ದ ಹಾಗೇ, ಆಕೆಯನ್ನು ನೋಡ ಬಂದಾಗಿನ ಸಂತೋಷದಿಂದ ವಿಷ್ಣುವರ್ಧನನ ಮುಖದ ಮೇಲೆ ಮೂಡಿದ್ದ ಮಂದಹಾಸ, ಕಾದಮರಳಿನಲ್ಲಿ ಬಿದ್ದ ಹನಿ ನೀರಿನಂತೆ ಇಂಗಿಹೋಗಿ, ತನ್ನಲ್ಲಿ ತಾಯಿ ಅಸಮಧಾನಪಡುವಂಥ ಕೃತಿ ತನ್ನಿಂದ ಏನಾಯಿತೆಂದು ಊಹಿಸಲೂ ಆಗದೆ, ದಿಗ್ಭ್ರಾಂತನಾಗಿ—

'ಏನಾಯಿತು ಅವ್ವೆ?'

—ಎಂದು ಕೇಳಿದ.

'ಆಗುವುದೇನು- ದೊಡ್ಡವನಾದೆಯಪ್ಪಾ! ಇನ್ನು ಯಾರೂ ನಿನ್ನನ್ನು ಸರಸವಾಗಿ ಮಾತನಾಡಿಸುವುದು ಕಷ್ಟ'

'ಇದೇನು ಹೀಗೆ ಮಾತನಾಡುತ್ತೀರ? ನನ್ನಿಂದ ತಪ್ಪೇನಾದರೂ ಆಗಿದೆಯೇ ಹೇಳಿ ಅವ್ವೆ?'

'ಅಷ್ಟು ಯೋಗ್ಯತೆ ನಮಗಿದೆಯೇ?'

—ಏಚಲಾದೇವಿ ನಯವಾಗಿ ಆಡಿದ ಅ ಮಾತು ವಿಷ್ಣುವರ್ಧನನ ಹೃದಯವನ್ನು ಸಿಡಿಲಿನಂತೆ ಜಡಿಯಿತು. ಆ ಆಘಾತವನ್ನು ತಡೆಯಲಾಗದೆ ತತ್ತರಿಸಿ, ವಿಹ್ವಲನಾಗಿ—

'ಅವ್ವೆ-ನೀವಿಷ್ಟು ಬೇಸರ ಪಡುವಂಥ ಅಪರಾಧ ನನ್ನಿಂದ ಏನಾಗಿದೆಯೋ ತಿಳಿಯದು. ಹಾಗೇನಾದರೂ ಇದ್ದರೆ ಅದೇನೆಂದು ಹೇಳಿ. ಹೇಳುವ ಮನಸ್ಸಿಲ್ಲದೆ ಇದ್ದರೆ, ನನ್ನದು ತಪ್ಪು ಎಂದು ನಿಮಗೆ ನಂಬಿಕೆಯಾಗಿದ್ದರೆ,-ಇಗೋ, ಈ ಕರಾರಿ ತೆಗೆದುಕೊಂಡು ಇರಿದು ಬಿಡಿ. ನಿಮ್ಮ ಮಾತಿಗೆ ಇದಿರಾಡುವದಿಲ್ಲ. ಆದರೆ ಇಂಥ ಮಾತಾಡಿ ಕರುಳು ಕತ್ತರಿಸಬೇಡಿ.'

—ಎಂದು ಸೊಂಟದಲ್ಲಿದ್ದ ಕರಾರಿಯನ್ನು ತೆಗೆದು ತಾಯ ಮುಂದಿಟ್ಟು ಹೇಳಿದ.

ಮಗನ ಆ ಮಾತನ್ನು ಕೇಳಿ ಏಚಲಾದೇವಿಗೆ ಒಂದು ಗಳಿಗೆ ಏನು ಹೇಳ ಬೇಕೆಂದು ತೋಚಲಿಲ್ಲ. ತಾನು ಒಂದು ಬೇಸರದ ಮಾತನಾಡಿದರೆ, ತಲೆಯನ್ನೇ ಒಪ್ಪಿಸಲು ಸಿದ್ಧನಾಗುವ ಇಷ್ಟು ವಿಧೇಯನಾದ ಮಗ, ಚಕ್ರವರ್ತಿಗಳ ಸಭೆಯಲ್ಲಿ ತನ್ನ ತಂದೆ ತಾತಂದಿರ ಇದಿರೇ, ಅಷ್ಟು ಅಸಭ್ಯವಾಗಿ ವರ್ತಿಸಿದನೆಂದರೆ ನಂಬುವುದು ಹೇಗೆ ಎನಿಸಿತು. ಆ ಭಾವನೆಯಲ್ಲೇ ಒಂದು ಗಳಿಗೆ ಸುಮ್ಮನಿದ್ದು ಬಳಿಕ ಹೇಳಿದಳು—

'ತಲೆ ತೆಗೆದುಕೊಳ್ಳುವಂಥ ಅಪರಾಧವಂತೂ ನಿನ್ನಿಂದ ಈವರೆಗೂ ಆಗಿಲ್ಲ ಬಿಟ್ಟಿಯಣ್ಣ'

'ಈಗ ಆದದ್ದೇನು ಅವ್ವೆ?'

'ಏನು ಎಂದು ಕೇಳುತ್ತೀಯ? ತಪ್ಪಾದರೆ ತಲೆ ತೆಗೆದುಕೊಳ್ಳಿ ಅವ್ವೆ ಎಂದೂ ಹೇಳುತ್ತೀಯ. ಇಂಥವನು ಓಲಗದಲ್ಲಿ ಅವಿನಯದಿಂದ ವರ್ತಿಸಿದ್ದೇಕೆ? ಹಾಗೆ ವರ್ತಿಸುವಾಗ, ಅಲ್ಲಿ ನೆರೆದವರು 'ಈ ಉದ್ಧಟ ಈ ತಂದೆ-ಈ ತಾಯಿಯ ಮಗ' ಎಂದು ಅನ್ನುತ್ತಾರೆ ಎನ್ನುವುದು ಮರೆತು ಹೋಯಿತೇ ಬಿಟ್ಟಯಣ್ಣ? ಅದಕ್ಕೆ ನನಗೆ ಸಮಾಧಾನ

ಹೇಳು? ನೀನು ತಪ್ಪಾಗಿ ನಡೆದರೆ ನಿನ್ನ ಅಪ್ಪಾಜಿ' ಹೆತ್ತವಳು ಸರಿಯಾಗಿ ಬೆಳಸಲಿಲ್ಲ' ಎನ್ನುವುದಿಲ್ಲವೇ? ಹಾಗೆ ಕೇಳಿದರೆ ಅವರಿಗೆ ನಾನೇನು ಹೇಳುವುದು?'

ಏಚಲಾದೇದಿ ಹಾಕಿದ ಪ್ರಶ್ನೆಯನ್ನು ಕೇಳಿ ವಿಷ್ಣುವರ್ಧನ ಆ ಪ್ರಶ್ನೆಗೆ ಉತ್ತರ ಕೊಡಲೂ ತೋಚದೆ ಮೂಕನಾದ. ಈ ಸಭೆಯ ವಿಷಯ, ತನ್ನ ತಾಯಿಯ ಬಾಯಲ್ಲಿ ಇಂಥ ಪ್ರಶ್ನೆಯಾಗಿ ಬರಬಹುದು ಎಂದು ಆತ ನಿರೀಕ್ಷಿಸಿರಲಿಲ್ಲ. ತಂದೆಯೇ ಆ ವಿಷಯವಾಗಿ ಹೀಗೆ ಪ್ರಶ್ನೆ ಮಾಡಿದರೆ ಹೀಗೆ ಹೇಳಬೇಕು ಎಂದು ಏನೇನೋ ಲೆಕ್ಕ ಹಾಕಿಕೊಂಡಿದ್ದ ಮಾತುಗಳೆಲ್ಲವೂ ಮರೆತು ಹೋಗಿ, ಸುಮ್ಮನೆ ನಿಂತ.

'ಏಕೆ ಸುನ್ಮುನಾದೆ ಬಿಟ್ಟಿಯಣ್ಣ. ಸಭೆಯಲ್ಲಿ ಚಕ್ರವರ್ತಿಗಳಿಗೆ, ಪ್ರಧಾನಿಗಳಿಗೆ ಉತ್ತರ ಕೊಟ್ಟ ಹಾಗೇ ನನಗೂ ಏನಾದರೂ ಹೇಳು? ಎಷ್ಟಾದರೂ ಮಾತು ಕಲಿತ ಮಗ.'

—ಏಟಿನ ಮೇಲೆ ಏಟು ಕೊಡುವಂತೆ ಕೇಳಿದಳು ಏಚಲಾದೇವಿ.

ಸಹಿಸಲಸಾಧ್ಯವಾದ ಆ ಮಾತಿನ ಪೆಟ್ಟಿನಿಂದ ನೊಂದು ಹೇಳಿದೆ ವಿಷ್ಣುವರ್ಧನ—

'ಅವ್ವೆ—ನೀವು ನನ್ನ ಮಾತು ಕೇಳಿದ ಬಳಿಕ ಎಂಥವನೆಂದಾದರೂ ಕರೆಯಿರಿ. ನಿಮ್ಮಿಚ್ಛೆ ಬಂದಂತೆ ದಂಡಿಸಿರಿ. ಆದರೆ ಎಂಥವನಾದರೂ ನನ್ನ ಮಗ ಸುಳ್ಳು ಹೇಳುವುದಿಲ್ಲ ಎಂಬ ನಂಬಿಕೆ ನಿಮಗಿದ್ದರೆ ಮುಂದಿನದನ್ನು ಹೇಳುತ್ತೇನೆ.'

'ಹೇಳು?'

'ನಿಮಗೆ ನಾನು ಸಭೆಯಲ್ಲಿ ಸರಿಯಾಗಿ ನಡೆದುಕೊಳ್ಳಲಿಲ್ಲವೆಂದು ಹೇಳಿದವರು ಏನು ಹೇಳಿದರೋ, ಹೇಗೆ ಹೇಳಿದರೋ ನಾನರಿಯೆ. ಆದರೆ ಇಷ್ಟು ಮಾತ್ರ ಸತ್ಯ. ಅಜ್ಜನ ನಿದ್ರೆಗೂ ಒಂದು ಗಳಿಗೆ ಅವಕಾಶ ಕೊಡದೆ ಓಲಗಕ್ಕೆ ಕರೆಸಿಕೊಂಡ

ಚಕ್ರವರ್ತಿಗಳ ವಿಷಯದಲ್ಲಿ ನನಗೆ ಅಸಮಧಾನವಿದ್ದುದು ನಿಜ. ಆದರೆ ಸಭೆಗೆ ಹೋಗುವಾಗ ಚಕ್ರವರ್ತಿಗಳಿಗಾಗಲಿ, ಪ್ರಧಾನರಿಗಾಗಲಿ ಅಪಮಾನ ಮಾಡಬೇಕೆಂಬ ಉದ್ದೇಶ ನನಗಿರಲಿಲ್ಲ.'

'ಆದರೂ ಅವರಿಗೆ ನಮಸ್ಕರಿಸಲಿಲ್ಲ'

—ನಡುವೆಯೆ ಮಾತಾಡಿ ಹೇಳಿದಳು ಏಚಲಾದೇವಿ.

'ನಿಜ-ಆ ಬುದ್ಧಿ ನನಗೆ ಬರಲಿಲ್ಲ.'

'ಏಕೆ?'

'ಚಕ್ರವರ್ತಿಗಳನ್ನು ನೋಡಿದಾಗ ನನ್ನ ಮನಸ್ಸೇ ಬೇರೆ ಮಾತು ಹೇಳುತ್ತಿತ್ತು ಅವ್ವೆ'

'ಏನು ಹೇಳುತ್ತಿತ್ತು'

'ಹೀಗೆ ಅವರಿವರಿದುರು ಮಣಿಯುವ ಮಾಂಡಲಿಕನಾಗಿರುವುದಕ್ಕಿಂತ, ಯಾರಿಗೂ ತಲೆಬಾಗದ ಚಕ್ರವರ್ತಿಯಾಗಬೇಕು ಎಂದು ಹೇಳುತ್ತಿತ್ತು.'

ಮಾತಿನಲ್ಲಿ ಯಾವ ಅಳುಕೂ ಇಲ್ಲದೆ ನೇರವಾಗಿ ಹೇಳಿದ ವಿಷ್ಣುವರ್ಧನ.

'ಏನಂದೆ...'

—ಮಗನ ಮಾತು ಕೇಳಿ ಚಟಕ್ಕನೆ ಕೇಳಿದಳು ಏಚಲಾದೇವಿ—

'ನಿಜ ಅವ್ವೆ-ಚಕ್ರವರ್ತಿಯಾಗಬೇಕು. ಮಕುಟ ಧರಿಸಿದ ತಲೆ ಪರರನ್ನು ಮಣಿಸಬೇಕೇ ಹೊರತು ಮಣಿಯಬಾರದು ಎಂದೇ ಹೇಳುತ್ತಿತ್ತು. ಇದೇಕೆ ಹಾಗೆ

ಹೇಳುತ್ತಿದೆ ಎಂದು ಆ ಮನಸ್ಸನ್ನು ಕೇಳುತ್ತಲೇ, ಅಪ್ಪಾಜಿಯವರ ಮಾತಿಗೆ ಕಟ್ಟುಬಿದ್ದು ನಮಸ್ಕರಿಸಿದೆ. ಅವ್ವೆ-ನಿಮಗೆ ಗೊತ್ತಿದೆ-ಹಿರಿಯರಿಗೆ ನಮಸ್ಕರಿಸುವುದು ನನಗೆ ಹೊಸದಲ್ಲ. ದಿನವೂ ಏಳುತ್ತಿದ್ದ ಹಾಗೇ ನಿಮಗೆ ವಂದಿಸುತ್ತೇನೆ, ಅಪ್ಪಾಜಿಯವರ ಪಾದ ಮುಟ್ಟಿ ನಮಸ್ಕರಿಸುತ್ತೇನೆ; ಗುರುಗಳಿಗೂ ತಲೆಬಾಗಿ ವಂದಿಸುತ್ತೇನೆ. ಅಲ್ಲವೇ?'

'ನಿಜ.'

'ಹಾಗೆ ನಮಸ್ಕರಿಸಿದಾಗ ನನ್ನ ಮನಸ್ಸಿಗೆ ಹಿಂಸೆಯಾಗುವುದಿಲ್ಲ. ಅದಕ್ಕೆ ಪ್ರತಿಯಾಗಿ ಹರ್ಷವೇ ಆಗುತ್ತದೆ. ಆದರೆ ಚಕ್ರವರ್ತಿಗಳಿಗೆ ವಂದಿಸಿದಾಗ ಮಾತ್ರ ಹಾಗಾಗದೆ, ಏನೋ ಮಾಡಬಾರದುದನ್ನು ಮಾಡಿದಂತಾಯಿತು. ಮನಸ್ಸು ಈ ತಳಮಳದಲ್ಲಿರುವಾಗಲೇ ಪ್ರಧಾನಿಗಳು ಅಪಮಾನಗೊಳಿಸುವಂಥ ಕುಹಕದ ಪ್ರಶ್ನೆ ಕೇಳಿ ನನ್ನನ್ನು ಕೆರಳಿಸಿದರು. ತಡೆಯಲಾಗದೆ ಉತ್ತರ ಕೊಟ್ಟೆ.'

'ಆದರೂ ಎದುರಿಗಿರುವವರು ಚಕ್ರವರ್ತಿಗಳು ಎನ್ನುವುದನ್ನು ಮರೆಯಬಹುದೇ?'

'ಚಕ್ರವರ್ತಿಗಳ ಇದಿರು ಹಾಗೆ ಮಾತಾಡಬಾರದು ನಿಜ ಅವ್ವೆ, ಆದರೆ ಎದುರಿಗಿದ್ದವರು ಚಕ್ರವರ್ತಿಗಳು ಎಂದು ನನ್ನ ಮನಸ್ಸು ಒಪ್ಪಿಕೊಂಡಿರಲಿಲ್ಲವಲ್ಲ. ಹಾಗಾದಾಗ ಅವರು ಚಕ್ರವರ್ತಿಗಳು ಎಂದು ಹೇಗೆ ಹೇಳುವುದು?'

'ಹಾಗಂದರೇನು ಬಿಟ್ಟಿಯಣ್ಣ? ಇದೇನು ವಾದ?'

—ಮಗನ ಮಾತಿನ ಅರ್ಥ ತಿಳಿಯದೆ ಕೇಳಿದಳು ಏಚಲಾದೇವಿ.

'ಒಮ್ಮೆ ಗುರುಗಳಾದ ಕ್ರಿಯಾಶಕ್ತಿ ಪಂಡಿತರು ನನಗೆ ಒಂದು ಮಾತು ಹೇಳಿ ಕಲಿಸಿದ್ದರು.'

'ಏನು?'

'ಒಂದು ಸಲ ಅವರೊಂದಿಗೆ ಮಾತನಾಡುವಾಗ ಹೀಗೇ ದೇವರುಗಳು, ಪೂಜೆಯ ಮಾತು ಬಂತು. ನಾನಾಗ ಅವರನ್ನು 'ಗುರುಗಳೇ-ಜನ ಪೂಜಿಸುವ ನೂರಾರು ದೇವರುಗಳಲ್ಲಿ, ನಿಜವಾಗಿಯೂ ದೇವರು ಯಾರು?' ಎಂದು ಕೇಳಿದೆ. ಅದಕ್ಕೆ ಅವರು 'ಯಾರು ಯಾವುದನ್ನು ಒಪ್ಪಿಕೊಂಡರೆ ಅದೇ ಅವರಿಗೆ ದೇವರು' ಎಂದು ಹೇಳಿದರು. ಒಗಟಿನಂಥ ಆ ಮಾತಿನ ಅರ್ಥ ತಿಳಿಯದೆ 'ಹಾಗಂದರೇನು ಗುರುಗಳೆ? ಯಾರು ಯಾವುದನ್ನು ಪೂಜಿಸಿದರೆ ಅದೇ ದೇವರು ಎಂದು ಹೇಳುವುದಾದರೆ, ಆಗ ದೇವರೇ ಇಲ್ಲ, ಜನರ ಭಾವನೆಯೇ ದೇವರು ಎಂದು ಅರ್ಥವಾಗಬಹುದು. ಅಲ್ಲವೇ?' ಎಂದು ಕೇಳಿದೆ.

'ಇಂಥ ನಾಸ್ತಿಕತನದ ಮಾತನ್ನೂ ಆಡಿದೆಯಾ ಬಿಟ್ಟಿಯಣ್ಣ?'

—ಕೇಳಿದ ಕಿವಿಯನ್ನೇ ನಂಬಲಾಗದಂತೆ ಕೇಳಿದಳು ಏಚಲಾದೇವಿ.

'ನಾಸ್ತಿಕನಾಗಿ ನಾನು ಕೇಳಲಿಲ್ಲ ಅವ್ವೆ, ಕೇವಲ ಜಿಜ್ಞಾಸುವಾಗಿ ಕೇಳಿದೆ'

'ಯಾವುದಕ್ಕಾದರೂ ಸರಿಯೆ-ದೇವರ ವಿಷಯದಲ್ಲಿ ಹಾಗೆ ಅಪಶಬ್ದ ನುಡಿಯಬಾರದು ಬಿಟ್ಟಿ...'

'ಆತ್ಮವಿದ್ಯಾಸಾಧನೆಗೆ 'ನೇತಿಮಾರ್ಗ' ನಿಷಿದ್ಧವೆಂದು ಎಲ್ಲೂ ಹೇಳಿಲ್ಲವಲ್ಲ ಅವ್ವೆ; ಅದೂ ಶಾಸ್ತ್ರ ಸಮ್ಮತವಾದುದೇ. ವಸ್ತುನಿರ್ದೇಶನಕ್ಕೆ ಅದರಲ್ಲಿರುವ ಗುಣ ಸ್ವರೂಪಗಳನ್ನು ಹೇಳಿ ಹೇಗೆ ಸಾಧಿಸಬಹುದೋ ಹಾಗೇ, ಅದರಲ್ಲಿ ಇಲ್ಲದ ಗುಣ, ಅದು ತಾಳದ ಸ್ವರೂಪಗಳನ್ನೂ ಹೇಳಿ ಸಾಧಿಸಬಹುದಲ್ಲವೆ? ಹಾಗೇ ಭಗವಂತನ ಆಸ್ತಿತ್ವ ನಿರೂಪಣಕ್ಕೂ ಎರಡೂ ಮಾರ್ಗಗಳನ್ನು ಅನುಸರಿಸಬಹುದು.'

—ಕಲಿತ ವಿದ್ಯೆಯನ್ನು ತಾಯ ಮುಂದೆ ಮೆರೆಸುವ ಮಗನ ಕೆಚ್ಚಿನಿಂದ ಹೇಳಿದ ವಿಷ್ಣುವರ್ಧನ.

'ದೇವರು ಇಲ್ಲ ಎಂದು ಹೇಳಿ, ಆಮೇಲೆ ಆ ಮಾತಿನಿಂದಲೇ ಇದಾನೆ ಎಂದ ತೋರಿಸುತ್ತೀಯೋ. ಈ ದೊಂಬರಾಟವೇನೇ ನೀನು ಕಲಿತ ವಿದ್ಯೆ? ಇಂಥ ಮಾತು ಕೇಳಿ ಗುರುಗಳು ನಿನ್ನ ಕೆನ್ನೆ ಬೆಚ್ಚಗೆ ಮಾಡಿದರು ತಾನೇ?'

'ಊಹೂ. ಹಾಗೆ ಮಾಡಲಿಲ್ಲ.'

'ಮತ್ತೇನು ಮಾಡಿದರು? 'ಮೂರ್ಖ-ಎದ್ದು ಹೋಗು' ಎಂದು ಮರ್ಯಾದೆಯಾಗಿ ಹೇಳಿದರೇ?'

'ಊಹೂ—'

'ಮತ್ತೆ?'

'ಅವರು ಹಾಗೇನೂ ಮಾಡಲಿಲ್ಲ. ಶಿಲೆ, ಲೋಹ ದೇವತೆಯಾಗುವ ರೀತಿಯನ್ನು ವಿವರಿಸಿದರು...'

'ಏನು ಹೇಳಿದರು?'

'ಪ್ರಾಣಪ್ರತಿಷ್ಠಾಪನೆಯಾಗುವವರೆಗೂ ಶಿಲೆಯಾಗಲಿ, ಲೋಹವಾಗಲಿ ಪೂಜಾರ್ಹವಾದ ವಿಗ್ರಹವಾಗುವುದಿಲ್ಲ. ಇದೇ ದೇವರು ಎಂದುಕೊಂಡ ನಂಬಿಕೆಯೂ ಒಂದು ರೀತಿಯಲ್ಲಿ ಪ್ರಾಣಪ್ರತಿಷ್ಠಾಪನೆಯೇ. ಇದೇ ದೇವರು ಎಂದು ನಮಗೆ ನಂಬಿಕೆ ಬಂದಾಗ ಆ ವಸ್ತು ನಮಗೆ ದೇವರಾಗುತ್ತದೆ; ಉಳಿದವು ಬೇರೆಯಾಗುತ್ತದೆ. ಅವರಿಗೆ ಅದು ವಿನಾ ಉಳಿದದ್ದು ದೇವರಾಗುವುದಿಲ್ಲ' ಎಂದರು. 'ಅದು ಹೇಗೆ?' ಎಂದು

ಕೇಳಿದೆ. ಅದಕ್ಕವರು 'ಲೋಕದಲ್ಲಿರುವ ಹೆಣ್ಣೆಲ್ಲವೂ ತಾಯಿಯೇ. ವಿಶ್ವವ್ಯಾಪಿಯಾಗಿ, ಪಂಚಭೂತಗಳಲ್ಲೂ ಅಡಗಿರುವ ಮಾತೃ ಶಕ್ತಿಯೇ ನಮ್ಮ ಕಣ್ಣಿಗೆ ಸಾವಿರ ಹೆಣ್ಣಾಗಿ ಕಾಣಿಸಿಕೊಳ್ಳುತ್ತದೆ. ಅದರಲ್ಲಿ ಒಂದನ್ನು ತಾಯಿ ಎನ್ನುತ್ತೇನೆ; ಒಂದನ್ನು ತಂಗಿ ಎಂದು ಕರೆಯುತ್ತೇವೆ; ಮತ್ತೊಂದು ಮಡದಿ; ನಾಲ್ಕನೆಯದು ತಾಯಿ, ತಂಗಿಯಲ್ಲವಾದರೂ ಹಾಗೆಂದೇ ಭಾವಿಸಲ್ಪಡಬೇಕಾದ ಪರಸ್ತ್ರೀ ಎನ್ನುವುದಿಲ್ಲವೇ? ಇದು ತಾಯಿ, ಇದು ತಂಗಿ, ಈಕೆ ಮಡದಿ, ಈಕೆ ಪರಸ್ತ್ರೀ ಅನ್ನುವುದಕ್ಕೆ ಪ್ರಮಾಣವೇನು?' ಎಂದು ಕೇಳಿದರು. ಅದಕ್ಕೆ ನಾನು 'ಅನುಭವ' ಎಂದು ಹೇಳಿದೆ. ಆಗ ಅವರು 'ನಿನ್ನ ನಂತರ ನೀನು ತಾಯಿ ಎಂದು ನಂಬಿದ ಸ್ತ್ರೀಯಲ್ಲಿ ಜನಿಸಿದವಳು ಸೋದರಿ, ಸ್ವಗೋತ್ರವಲ್ಲದೆ ಪರಮಾತೃ ಗರ್ಭದಲ್ಲಿ ಜನಿಸಿ, ನಿನ್ನ ವಂಶಾಭಿವೃದ್ಧಿ ಮಾಡಬಂದವಳು, ನಿನ್ನ ಸಂತಾನ ಯಜ್ಞಕ್ಕೆ ದೇವತೆಗಳೂ, ಮನುಷ್ಯರೂ ಒಪ್ಪಿ ಒಪ್ಪಿಸಿದ ಕ್ಷೇತ್ರ ಮಡದಿ-ಸರಿ ಇವೆರಡೂ ಭೌತಿಕ ಪ್ರಮಾಣಕ್ಕೆ ಸಿಕ್ಕುವ ವಿಷಯಗಳಾಯಿತು. ಇನ್ನೂ ಒಬ್ಬಾಕೆಯನ್ನು ತಾಯಿ ಎನ್ನುತ್ತೀಯಲ್ಲ ಅದಕ್ಕೇನು ಕಾರಣ? ಮತ್ತೊಬ್ಬಾಕೆಯನ್ನು ಮಾತೃಸಮಾನ ಎನ್ನುತ್ತೀಯೇ ಹೊರತು ಮಾತೃ ಎಂದೇ ಕರೆಯುವುದಿಲ್ಲವಲ್ಲ-ಅದಕ್ಕೇನು ಸಮಾಧಾನ?' ಎಂದು ಕೇಳಿದರು. 'ಗರ್ಭದಲ್ಲಿ ಧರಿಸಿ, ಹಡೆದು, ಸ್ತನ್ಯಪಾನ ಮಾಡಿಸಿ ಬೆಳೆಸಿದಾಕೆಯೇ ತಾಯಿ. ಅದೂ ಕಣ್ಣಿಗೆ ಕಾಣುವ ಹಾಗೇ ಇದೆ.' ಎಂದೆ ನಾನು. 'ನಿನ್ನ ವಾದದಲ್ಲಿ ಅನುಮಾನಕ್ಕೇನೂ ಕಾರಣವಿಲ್ಲವೇ?' ಎಂದು ಕೇಳಿದರು ಗುರುಗಳು. 'ಏನೂ ಕಾಣುವುದಿಲ್ಲ' ಎಂದೇ ನಾನು ಉತ್ತರ ಕೊಟ್ಟೆ. ಆಗ ಅವರು 'ಹಾಗಾದರೆ ನೋಡು, ಅಲ್ಲೇ ನೀನು ತಪ್ಪು ಮಾಡುತ್ತಿರುವುದು. ಗರ್ಭವಾಸ ಕಾರಣದಿಂದ ತಾಯಿ ಎಂದು ಗುರುತಿಸುತ್ತೇನೆ ಎಂದರೆ, ಗರ್ಭವಾಸ ಮಾಡಿದ್ದರ ನೆನಪಿರಬೇಕು ಎಂದಾಯಿತು. ಅದು ಸಾಧ್ಯವಿಲ್ಲದುದು. ಹಾಗೇ ಅರಮನೆಯಲ್ಲಿ ಮಕ್ಕಳಿಗೆ ತಾಯಂದಿರೇ ಅಲ್ಲದೆ, ದಾದಿಯರು ಸ್ತನ್ಯಪಾನ ಮಾಡಿಸಿ ಬೆಳೆದ ಮಕ್ಕಳೂ ಉಂಟಲ್ಲ. ಅವು ಯಾರನ್ನು ತಾಯಿ ಎಂದು ಗುರುತಿಸುತ್ತವೆ. ದಾಸಿಯನ್ನೇ-ತಾಯಿಯನ್ನೇ? ಪರಸ್ತ್ರೀ ಸ್ತನ್ಯಪಾನ ಮಾಡಿಸುವ

ಸಮಯದಲ್ಲೂ ತಾಯಿ ಕಂಡಾಗ ಆ ಮಗು ದಾಸಿಯನ್ನು ಬಿಟ್ಟು ತಾಯಿಯ ಕಡೆ ಜೋಲುತ್ತದಲ್ಲಾ, ಅದು ಹೇಗೆ ಗುರುತಿಸಿತು? ಅದಕ್ಕೆ ಇಂಥವಳೇ ನಿನ್ನ ತಾಯಿ ಎಂದಾರು ಹೇಳಿದರು?' ಎಂದು ಕೇಳಿದರು. ಆಗ ನಾನು 'ಕಣ್ಣಿಗೆ ಕಾಣದಿದ್ದರೂ ಕರುಳಿಗೆ ಕಾಣುತ್ತದೆ. ಅಂತಃಕರಣವೇ ದಾರಿ ತೋರಿಸುತ್ತದೆ' ಎಂದೆ. ಆಗ ಅವರು 'ಆ ಮಾತು ಸರಿಯಾದದ್ದು. ಭೌತಿಕ ಪ್ರಮಾಣಗಳಲ್ಲಿ ಲೋಪವಿರಬಹುದು; ಅನುಮಾನಕ್ಕೆ ಎಡೆ ಇರಬಹುದು. ಶುದ್ಧ ಮನಸ್ಸಾಕ್ಷಿಯೇ ಅಂಗಿಕಾರಾರ್ಹವಾದ ಪ್ರಮಾಣ ಎಂದು ನೀನು ಒಪ್ಪಿಕೊಂಡೆಯಲ್ಲ. ಹಾಗೇ ದೇವರ ವಿಷಯದಲ್ಲೂ, ಯಾರಿಗೆ ಯಾವುದರಲ್ಲಿ ಮನಃಪೂರ್ವಕವಾಗಿ ದೇವತಾ ಭಾವನೆ ಮೂಡುತ್ತದೆಯೋ ಅದೇ ಅವನ ದೇವರಾಗುತ್ತದೆ. ಉಳಿದುದರಲ್ಲಿ ದೇವತಾಂಶವಿದ್ದರೂ ಅದಾತನಿಗೆ ದೇವರಾಗುವುದಿಲ್ಲ. ಅದಕ್ಕೇ ಈ ಬಹು ದೇವತೋಪಾಸನೆ' ಎಂದು ವಿವರಿಸಿದ್ದರು......'

—ಎಂದು ಗುರುಗಳು ತನಗೆ ಹೇಳಿದ ಮಾತನ್ನು ಹೇಳಿದ ವಿಷ್ಣುವರ್ಧನ.

ಮಗನಾಡಿದ ಮಾತನ್ನು, ಅವನು ಆ ಮಾತು ಮುಗಿಸುವವರೆಗೂ ನಡುವೆ ಮಾತನಾಡದೆ ಕೇಳುತ್ತಾ ಕುಳಿತಿದ್ದಳು ಏಚಲಾದೇವಿ. ತಾನು ಹಡೆದ ಮಗ ಬೆಳೆದು ಬುದ್ಧಿವಂತನಾಗಿ, ತನಗೇ ದೇವತೋಪಾಸನೆಯ ವಿಷಯವನ್ನು ಹೇಳುತ್ತಿರುವುದನ್ನು ಕೇಳಿ, ಆನಂದದಿಂದ ಆಕೆಯ ಕಣ್ಣು ತೇವವಾಯಿತು... ಆದರೂ ಅದನ್ನು ತೋರಿಸಿಕೊಳ್ಳದೆ—

'ಏನೋ ಕೇಳಿದರೆ ಬೇರೇನೋ ಅಡ್ಡ ಮಾತು ತೆಗೆದು ಆ ಮಾತು ಮರೆಸುತ್ತಿದೀಯಲ್ಲಾ? ಇದನ್ನಾವ ಗುರುಗಳು ಹೇಳಿಕೊಟ್ಟರು?'

—ಎಂದು ಕೇಳಿದಳು.

'ನಿಮ್ಮ ಪ್ರಶ್ನೆಗೆ ಉತ್ತರ ಕೊಡದೆ ತಪ್ಪಿಸುತ್ತಿಲ್ಲ ಅವ್ವೆ, ಅದಕ್ಕೇ ಸಮಾಧಾನ ಹೇಳಲು ನನ್ನ ತರ್ಕವನ್ನು ವಿವರಿಸುತ್ತಿದ್ದೇನೆ. ನನ್ನ ಅಂತಸ್ಸಾಕ್ಷಿಗೆ ದೇವತೆಯಾಗಿ ಒಪ್ಪಿಗೆಯಾಗದೆ ಹೋದುದು, ನನ್ನ ಪಾಲಿಗೆ ದೇವರಾಗುವುದು ಸಾಧ್ಯವಿಲ್ಲವಾದರೆ, ನನ್ನ ಮನಸ್ಸು ಚಕ್ರವರ್ತಿ ಎಂದು ಒಪ್ಪದವನು ನನಗೆ ಚಕ್ರವರ್ತಿ ಹೇಗಾದಾನು ಅವ್ವೆ? ಬಲವಂತ ಮಾಘಸ್ನಾನ ಎಂದು, ಯಾರಿಗೆ ಪುಣ್ಯ ತಂದು ಕೊಟ್ಟಿದೆ ಹೇಳಿ? ಒಲ್ಲದ ಮದುವೆಯಿಂದ ಹೆಣ್ಣಿಗೆ ಸುಖವುಂಟೇ ? ನನ್ನ ಅಂತಸ್ಸಾಕ್ಷಿಗೆ ವಿರುದ್ಧವಾದದನ್ನು ಮಾಡದೆ ಹೋದರೆ ಅದು ಅಪರಾಧವೇ? ನೀವೇ ಹೇಳಿ ಅವ್ವೆ? ನಿಮ್ಮ ಮಾತು ನನಗೆ ವೇದಪ್ರಮಾಣವಿದ್ದಂತೆ. ನಿಮ್ಮ ಹೃದಯ, ನಿಮಗೆ, ನಿಮ್ಮ ಮಗ ಮಾಡಿದುದು ತಪ್ಪು ಎಂದು ಹೇಳುತ್ತಿದ್ದರೆ-ಹೇಳಿ. ಅದಕ್ಕೆ ನೀವು ವಿಧಿಸಿದ ಶಿಕ್ಷೆ ಅನುಭವಿಸಲು ಸಿದ್ದವಾಗಿದ್ದೇನೆ.'

—ತಾಯ ವಿಷಯದಲ್ಲಿ ವಿನಯ, ಭಕ್ತಿ ತುಂಬಿದ ಧ್ವನಿಯಲ್ಲಿ ಹೇಳಿದ ವಿಷ್ಣುವರ್ಧನ.

ವಿಷ್ಣುವರ್ಧನ ಹೇಳಿದ ಮಾತನ್ನು ಹಾಗೇ ತನ್ನ ಮನದಲ್ಲಿ ಮೆಲಕು ಹಾಕುತ್ತಾ ಒಂದು ಗಳಿಗೆ ಸುಮ್ಮನೆ ಕುಳಿತಿದ್ದಳು ಏಚಲಾದೇವಿ. ತನ್ನ ಮಗ ಹೇಳಿದ ಮಾತನ್ನು ಯೋಚಿಸುತ್ತಾ, 'ಅವನು ತಪ್ಪು ಮಾಡಲಿಲ್ಲ. ಮಾಡಿದುದು ಸರಿ' ಎಂದೇ ಹೇಳಿತು ಆಕೆಯೊಳಗಿನ ಮಾತೃಹೃದಯ. ಆ ಮಾತು ಕೇಳಿ ಬಂದು, ಆಕೆಯ ಮನದೊಳಗಿನ ದುಗುಡ ಪರಿಹಾರವಾಗಿ, ಅದುವರೆಗೂ ಪ್ರಯತ್ನಪೂರ್ವಕವಾಗಿ ತಡೆದ ಕಣ್ಣೀರು ಧಾರಾಳವಾಗಿ ಹರಿದು, ಅಷ್ಟು ದೂರ ನಿಂತ ಮಗನನ್ನು ಹತ್ತಿರ ಎಳೆದುಕೊಂಡು, ಎಳೆಯ ಮಗುವಿನಂತೆ ತನ್ನ ಎಡೆಗೆ ತಬ್ಬಿಕೊಂಡು, ಉಕ್ಕಿ ಬಂದ ಪ್ರೇಮದಲ್ಲಿ ಅವನ ನೆತ್ತಿಯನ್ನು ನೇವರಿಸಿದಳು.

ಆ ತಾಯ ಕೋಮಲ ಸ್ನೇಹಮಯ ಆಲಿಂಗನದಲ್ಲಿ ವಿಷ್ಣುವರ್ಧನನೂ ಎಳೆಯ ಮಗುವಿನಂತಾಗಿ ಮೈ ಮರೆತ.

ಒಂದು ಕ್ಷಣಕಾಲ ತಾಯಿ ಮಗ ಇಬ್ಬರೂ ಪರವಶರಾಗಿ ಕುಳಿತಿದ್ದರು. ಆ ಬಳಿಕ ವಿಷ್ಣುವರ್ಧನನೇ ಮೈ ತಿಳಿದು ಕೇಳಿದ—

'ಏನು ಹೇಳಿ ಅಪ್ಪೆ? ನನ್ನದು ತಪ್ಪಾಯಿತೇ?'

'ನಾನೇನು ಹೇಳಲೋ ಬಿಟ್ಟಿ, ಮುತ್ತಿನಂಥ ಮಾತಾಡಿ ನನ್ನ ಬಾಯಿ ಕಟ್ಟಿಸಿಬಿಟ್ಟೆ, ಏನಾದರೂ ಮಾಡಿಕೋ, ನೀನುಂಟು, ಆ ಚಕ್ರವರ್ತಿಗಳುಂಟು. ಆದರೆ ನಾನು ನಿನ್ನಷ್ಟು ಓದಿದವಳಲ್ಲ, ಮಾತು ಕಲಿತವಳಲ್ಲ...'

—ಕಂಬನಿಯಲ್ಲಿ ತೊಯ್ದ ಮೃದುವಾದ ಧ್ವನಿಯಲ್ಲಿ ಹೇಳಿದಳು ಏಚಲಾದೇವಿ.

'ಕಲಿಯುವುದೂ ಓದುವುದೂ ಎಲ್ಲಾ ಗಂಡಸಿನ ಗ್ರಹಚಾರ! ಹೆಂಗಸಿಗೆ ಆ ತೊಂದರೆಯೇ ಇಲ್ಲ ಅಪ್ಪೆ.'

—ವಿಷ್ಣುವರ್ಧನ ನಗುತ್ತಾ ಏಚಲಾದೇವಿಯ ಮಾತಿನ ನಡುವೆಯೇ ಹೇಳಿದ

'ಏಕೆ?'

—ಮಗನಾಡಿದ ಮಾತನ್ನು ಕೇಳಿ ಚಕಿತಳಾಗಿ ಕೇಳಿದಳು ಏಚಲಾದೇವಿ.

'ಎಲ್ಲ ಓದೂ, ಎಲ್ಲ ಕಲಿಕೆಯೂ ಮಾತೃಶಕ್ತಿಯ ಸ್ವರೂಪವನ್ನು ತಿಳಿದು ಕೊಳ್ಳುವುದಕ್ಕಾಗಿಯೇ ಅಲ್ಲವೇ? ಹೀಗಿರುವಾಗ ಆ ಶಕ್ತಿಗೇ ಇವುಗಳೆಲ್ಲದರ ಪಾರವಾಗಬೇಕೇಕೆ? ಹೆಣ್ಣಿಗೆ ಮಾತೃತ್ವ ಸಿದ್ಧಿಯಾದಾಗ, ಸ್ವಸ್ವರೂಪ ಸಾಕ್ಷಾತ್ಕಾರವಾಗಿ

ಸಕಲ ಶಾಸ್ತ್ರಗಳೂ ಕರತಲಾಮಲಕವಾಗುತ್ತವೆ. ಆದ್ದರಿಂದರೇ ಮಾತೃದೇವೋಭವ ಎಂದು 'ಹುಟ್ಟನ್ನು ಕರುಣಿಸಿದೆ, ಹುಟ್ಟಿನ ಜ್ಞಾನವನ್ನು ಕೊಡು' ಎಂದು ಬೇಡಿ ಅಗ್ರಪೂಜೆ ಸಲ್ಲಿಸುವುದು.'

'ಇದೂ ನಿನ್ನ ಗುರುಗಳೇ ಹೇಳಿಕೊಟ್ಟುದೇ?'

'ಹೂ.'

'ಹಾಗೇ ಅವರು 'ಪಿತೃದೇವೋ ಭವಾ' ಎಂಬುದನ್ನೂ ಹೇಳಿಕೊಡಲಿಲ್ಲವೇ?'

'ಹೂ. ಹಾಗೇ ಆ ಪಿತೃದೇವತೆ ಹೇಗಾಗುತ್ತಾನೆ ಎಂದೂ ಹೇಳಿದರು?'

'ಹೇಗೆ?'

'ಮಾತೃಶಕ್ತಿ ಸಂಸರ್ಗದಿಂದ. ಪುರುಷ ಸ್ಪರ್ಶದಿಂದ ಶಿಲೆ ಸುವರ್ಣವಾಗುವಂತೆ. ಮಾತ್ರಶಕ್ತಿ ಗರ್ಭದಲ್ಲಿ ಬೀಜರೂಪವಾಗಿ ತನ್ನನ್ನೇ ತಾನು ಅರ್ಪಿಸಿಕೊಂಡು ಪುರುಷ ಪಿತೃದೇವತೆಯಾಗುತ್ತಾನೆ.'

ಆ ಮಾತನ್ನು ಕೇಳಿ ಏಚಲಾದೇವಿ ಒಂದು ಗಳಿಗೆ ಮೂಕಳಾದಳು. ಮಗ ಹೇಳಿದ ಮಾತನ್ನು ಕೇಳಿ ಆಕೆಯ ಹೃದಯದಲ್ಲಿ ಮೂಡಿದ ಆನಂದದ ಕಡಲ ತೆರೆಗಳು ಸೂಸಿದ ತುಂತುರೋ ಎಂಬಂತೆ, ಆಕೆಯ ನೇತ್ರಗಳಿಂದ ಬಾಷ್ಪವಾರಿ ಹರಿಯುತ್ತಿತ್ತು.

'ಏಕೆ ಅವ್ವೆ ಸುಮ್ಮನಾಗಿಬಿಟ್ಟರಿ?'

—ಆಕೆಗೆ ತನ್ನ ಮಾತಿನಿಂದ ಸಂತೋಷವಾಗಿದೆಯೆಂದು, ಕಣ್ಣೀರು ಹರಿಯುತ್ತಿದ್ದರೂ ಪ್ರಸನ್ನವಾದ ಮುಖಭಾವದಿಂದ ಅರಿತುಕೊಂಡು ಕೇಳಿದ ವಿಷ್ಣುವರ್ಧನ.

'ನಾನಿನ್ನು ಏನು ಹೇಳಲಿ ಕಂದಾ? ಮಾತುಮಾತಿನಲ್ಲೇ ನನಗೆ ಮೂರು ಲೋಕದ ಪಟ್ಟ ಕಟ್ಟಿಬಿಟ್ಟೆ.'

'ಹಾಗಾದರೆ ನನ್ನಿಂದ ತಪ್ಪಾಗಲಿಲ್ಲವೆಂದು ನಿಮಗೆ ನಂಬಿಕೆಯಾಯಿತು ತಾನೆ?'

—ಮತ್ತೆ ಆರಂಭಕ್ಕೇ ಬಂದು ಕೇಳಿದ ವಿಷ್ಣುವರ್ಧನ.

'ಹೆತ್ತ ಕರುಳಿಗೆ ಮಕ್ಕಳ ದೋಷ ಕಾಣಿಸುವುದಿಲ್ಲ ಬಿಟ್ಟಿಯಣ್ಣ. ಯಾರೇನಾದರೂ ಅನ್ನಲಿ-ನೀನು ಒಳ್ಳೆಯ ಮಗ. ಅಷ್ಟೇ ನನಗೆ ತಿಳಿಯುವುದು. ನನ್ನ ಮಾತು ವೇದಪ್ರಮಾಣ ಎಂದೆ. ಹಾಗಿದ್ದರೆ ಒಂದು ಕೆಲಸ ಮಾಡು.'

'ಏನು ಹೇಳಿ ಅವ್ವೆ?'

'ಚಕ್ರವರ್ತಿಗಳಿಗೆ ನಿನ್ನ ವರ್ತನೆಯಿಂದ ಏನು ಅನಿಸಿತೋ ಏನೋ. ಭಗವಂತ ಅದನ್ನು ನೋಡಿಕೊಳ್ಳಲಿ. ಆದರೆ ಅದರಿಂದ ನಿನ್ನ ಅಪ್ಪಾಜಿಯವರಿಗೆ, ನನ್ನ ಮಾವನವರಿಗೆ ತುಂಬಾ ಮನಸ್ಸು ನೊಂದಿದೆ. ಹೋಗಿ ಅವರನ್ನು ಒಂದು ಮಾತು 'ತಪ್ಪಾಯಿತು' ಎಂದು ಕೇಳಿಬಿಡು. ಒಂದು ವೇಳೆ ನಿನ್ನ ಮೇಲೆ ಚಕ್ರವರ್ತಿಗಳು ಸಿಟ್ಟಾದರೂ, ಇವರ ಆಶೀರ್ವಾದ ನಿನ್ನನ್ನು ಕಾಪಾಡುತ್ತದೆ'

—ಎಂದು ಪರಿಹಾರ ಹೇಳಿದಳು ಏಚಲಾದೇವಿ.

'ಆಯಿತು ಅವ್ವೆ. ಈಗಲೇ ನೀವು ಹೇಳಿದ ಹಾಗೆ ಮಾಡುತ್ತೇನೆ.'

—ಎಂದು ವಿಷ್ಣುವರ್ಧನ ತಾಯಿಯ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಿದ.

’ದೀರ್ಘಾಯುಷಿಯಾಗಿ, ಚಕ್ರವರ್ತಿ ಸಾರ್ವಭೌಮನಾಗಿ ಬಾಳು’

—ಎಂದು ಬಾಯಿ ಬಿಟ್ಟು ಹೇಳದಿದ್ದರೂ, ತನ್ನೊಳಗೇ ಆ ಮಾತನ್ನು ಅಂದು ಹರಸಿತು ಏಚಲಾದೇವಿಯ ಮಾತೃಹೃದಯ.

*          *          *          *          *          *

ತಾಯಿಯ ಅಪ್ಪಣೆಯಂತೆ, ವಿಷ್ಣುವರ್ಧನ ತನ್ನ ತಾತ, ತಂದೆಗೆ, ಓಲಗದಲ್ಲಿ ತಾನು ವರ್ತಿಸಿದ ರೀತಿಗೆ ಕಾರಣವನ್ನು ವಿವರಿಸಿ ’ನನ್ನದು ತಪ್ಪಾಗಿದ್ದರೆ ಮನ್ನಿಸಿ’ ಎಂದು ಬೇಡಿದಾಗ, ಆತನ ವಿಷಯದಲ್ಲಿ ಮೊದಲೇ ಪ್ರೀತಿಕೋಮಲವಾದ ಅವರ ಹೃದಯ ಆ ಕೂಡಲೇ ಆತನನ್ನು ಕ್ಷಮಿಸಿತು. ಅಷ್ಟಕ್ಕೇ ಅವರು ಅದನ್ನು ಮರೆಯುವುದಕ್ಕೂ ಸಿದ್ಧವಾಗಿದ್ದರು.

ಆದರೆ ತುಂಬಿದೋಲಗದಲ್ಲಿ ಮುಖಭಂಗಿತನಾದ ಪ್ರಧಾನಿ ಕಾಳಿದಾಸಯ್ಯನಾಗಲಿ, ಅದೇ ಬಗೆಯ ಅಪಮಾನದ ಭಾವನೆಯಿಂದ ಬೇಯುತ್ತಿದ್ದ ಚಾಲುಕ್ಯ ಚಕ್ರವರ್ತಿ ವಿಕ್ರಮಾದಿತ್ಯನಾಗಲಿ, ಆ ಘಟನೆಯನ್ನು ಅಲ್ಲಿಗೇ ಮರೆಯಲು ಸಿದ್ಧರಾಗಿರಲಿಲ್ಲ.

ಅವರು ಅದನ್ನು ಮರೆಯದಂತೆ, ಅಂದು ಮೂಡಿದ ಕಿಚ್ಚಿನ ಕಿಡಿಗೆ ಗಾಳಿ ಬೀಸುವ ಜನರೂ ಕಡಮೆಯಾಗಿರಲಿಲ್ಲ.

೬

ಓಲಗದಿಂದ ಹಿಂದಿರುಗಿದ ವಿಕ್ರಮಾದಿತ್ಯನ ಮನಸ್ಸೂ, ಓಲಗದಲ್ಲಾದ ಅನಿರೀಕ್ಷಿತ ಘಟನೆಯಿಂದ ಪ್ರಕ್ಷುಬ್ಧವಾಗಿತ್ತು. ಹಲಬಗೆಯ ಭಾವನೆಗಳ ತೆರೆ ಹೊಯ್ಲಿಗೆ ಸಿಲುಕಿದ ಆತನ ಚಿತ್ತ ಹೊಟ್ಟೆಯಲ್ಲಿ ಕೆಂಡ ತುಂಬಿಕೊಂಡು, ಉರಿ ಕಾರಲು ಅವಕಾಶವಿಲ್ಲದೆ, ಗಾಳಿ ಸುಳಿದಾಗಲೂ ಸಣ್ಣ ಕಿಡಿ ಕೆದರುತ್ತಾ, ಬರೀ ಹೊಗೆಯನ್ನೇ ಕಾರುವ ಧೂಪಘಟದಂತಾಗಿತ್ತು.

ತಾನು ಚಕ್ರವರ್ತಿ ಸಾರ್ವಭೌಮ; 'ತನ್ನ' ಓಲಗದಲ್ಲಿ 'ತನ್ನ' ಸಾಮಂತನ ಮಗನೊಬ್ಬನು ಅವಿಧೇಯನಾಗಿ ವರ್ತಿಸಿ, ತನ್ನ ಕಣ್ಣೆದಿರೇ ತನ್ನ ಪ್ರಧಾನಿಯ ತೇಜೋವಧೆ ಮಾಡಿದ ಎಂಬ ಭಾವನೆ, ಆ ಹುಡುಗನನ್ನು ಹಿಡಿದು ಶೂಲಕ್ಕೇರಿಸಲು ಅಪ್ಪಣೆ ಕೊಡಬೇಕು ಎಂಬಷ್ಟು ಕ್ರೋಧವನ್ನು ಉದ್ರೇಕಿಸಿದರೆ, ಆ ಗಳಿಗೆಯಲ್ಲೇ 'ಅವಿಧೇಯನೇನೋ ಅಹುದು. ಆದರೆ ಅದು ಅವನಲ್ಲಿ ಲೋಪವಾಗಿ ಕಾಣಿಸದೆ ಮಿರುಗಿಟ್ಟ ಕಾಂಚನದ ಹೊಳಪಿನಂತೆ ಸ್ವಾಭಾವಿಕವಾಗಿ ಗುಣವಾಗಿ ಕಾಣಿಸುತ್ತದೆ. ಒಳಗಿನ ಬಲಾಧಿಕ್ಯದಿಂದ, ಕಡಿವಾಣವನ್ನು ಕಾಣುತ್ತಿರುವ ಹಾಗೇ, ಗೊರಸಿನಿಂದ ನೆಲವನ್ನು ಒದೆಯುತ್ತಾ, ಕತ್ತನ್ನು ನಿಮಿರಿಸಿ ನಿಲ್ಲುವ ಕಾಡುಕುದುರೆಯಂತಿರುವ ಈ ಶಕ್ತಿಯನ್ನು ಪಳಗಿಸಿ, ತನ್ನ ರಾಜ್ಯರಥಕ್ಕೆ ಹೂಡಿದರೆ ಎಷ್ಟು ಸೊಗಸು' ಎಂಬ ಭಾವನೆ ಮೂಡಿ 'ಭಲೆ' ಎಂದು ಅವನ ಬೆನ್ನು ಚಪ್ಪರಿಸಬೇಕು ಎನಿಸುವುದು. ಆದರೆ ಮರುಗಳಿಗೆಯೇ ಏನೋ ಒಂದು ಭೀತಿ ಅವನ ಮೈಯೊಳಗೆ ತುಂಬಿ ಬಂದು ಉಳಿದೆಲ್ಲ ಭಾವನೆಗಳೂ ಅಡಗಿ ಹೋಗಿ, ಆತನ ಕುಳಿತ ಆಸನವೇ ಕಂಪಿಸಿದಂತಾಗಿ, ಯಾವುದೋ ವಾಣಿ 'ಈ ಭೂಮಿಯಲ್ಲಿ ನೀವಿಬ್ಬರೂ ಅರಸರಾಗಿ ಇರಲಾರಿರಿ. ಒಂದೇ ಒಲೆಯಲ್ಲಿ ಎರಡು ಸೌದಿಯ ಸೀಳು, ಪ್ರತ್ಯೇಕ ಉರಿಗಳಾಗಿ ಉರಿಯುವುದು ಸಾಧ್ಯವಿಲ್ಲ.

ಅವೆರಡರಲ್ಲಿ ಯಾವುದು ಬಲವಾದರೆ, ಹಾಗೆ ಬಲವಾದದ್ದರಲ್ಲಿ ಇನ್ನೊಂದರ ಉರಿ ಅಡಗಿ ಹೋಗಬೇಕು. ಈಗ ನೀನು ಬಲವಾದರೆ ನೀನು ಉಳಿಯುತ್ತೀಯ, ಅವನು ಬಲವಾದರೆ, ನಿನ್ನ ಸಾಮ್ರಾಜ್ಯ ಅವನ ಶಕ್ತಿವಲಿಯದಲ್ಲಿ ಅಡಗಿ ಹೋಗಬೇಕು' ಎಂದು ಹೇಳಿದಂತಾಗಿ 'ಕೂಡದು, ಕೂಡದು, ಇನ್ನೂ ಕುಡಿಯಾಗಿರುವಾಗಲೇ ಈ ಕಿಚ್ಚನ್ನು ಆರಿಸದೆ ಹೋದರೆ, ಮುಂದೆ ಅದು, ಯಾವುದರ ಬಲದಿಂದ ಬೆಳೆಯಿತೋ ಆ ಮರವನ್ನೇ ತಿಂದು ಮುಗಿಸುವ ಕಾಳ್ಗಿಚ್ಚಾಗುವುದು ಖಂಡಿತ. ಆದ್ದರಿಂದ ಈಗಲೇ ಅದನ್ನು ಒರೆಸಿ ಬಿಡಬೇಕು. ಬೆಳೆಯಲು ಬಿಡಬಾರದು' ಎನಿಸುವುದು.

ಆ ಹೊತ್ತಿನಲ್ಲಿ, ಅವನು ಕಲಿತ ರಾಜಕಾರಣವೂ ಅವನಿಗೆ ಅದೇ ಮಾತನ್ನೇ ಹೇಳುವುದು—

'ಶತ್ರುವನ್ನಾಗಲಿ, ಬೆಂಕಿಯನ್ನಾಗಲಿ ಕಿಡಿಯೆಂದು ಅಲಕ್ಷಿಸದೆ, ಆರಂಭದಲ್ಲೇ ಅದನ್ನು ಕೊನೆಗಳಿಸಬೇಕು.'

ಅವನ ಜೀವನವೂ ಆ ಮಾತನ್ನೇ ಪ್ರತಿಧ್ವನಿಸುವುದು—

'ನಿಜ, ನಿಜ, ಸಾಮ್ರಾಜ್ಯ ಮೋಹಿನಿ ಯಾರಲ್ಲಿ ತಾನೇ ಭೋಗಾಭಿಲಾಷೆಯನ್ನು ಕೆರಳಿಸುವುದಿಲ್ಲ. ಸ್ತ್ರೀಯಲ್ಲಿ ಪಾತ್ರಾಪಾತ್ರ ವಿವೇಚನೆ. ಮಾಡುವ ಬುದ್ಧಿಯೂ, ಈ ಮಾಯೆಯ ಇದಿರು ಮಸುಳಿ ಹೋಗುತ್ತದೆ. ಅಣ್ಣನ ಸಿಂಹಾಸನವನ್ನು ಆಕ್ರಮಿಸಬೇಕೆಂಬ ಚಪಲ ತನ್ನಲ್ಲೇ ಮೂಡಲಿಲ್ಲವೇ? ತಾನು ಸಾಮ್ರಾಟನಾಗುವವರೆಗೂ ತನ್ನಲ್ಲಿ ಅಖಂಡ ವಿಶ್ವಾಸವನ್ನಿಟ್ಟುಕೊಂಡ ಸೋದರ ಜಯಸಿಂಹನೂ ತನಗೆ ಇದಿರುಬೀಳಲಿಲ್ಲವೇ? ಹೀಗಿರುವಾಗ ತನ್ನ ಸಾಮಂತರೂ ಕೆಲವರಿಗೆ, ಈ ಸಾಮ್ರಾಜ್ಯವನ್ನು ಆಕ್ರಮಿಸಬೇಕೆಂಬ ಭಾವನೆ ಬರದೆ ಹೋದೀತೇ? ಆ ಆಕ್ರಮಣ ಬುದ್ಧಿಯೇ, ಈಗ ಅವಿಧೇಯತೆಯಾಗಿ ಕಾಣಿಸಿಕೊಂಡಿದೆ. ಈಗಲೇ ಅದನ್ನು

ಮುರಿಯಬೇಕು; ಇಲ್ಲವೇ—ಅದನ್ನು ಬೆಳೆಯಗೊಟ್ಟರೆ, ಅದು ಬೆಳೆದು ಬಲವಾದಾಗ ಅದರ ಇದಿರು ತಾನು ಮುರಿದು ಬೀಳಬೇಕು.'

ಈ ಎಲ್ಲ ಯೋಚನೆ ಮಾಡಿ—

'ಸರಿ, ಸರಿ, ಇನ್ನು ಇದನ್ನು ಮುರಿಯುವ ದಾರಿ ಯಾವುದೆಂದು ಯೋಚಿಸಬೇಕು'

—ಎಂಬ ನಿರ್ಧಾರವನ್ನು ತಲಪುವ ವೇಳೆಗೇ—

'ಅದೇನೋ ಸರಿ. ಅದನ್ನು ಮುರಿಯುವ ಕೆಲಸ ತನ್ನ ಶಕ್ತಿಗೆ ಮೀರಿದ್ದಲ್ಲ, ಯಾವ ಗಳಿಗೆಯಲ್ಲಿ ಬೇಕೆಂದರೂ ಅದನ್ನು ಮಾಡಿ ಮುಗಿಸಬಹುದು. ಆದರೆ, ಅದನ್ನು ಸಂಪೂರ್ಣವಾಗಿ ಮಟ್ಟ ಹಾಕುವ ಮೊದಲು, ಕಾಡನ್ನು ಕೊಚ್ಚಲು ಬರುತ್ತಿರುವ ಈ ಹುಚ್ಚು ಹೊಳೆಗೆ ಎಲ್ಲಿಯಾದರೂ ಅಣೆಕಟ್ಟು ಹಾಕಿ, ಅದನ್ನು ಹೆಚ್ಚು ಬೆಳೆಗೆ ಕಾರಣವಾಗುವ ಕಾಲುವೆಯಾಗಿ ತಿರುಗಿಸಿಕೊಳ್ಳಲು ಸಾಧ್ಯವೇನೋ ಎಂದು ಪ್ರಯತ್ನಿಸಿ ನೋಡಬಾರದೇಕೆ? ತನ್ನ ಮಾರಣಾಸ್ತ್ರವೆಂಬಂತೆ, ಇದಿರು ಹೊಳೆಯುತ್ತಿರುವ ಬ್ರಹ್ಮಾಸ್ತ್ರವನ್ನು, ಅದು ಹೇಗಾದರೂ ಮಾಡಿ, ತನ್ನ ಬತ್ತಳಿಕೆಯೊಳಗೇ ಬರುವಂತೆ ಮಾಡಿದರೆ, ಆಗ ಅದೇ ತನ್ನ ರಕ್ಷಣಾಸ್ತ್ರವಾಗುವುದಲ್ಲ, ಹಾಗೆ ಮಾಡಬಾರದೇಕೆ?'

—ಎನ್ನುವ ಯೋಚನೆ ಮೂಡುವುದು.

ಹಾಗೇ ಯೋಚಿಸುವ ಹೊತ್ತಿನಲ್ಲೇ ವಿಕ್ರಮಾದಿತ್ಯನ ಮನಸಿನಲ್ಲಿ ಏನೋ ಒಂದು ದೂರದ ಯೋಚನೆ ಸುಳಿಯಿತು.

'ಹೊಯ್ಸಳರೇನೂ ನಮಗೆ ದೂರದವರಲ್ಲ, ಅವರ ಮನೆಯ ಹೆಣ್ಣನ್ನು ತಂದುಕೊಂಡು, ಅವರು ಸಾಮನ್ತರಷ್ಟೇ ಅಲ್ಲ, ನೆಂಟರೂ ಅಹುದು ಎಂದು

ಹೇಳಿಯಾಗಿದೆ. ಆ ಸಂಬಂಧವನ್ನೇ ಮುಂದುವರಿಸಿ, ತನ್ನ ಮಗಳು ಮೈಲಳೆಯನ್ನು ವಿಷ್ಣುವರ್ಧನನಿಗೆ ಕೊಟ್ಟು ವಿವಾಹ ಮಾಡಿ ಅಳಿಯನನ್ನಾಗಿ ಮಾಡಿಕೊಂಡರೆ, ಆಗ ಅದರಿಂದ ವಿದ್ರೋಹ ಬುದ್ಧಿ ಅಡಗಿ, ಈಗ ಶತ್ರು ಶಕ್ತಿಯಾಗಿರುವುದೇ ತಮ್ಮ ತೋಳ ಬಲವಾಗಬಹುದಲ್ಲ ಹಾಗೇಕೆ ಮಾಡಬಾರದು. ಅದು ಸಲ್ಲದ ಯೋಚನೆಯೂ ಅಲ್ಲ. ನಿಜ, ನಿಜ, ತಾನು ಒಪ್ಪಿದರೆ ವಿನಯಾದಿತ್ಯನಾಗಲಿ, ಎರೆಯಂಗನಾಗಲಿ ಇದಕ್ಕೆ ಬೇಡ ಎನ್ನುವವರಲ್ಲ. ಹಾಗಾದರೆ, ಸಾಮ್ರಾಜ್ಯಕ್ಕೆ ಈ ಶಕ್ತಿ ವರ್ಧಿಸುತ್ತಿರುವುದು ಚಿಂತೆಗೆ ಕಾರಣವಾಗುವುದಿಲ್ಲ, ಆದ್ದರಿಂದ ಇಳಿವಯಸ್ಸಿನಲ್ಲಿ ಸಾಮಂತರ ಸ್ನೇಹವನ್ನು ಕಳೆದುಕೊಳ್ಳುವ ಪ್ರತೀಕಾರದ ಯೋಚನೆಗಿಂತಲೂ, ಅನರ ವಿಶ್ವಾಸವನ್ನು ಮತ್ತಷ್ಟು ಗಳಿಸುವ ಈ ಸ್ನೇಹ ಯೋಚನೆಯೇ ಒಳಿತು. ಆಗಲಿ, ಹಗಲಾಗಲಿ, ಪ್ರಧಾನಿಗಳೊಂದಿಗೆ ಈ ವಿಷಯ ಚರ್ಚಿಸಿ ನಿರ್ಧರಿಸುವುದು'

—ಎಂಬ ಒಂದು ನಿರ್ಧಾರಕ್ಕೆ ಬಂದ ವಿಕ್ರಮಾದಿತ್ಯ.

*        *        *        *        *        *

ಆದರೆ ಪ್ರಧಾನಿ ಕಾಳಿದಾಸಯ್ಯನ ಮನಸ್ಸೇ ಬೇರೊಂದು ದಾರಿಯಲ್ಲಿ ಚಿಂತಿಸುತ್ತಿತ್ತು.

ಹೊಯ್ಸಳರ ವಿಷಯದಲ್ಲಿ ಆತನ ಮನಸ್ಸು ಮೊದಲೇ ಕಲುಷಿತವಾಗಿತ್ತು.

ಸ್ವಪೌರುಷ, ಚಕ್ರವರ್ತಿಯ ವಿಶ್ವಾಸ—ಹೀಗೆ ಇಬ್ಬಗೆಯಿಂದಲೂ ರಕ್ಷಿತವಾದ ಆಕಾರಣ ಅಸಮಧಾನವನ್ನು ಮೂಡಿಸಿತ್ತು. ಅದನ್ನು ಕಂಡ ಗಂಗೆ ಪೆರ್ಮಾಡಿಯಂಥವರು—

'ವಜ್ರದ ಓಲೆ ಧರಿಸಿದ ಮಾತ್ರಕ್ಕೇ ಮೂಗಿಗಿಂತ ಕಿವಿ ಮೇಲಾದೀತೇ? ಮಾಂಡಲಿಕರಾದ ಮಾತ್ರಕ್ಕೆ ಪ್ರಧಾನಿಗಳ ಚಿಕ್ಕ ತಂದೆಯವರಿಗಿಂತಲೂ ನಾವು ಹಿರಿಯರಾಗುವುದು ಸಾಧ್ಯವೇ? ಪ್ರಧಾನಿಗಳು ಚಕ್ರವರ್ತಿಗಳನ್ನೇ ಆಳುವವರು ಅವರನ್ನು ಆಳುವವರು ನೀವು. ಹಾಗಿರುವಾಗ ಎಲ್ಲರೂ ನಿಮ್ಮನ್ನು ಗೌರವಿಸಬೇಕು. ಗೌರವಿಸುವುದಿರಲಿ, ಈ ವಿನಯಾದಿತ್ಯ ಒಂದು ಸಲ ಇಲ್ಲಿಗೆ ಬಂದು ನಿಮ್ಮ ಯೋಗಕ್ಷೇಮವನ್ನು ಕೂಡಾ ವಿಚಾರಿಸಿಕೊಂಡು ಹೋಗಲಿಲ್ಲವಲ್ಲ. ಎಂಥ ರೇಂಕಾರ! ಆ ರೇಂಕಾರಕ್ಕೆ ಬುದ್ಧಿ ಕಲಿಸಲು ನೀವೇ ಶಕ್ತರು'

—ಎಂದು ವಿನಯಾದಿತ್ಯನನ್ನು ತೆಗಳಿ, ಸರ್ವದೇವನನ್ನು ಹೊಗಳಿ, ಆತನ ಅಸಮಧಾನದ ವಿಷವೃಕ್ಷಕ್ಕೆ ನೀರೆರೆದಿದ್ದರು.

'ಆಗಲಿ, ಆಗಲಿ, ಹೊತ್ತು ಬಂದಾಗ ಅವನಿಗೂ ನಮ್ಮ ಬಲವೆಷ್ಟು ಎಂದು ಗೊತ್ತಾಗುತ್ತದೆ'

—ಎಂದು ಸರ್ವದೇವನೂ, ಮರಿಯ ಮಾತು ಕೇಳಿ ಹೊಟ್ಟೆ ಉಬ್ಬಿಸಿದ ಕಥೆಯ ಕಪ್ಪೆಯಂತೆ ತನ್ನ ಎದೆಯುಬ್ಬಿಸಿಕೊಂಡು ಹೇಳಿದ್ದ.

ಈ ಭಾವನೆಯಿಂದರೇ ಸರ್ವದೇವ, ತನ್ನ ಆಹ್ವಾನದಂತೆ ಬಳ್ಳಿಗಾಮೆಗೆ ಬಂದ ವಿನಯಾದಿತ್ಯನನ್ನು ಎದುರುಗೊಳ್ಳಲು ಸಾಮಾನ್ಯ ಹೆಗ್ಗಡೆಯೊಬ್ಬನನ್ನು ಕಳಿಸಿ ತನ್ನ ಹೊಟ್ಟೆ ಉರಿ ತೀರಿಸಿಕೊಂಡು, ತನ್ನ ಹಿರಿಮೆಯನ್ನು ಮೆರೆದಿದ್ದ.

ಅಷ್ಟೇ ಅಲ್ಲ, ತನ್ನ ಮಾತನ್ನು ಕೇಳುವ ಕಾಳಿದಾಸಯ್ಯನ ಕಿವಿಯಲ್ಲೂ ಹೊಯ್ಸಳರ ಬಗ್ಗೆ ವಿಷವೆರೆದಿದ್ದ.

ಪ್ರಬಲರಾದ ಹೊಯ್ಸಳರ ವಿಷಯದಲ್ಲಿ ಕಾಳಿದಾಸಯ್ಯನಲ್ಲಿ ಸಹಜವಾಗಿಯೇ ಮೂಡಿದ್ದ ಸಂಶಯ ಇಂಥ ಮಾತುಗಳಿಂದ ಬಲವಾಗಿತ್ತು.

ಎಂತಲೇ ಬಳ್ಳಿಗಾಮೆಗೆ ಬಂದ ವಿನಯಾದಿತ್ಯ ಬರುತ್ತಿದ್ದ ಹಾಗೇ ತನ್ನನ್ನು ಬಂದು ನೋಡದಿದ್ದುದನ್ನು ಕಂಡು—

'ನಿಜ ನಿಜ-ಇವರು ಬಹಳ ಪ್ರಬಲಿಸಿಬಿಟ್ಟರು. ಇವರಿಗೆ ಯಾರದೂ ಲೆಕ್ಕವಿಲ್ಲ'

—ಎಂದು ಅಸಮಧಾನ ತಾಳಿದ್ದ.

ಇದೆಲ್ಲದರೊಂದಿಗೆ, ತುಂಬಿದ ಓಲಗದಲ್ಲಿ ವಿಷ್ಣುವರ್ಧನನಿಂದಾದ ತೇಜೋಭಂಗ ಆತನ ಕಲುಷಿತ ಬುದ್ಧಿಯಲ್ಲಿ ಇವರನ್ನು ಮುರಿಯಲೇಬೇಕು ಎಂಬ ಕಿಚ್ಚನ್ನು ಮೂಡಿಸಿತ್ತು.

'ಸಮಯ ಸಿಗಲಿ, ಇವರ ನೆತ್ತಿಗೆ ಏರಿರುವ ಪಿತ್ತವನ್ನು ಇಳಿಸದಿದ್ದರೆ ನನ್ನ ಹೆಸರೇ ಕಾಳಿದಾಸಯ್ಯ ಅಲ್ಲ'

—ಎಂದುಕೊಂಡು ಕಾಳಿದಾಸಯ್ಯ ಹೊಯ್ಸಳರ ಪಾಲಿಗೆ ಅಕಾರಣ ಹಗೆಯಾಗಿದ್ದ.

*   *   *   *   *   *

ಈ ಒಳ ಕುದಿಯಿಂದರೇ ಕಾಳಿದಾಸಯ್ಯ, ಮರುದಿನ, ವಿಕ್ರಮಾದಿತ್ಯ ತನ್ನೊಂದಿಗೆ ಒಲಗದಲ್ಲಿ ನಡೆದ ಘಟನೆಯನ್ನು ಪ್ರಸ್ತಾಪಿಸಿದಾಗ—

’ಮೀರಿ ಬೆಳೆದ ಹಲ್ಲನ್ನು ತುಟಿಯಿಂದ ಎಷ್ಟು ದಿನ ಮುಚ್ಚಿಕೊಂಡಿರಲು ಸಾಧ್ಯ? ಎಂದಿದ್ದರೂ ಅದು ಕಾಣಿಸಿಕೊಳ್ಳಲೇಬೇಕು. ಅಂತೂ ಈಗಲೇ ಅದು ಕಾಣಿಸಿಕೊಂಡಿದ್ದು ಒಳಿತಾಯಿತು.’

—ಎಂದ ತನ್ನ ಹೊಟ್ಟೆಯಲ್ಲಿದ್ದ ವಿಷವನ್ನೇ ವಿಕ್ರಮಾದಿತ್ಯನ ಕಿವಿಗೂ ಎರೆಯುತ್ತಾ.

ಕಾಳಿದಾಸಯ್ಯ ಆ ಮಾತನ್ನು ಆಡಿದ ರೀತಿಯನ್ನು ಕೇಳಿ, ವಿಕ್ರಮಾದಿತ್ಯನಿಗೆ ದೂರದ ಬೆಂಕಿಯ ಝಳ ಸೋಕಿದಂತಾಯಿತು. ಅನಿರೀಕ್ಷಿತವಾದ ಮಾತನ್ನು ಕೇಳಿ ಮೂಡಿದ ವಿಸ್ಮಯದಲ್ಲೇ—

’ಹಾಗಂದರೇನು?’

—ಎಂದು ಪ್ರಶ್ನೆ ಮಾಡಿದ.

’ಚಕ್ರವರ್ತಿಗಳ ವಿಶ್ವಾಸದಿಂದ ಪೋಷಿತರಾದ ಹೊಯ್ಸಳರು ದಿನದಿನಕ್ಕೆ ಉದ್ಧಟರಾಗುತ್ತಿದ್ದಾರೆ ಎಂಬ ಮಾತು ಹತ್ತಾರು ಕಡೆಗಳಿಂದ ನಮ್ಮ ಕಿವಿಗೆ ಬಿದ್ದಿತ್ತು. ಈದಿನ ಆದು ನಿಜ ಎಂದು ಕಣ್ಣಾರೆ ಕಂಡೆ ಹಾಗಾಯಿತು.’

’ಓಲಗದಲ್ಲಿ ನಡೆದ ಘಟನೆಯ ವಿಷಯವಾಗೇ ತಾನೇ ತಾವು ಈ ಮಾತು ಹೇಳುತ್ತಿರುವುದು?’

’ನಿಜ.’

’ಪ್ರಧಾನಿಗಳು ಆ ಘಟನೆಗೆ, ಯುಕ್ತವಲ್ಲದಷ್ಟು ಹೆಚ್ಚಿನ ಬೆಲೆ ಕೊಡುತ್ತಿರುವಂತೆ ಕಾಣುತ್ತಿದೆ.’

—ವಿಕ್ರಮಾದಿತ್ಯನಕ್ಕು ಹೇಳಿದ.

'ಅಂದರೆ....'

'ಅಂದರೆ-ಹುಡುಗ ಬುದ್ಧಿಯ ಮಾತನ್ನೇ ಹಿರಿಯರ ಹೃದಯವೆಂದು ಪ್ರಧಾನಿಗಳು ಭ್ರಮಿಸುತ್ತಿರುವಂತಿದೆ.'

ವಿಕ್ರಮಾದಿತ್ಯವಿನಯಾದಿತ್ಯ, ಎರೆಯಂಗದೇವನನ್ನು ಬಿಟ್ಟುಕೊಡದೆ ಆಡಿದ ಆ ಮಾತನ್ನು ಕೇಳಿ, ಕಾಳಿದಾಸಯ್ಯನ ಹೃದಯದಲ್ಲಿದ್ದ ಕಹಿ ಕಡಮೆಯಾಗದೆ ಮತ್ತಷ್ಟು ಹೆಚ್ಚಿತು. ಆದರೂ ಅದನ್ನು ತೋರಗೊಡದೆ ಗಂಭೀರವಾಗಿ—

'ನಾವು ಸಾಮ್ರಾಜ್ಯದ ಹಿತೈಷಿಗಳು ಎಂಬ ವಿಷಯದಲ್ಲಿ ಚಕ್ರವರ್ತಿಗಳಿಗೆ ಸಂಶಯವಿಲ್ಲವಷ್ಟೇ?'

—ಎಂದು ಕೇಳಿದ.

'ಆ ವಿಷಯದಲ್ಲಿ ನಮಗೆ ಎಳ್ಳು ಕಾಳು ಮುಳ್ಳು ಮೊನೆಯಷ್ಟಾದರೂ ಸಂಶಯವಿಲ್ಲ.'

'ಅದು ನಮ್ಮ ಭಾಗ್ಯ. ಹಾಗೇ, ತಾವು ನಮ್ಮಲ್ಲಿ ಅತಿಶಯವಾದ ನಂಬಿಕೆಯನ್ನು ಇಟ್ಟುಕೊಂಡಿರುವದರಿಂದ, ಆ ನಂಬಿಕೆಯನ್ನು ಉಳಿಸಿಕೊಳ್ಳುವ ಸಲುವಾಗಿ, ತಾತ್ಕಾಲಿಕವಾಗಿ ಪ್ರಭುಗಳಿಗೆ ಅಹಿತವಾಗಿ ಕಾಣುವಂಥ ಮಾತನ್ನು ಆಡಬೇಕಾಗಿ ಬಂದರೂ ಆಡಲೇಬೇಕಾದುದು ನಮ್ಮ ಕರ್ತವ್ಯ. ಇಲ್ಲವಾದಲ್ಲಿ ನಮ್ಮ ಜೋಳವಾಳಿ ತೀರಿದಂತಾಗುವುದಿಲ್ಲ.'

'ನಿಜ. ತಮ್ಮಲ್ಲಿ ಆ ನಿಷ್ಠೆಯಿದೆ ಎಂಬ ನಂಬಿಕೆ ನಮಗಿದೆ.'

'ಆದುದರಿಂದಲೇ ನಾನೀಗ ಸಾಮ್ರಾಜ್ಯದ ಹಿತದೃಷ್ಟಿಯಿಂದ ಚಕ್ರವರ್ತಿಗಳಿಗೆ ಅಹಿತವಾಗುವ ಮಾತನ್ನೇ ಹೇಳಬೇಕಾಗಿ ಬಂದಿದೆ. ಅದು ನಮ್ಮ ದುರ್ದೈವ. ವಿಷ್ಣುವರ್ಧನನ ಇಂದಿನ ನಡತೆಯ ವಿಷಯದಲ್ಲಿ ಪ್ರಭುಗಳಿಗೆ ಅದು ಹುಡುಗಬುದ್ಧಿ ಎಂಬ ಭಾವನೆಯೇ ಇದ್ದಂತಿದೆ. ಹಾಗೇ ಅಪ್ಪಣೆ ಕೊಡಿಸಲಾಯಿತು.....'

'ಆದರೂ ಅವನಿಂದ ತಮಗೆ ಅಪಮಾನವಾಯಿತೆಂಬುದೂ ನಮಗೆ ತಿಳಿದಿದೆ.'

'ನಮ್ಮ ಮಾನ, ಅಪಮಾನದ ಮಾತು ದೊಡ್ಡದಲ್ಲ, ಇಂದಿನದು ವೈಯ್ಯಕ್ತಿಕವಾಗಿ ನಮಗೆ ಮಾತ್ರ ಅಪಮಾನವಾಗಿದ್ದರೆ, ಅದು ನಮ್ಮ ಪ್ರಾರಬ್ಧಫಲ ಎಂದು ಸುಮ್ಮನಾಗುತ್ತಿದ್ದೆವು. ಆದರೆ ಪ್ರಧಾನಿಯಾದಾಗ ಆದ ಅಪಮಾನ, ನಮಗಾಗುವುದಿಲ್ಲ, ನಮ್ಮ ಪೀಠಕ್ಕೆ, ಅದು ಯಾರ ಪ್ರತಿನಿಧಿಯೋ ಆ ಸ್ಥಾನಕ್ಕೆ ಅಪಮಾನವಾಗುತ್ತದೆ. ಅದನ್ನು ಸಹಿಸುವುದು ಯುಕ್ತವಲ್ಲವಷ್ಟೇ ಅಲ್ಲ, ಅದು ಮುಂದೆ ಅಪಾಯಕ್ಕೆ ಕಾರಣವಾಗುತ್ತದೆ. ಎಂತಲೇ ಅವರ ವಿಷಯದಲ್ಲಿ ನಾನಿಷ್ಟು ಯೋಚಿಸುತ್ತಿರುವುದು. ಹುಡುಗನ ಮಾತಿಗೆ ಇಷ್ಟು ದೂರ ಅರ್ಥ ಕಲ್ಪಿಸಬಹುದೇ ಎಂದು ಚಕ್ರವರ್ತಿಗಳು ಕೇಳೋಣವಾಯಿತು. ಅದಕ್ಕೆ ನಾನು ಇಷ್ಟೇ ಹೇಳಬಲ್ಲೆ-ಪ್ರಭು-ಕಾಂಡದಲ್ಲೇ ಕಹಿಯಿಲ್ಲದಿದ್ದರೆ, ಬೇವಿನ ಚಿಗುರೇಕೆ ಕಹಿಯಾಗುತ್ತಿತ್ತು?'

'ಅಂದರೆ ಹಿರಿಯರ ಹೃದಯದಲ್ಲಿ ಮೊಳೆತಿರುವ ದ್ರೋಹ ಬುದ್ಧಿಯೇ ಹುಡುಗನ ಬಾಯಲ್ಲಿ ಮಾತಾಗಿ ಬಂದಿತು ಎನ್ನುತ್ತೀರಾ?'

—ಕಾಳಿದಾಸಯ್ಯನ ಮಾತು ಕೇಳಿ ಚಿಂತೆಗೊಳಗಾಗಿ ಹೇಳಿದ ವಿಕ್ರಮಾದಿತ್ಯ

'ಆ ವಿಷಯದಲ್ಲಿ ನಮಗೆ ಸಂಶಯವೇ ಇಲ್ಲ. ಅವರಿವರ ಬಾಯಿಂದ ಹೊಯ್ಸಳರು ನಾವು ಯಾರಿಗೇನು ಕಡಿಮೆ ಎಂಬ ಮಾತಾಡುತ್ತಿದ್ದಾರೆ ಎಂದು

ಕೇಳಿದ್ದೆವು. ಈಗ ಈ ಕಿವಿಯಿಂದಲೇ, ಅವರ ಮುಖದಿಂದಲೇ ಕೇಳಿದ್ದಾಯಿತು. ಇಷ್ಟು ದಿನ ಸಂಶಯವಿದ್ದುದು ಇಂದು ಸತ್ಯವಾಗಿ ಕಂಡಿತು. ಇನ್ನು ಅವರ ವಿಷಯದಲ್ಲಿ ನಮಗೆ ಯಾವ ಭ್ರಮೆಯೂ ಉಳಿದಿಲ್ಲ. ಆದ್ದರಿಂದ ಚಕ್ರವರ್ತಿಗಳಲ್ಲಿ ನಾವು ಬಿನ್ನವಿಸುವುದು ಇಷ್ಟೇ—'

'ಏನು ಹೇಳಿ?'

'ಪ್ರಭುಗಳ ಅನುಗ್ರಹ ಸಮರ್ಥರಾದಂತೇ ನಿಗ್ರಹ ಸಮರ್ಥರೆಂದು ತೋರಿಸುವುದಕ್ಕೆ ವೇಳೆ ಸನ್ನಿಹಿತವಾಗಿದೆ ಎಂದು ತೋರುತ್ತದೆ.'

—ಕಾಳಿದಾಸಯ್ಯ ಖಚಿತವಾಗಿ ಹೇಳಿದ.

'ಅದೊಂದೇ ದಾರಿ ಎನ್ನುತ್ತೀರಾ...'

—ಪ್ರಧಾನಿಗಳ ಮಾತಿನಿಂದ ಚಿಂತಾತಾಡಿತ ಡೋಲಾಯಮಾನಚಿತ್ತನಾಗಿ ಕೇಳಿದ ವಿಕ್ರಮಾದಿತ್ಯ.

'ನಮಗೆ ಏನೋ ಭ್ರಮೆ ಎಂದು ಪ್ರಭುಗಳು ಹೇಳಿದಿರಿ, ನಮಗಲ್ಲ, ಭ್ರಮೆ ತಮಗಿದೆ ಎಂದು ಹೇಳಬೇಕು'

—ಒಣ ನಗೆ ನಕ್ಕು ಹೇಳಿದ ಕಾಳಿದಾಸಯ್ಯ—

'ಅಂತೂ ಇಷ್ಟಂತೂ ಖಚಿತವಾಯಿತು....'

'ಏನು?'

'ಈ ಗಳಿಗೆಯವರೆಗೂ ಪ್ರಭುಗಳು ಹೊಯ್ಸಳರ ನೆಂಟರಾಗಿಯೇ ಯೋಚಿಸುತ್ತಿದ್ದಾರೆ, ಚಕ್ರವರ್ತಿಗಳಾಗಿ ಅಲ್ಲ'

'ನಿಮ್ಮ ಮಾತಿನ ಅರ್ಥ—ತಿಳಿಯಲಿಲ್ಲ.'

'ಮತ್ತೇನೂ ಇಲ್ಲ-ತನಗೆ ಪ್ರಿಯರಾದವರು ಅಪ್ರಿಯವಾದುದನ್ನು ಮಾಡಿದರೂ ಅದರಲ್ಲಿ ದೋಷವನ್ನು ಕಾಣದೆ, ಗುಣವನ್ನೇ, ಪ್ರಿಯವಾದುದನ್ನೇ ಕಾಣಬೇಕು ಎನ್ನುತ್ತದೆ ನೆಂಟಸ್ತಿಕೆ. ಅದು ಅಲ್ಲಿ ಉಚಿತವೂ ಅಹುದು. ಆದರೆ ರಾಜಕಾರಣದಲ್ಲಿ ಅದು ಶೋಭಿಸುವುದಿಲ್ಲ. ಎಲ್ಲಿ ಏನು ಹೆಚ್ಚಿದಂತೆ ಕಂಡರೂ, ಅದರಿಂದ ಮುಂದೆ ಏನು ತೊಂದರಯೋ ಎಂದೇ ಯೋಚನೆ ಮಾಡಬೇಕು. ಆದುದರಂದ ಹೊಯ್ಸಳರಲ್ಲಿ, ಮತ್ತೇನಲ್ಲವಾದರೂ ಉದ್ಧಟತನ ಬೆಳೆಯುತ್ತಿದೆ ಎಂಬುದನ್ನು ಕಣ್ಣಾರೆ ಕಂಡ ಚಕ್ರವರ್ತಿಗಳು, ಈಗ ಚಕ್ರವರ್ತಿಗಳಾಗಿ ಯೋಚಿಸಬೇಕೆಂದೇ ನನ್ನ ಅಭಿಮತ.'

ಅಷ್ಟು ಹೊತ್ತು ಸುಮ್ಮನೆ ಕುಳಿತಿದ್ದು ವಿಕ್ರಮಾದಿತ್ಯ ಕಾಳಿದಾಸಯ್ಯ ಹೇಳಿದ ಮಾತನ್ನು ಮೆಲುಕು ಹಾಕಿ, ಬಳಿಕ ಹೇಳಿದ—

'ನಿಜ, ನಿಜ, ನೀವು ಹೇಳುವುದೂ ಸುಳ್ಳಲ್ಲ. ಹಾಗಾದರೆ ಈಗ ಅವರ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆನ್ನುತ್ತೀರ?'

'ನನ್ನ ಮನಸ್ಸಿನಲ್ಲಿರುವುದನ್ನು ಸೂಚಿಸಲೇ?'

'ಹೇಳಿ.'

'ಅವರು ಎಲ್ಲಿ ಯಾವುದರಲ್ಲಿ ತಾವು ಇತರರಿಗಿಂತ ಮೇಲು ಎಂದುಕೊಂಡಿದ್ದಾರೋ, ಆ ಭಾಗವನ್ನು ಕೊಂಚ ಮೊಟಕು ಮಾಡುವುದು ಲೇಸು.'

'ಅಂದರೆ—'

'ಉಳಿದಾವ ಮಾಂಡಲಿಕರಿಗೂ ಇಲ್ಲದಷ್ಟು ಸೀಮೆಯ ಪ್ರಭುತ್ವ ಈಗ ಅವರದಾಗಿದೆ. ಅದನ್ನು ಕಡಮೆ ಮಾಡಬೇಕು.'

'ಅಂದರೆ-ಈಗ ಅವರ ಅಧಿಕಾರಕ್ಕೆ ಕೊಟ್ಟಿರುವ ಭೂಮಿಯಲ್ಲಿ ಅಷ್ಟನ್ನು ಬೇರೆಯವರಿಗೆ ವಹಿಸಿಕೊಡುವುದು ಎನ್ನುತ್ತೀರಾ? ಹಾಗೆ ಮಾಡಿದರೆ, ಅದರಿಂದ ನಾವಾಗಿಯೇ ಅವರ ಅಸಮಧಾನವನ್ನು ಆಹ್ವಾನಿಸಿದಂತಾಗುವುದಿಲ್ಲವೇ?'

'ಹೇಗಾಗುತ್ತದೆ ಎಂದು ನೋಡಬೇಕು. ಅಂತೂ ಇದು ಪರೀಕ್ಷಾ ಸಮಯ. ತಮ್ಮಲ್ಲಿರುವ ಅವರ ನಿಷ್ಠೆ ನಿಜವಾದರೆ, ಅವರು ಅಸಮಧಾನ ಪಡಲು ಕಾರಣವಿಲ್ಲ. ಕೊಟ್ಟ ಜೀವರಿಗೆ ಕಿತ್ತುಕೊಳ್ಳುವ ಅಧಿಕಾರವಿಲ್ಲವೇ?'

ವಿಕ್ರಮಾದಿತ್ಯನ ಶಕ್ತಿಯನ್ನೇ ಕೆಣಕಿದಂತೆ ಕೇಳಿದ ಕಾಳಿದಾಸಯ್ಯ.

'ಅಂತೂ ನೀವೀಗ ಹೊಯ್ಸಳರು ದಂಡಾರ್ಹರು ಎನ್ನುವ ತೀರ್ಮಾನಕ್ಕೇ ಬಂದಿದ್ದೀರ...'

'ಅದಕ್ಕಿಂತಲೂ ಹೆಚ್ಚಾಗಿ ಮುಂದೆ ಅವರು ಅನುಗ್ರಹಾರ್ಹರೊ ಅಲ್ಲವೋ ಎಂಬುದರ ಪರೀಕ್ಷೆಯೂ ನಡೆಯಬೇಕಾಗಿದೆ. ತಾವೀಗ ಹಿಂಜರಿದರೆ ಅದು ಉಳಿದವರೂ ಚಕ್ರವರ್ತಿಗಳ ವಿಷಯದಲ್ಲಿ ಅವಿನಯದಿಂದ ನಡೆಯಲು ಅವಕಾಶ ಕೊಟ್ಟಂತಾಗುತ್ತದೆ. ಆದುದರಿಂದ ನಾನೂ ಈ ವಿಷಯದಲ್ಲಿ ಬಹಳ ಆಲೋಚನೆ ಮಾಡಿ ಕೊನೆಗೊಂದು ತೀರ್ಮಾನಕ್ಕೆ ಬಂದಿದೇನೆ-'

'ಏನು ಹೇಳಿ?'

'ಇದು ಹೊಯ್ಸಳರ ತಲೆತಟ್ಟಿ, ನಿಮ್ಮ ಅಧಿಕಾರ ಇಷ್ಟೇ ಎಂದು ಹೇಳುವುದಕ್ಕೆ ಸಮಯವಾದಂತೆಯೇ, ಬೇರೆಯ ಮಾಂಡಲಿಕರಗೆ ಬೆನ್ನುತಟ್ಟಿ, ಅವರಿಂದ ಹೆಚ್ಚಿನ

ವಿಶ್ವಾಸವನ್ನು ಗಳಿಸುವುದಕ್ಕೂ ಸಮಯವಾಗಿದೆ. ಏಕಕಾಲದಲ್ಲೇ ಹೊಯ್ಸಳರ ಅಧಿಕಾರವನ್ನು ಕಡಮೆಮಾಡಿ, ಅವರ ಇದಿರುಪಕ್ಷದವರೊಬ್ಬರನ್ನು ಬಲವಂತರನ್ನಾಗಿ ಮಾಡುವದರಿಂದ, ಒಂದು ವೇಳೆ, ಹೊಯ್ಸಳರು ಅಸಮಧಾನಪಟ್ಟರೂ ಹದ್ದುಮೀರದಂತಿರುವುದಕ್ಕೆ ಒಂದು ಕಾವಲು ಹಾಕಿದಂತಾಗುತ್ತದೆ. ಚಕ್ರವರ್ತಿಗಳು, ತಮಗೂ ಒಪ್ಪಿಗೆಯಾದರೆ ಹಾಗೆ ಮಾಡಬಹುದು ಎಂದು ನನ್ನ ಅಭಿಪ್ರಾಯ.'

'ಅಂದರೆ-ಪ್ರಧಾನಿಗಳು ಹೊಯ್ಸಳರನ್ನೇ ಅಲ್ಲದೆ ಮತೊಬ್ಬರನ್ನೂ ದೃಷ್ಟಿಯಲ್ಲಿಟ್ಟುಕೊಂಡು ಮಾತನಾಡುತ್ತಿರುವಂತಿದೆ'

'ನಿಜ–ಎಡ–ಬಲ,–ಮೇಲೆ–ಕೆಳಗೆ ನೋಡಿ ನಡೆಯಬೇಕೆಂಬುದೇ ನಾವು ಕಲಿತಿರುವ ಪಾಠ.'

'ಈಗ ಒಂದು ವೇಳೆ ಹೊಯ್ಸಳರ ಅಧಿಕಾರ ತಪ್ಪಿಸುವುದಾದರೆ, ಆ ಅಧಿಕಾರವನ್ನು ಯಾರಿಗೆ ಕೊಡಬೇಕೆಂದು ತಮ್ಮ ಸಲಹೆ?'

'ಮಂಡಲಿ ಸಾವಿರದ ಪ್ರಭುವಾದ ಗಂಗ ಪೆರ್ಮ್ಮಾಡಿಗೆ ಕೊಟ್ಟರಾಗಬಹುದು. ಹೊಯ್ಸಳರು ಹೇಗೆ ತಮಗೆ ನಂಟರೊ, ಗಂಗರೂ ತಮಗೆ ತಮ್ಮ ಸ್ವಂತ ತಾಯಿಯವರ ಕಡೆಯಿಂದ ನೆಂಟರು 'ಚಕ್ರವರ್ತಿಗಳು ನಮ್ಮವರಾದರೂ ನಮಗೇನೂ ಮಾಡಲಿಲ್ಲ ಸ್ವಯಂ ಗಂಗರಾಜಕುಮಾರಿಯಲ್ಲಿ ಜನಿಸಿದ ಅವರಿಗೆ, ತಮ್ಮವರಲ್ಲೇ ಅಭಿಮಾನವಿಲ್ಲವಾಗಿದೆ. ಗಂಗವಂಶಜರಾದ ನಾವು ಜೀವಂತವಾಗಿರುವಾಗಲೇ, ಬೇರೆಯವರನ್ನು ಗಂಗವಾಡಿಯ ಅಧಿಕಾರಿಗಳನ್ನಾಗಿ ಮಾಡಿ, ನಾವು ಇದ್ದೂ ಸತ್ತವರಂತಾಗುವಂತೆ ಮಾಡಿದಾರೆ, ಚಕ್ರವರ್ತಿಗಳು' ಎಂಬ ಕೊರಗು ಅವರಿಗೆ ಬಹಳವಾಗಿದೆ'

'ಹೌದು.. ಹೌದು. ಗಂಗಪೆರ್ಮ್ಮಾಡಿಗಳು ಒಂದೆರಡು ಬಾರಿ ಹಾಗೆ ನಮ್ಮ ಮುಂದೆಯೂ ಮಾತನಾಡಿದ ನೆನಪು ನಮಗಿದೆ...'

'ಆ ಮಾತು ತಮ್ಮ ಕಿವಿಗೆ ಬಿದ್ದಿದ್ದರೆ ತುಂಬಾ ಒಳಿತಾಯಿತು. ನನಗೇನೋ ಇದು ಚಕ್ರವರ್ತಿಗಳು ಅಸಂತುಷ್ಟರನ್ನು ತೃಪ್ತಿಪಡಿಸಿ, ಉದ್ಧಟರಿಗೆ ಬುದ್ಧಿ ಕಲಿಸಲು ತಕ್ಕ ವೇಳೆಯೆಂದೇ ತೋರುತ್ತದೆ. ಸಾಮ್ರಾಜ್ಯದ ಹಿತಗೃಷ್ಟಿಯಿಂದ ಎರಡೂ ಅಗತ್ಯವಾದ ಕಲಸ.'

ವಿಕ್ರಮಾದಿತ್ಯ ಕಾಳಿದಾಸಯ್ಯನ ಮಾತನ್ನು, ಎರಡು ಗಳಿಗೆ ಸುಮ್ಮನೆ ಕುಳಿತು ಆಲೋಚಿಸಿದ. ಯೋಚಿಸಿದಂತೆ ಆತನಿಗೆ ಕಾಳಿದಾಸಯ್ಯನ ಮಾತೇ ಸರಿ ಎಂದು ತೋರಿತು. ಹಾಗೇ ಹೊಯ್ಸಳರ ಬಗ್ಗೆ ಆತನಿಗಿದ್ದ ಅಭಿಮಾನ, ಕಾಳಿದಾಸಯ್ಯನ ತರ್ಕದ ಮುಂದೆ ಸೋತು—

'ಇವತ್ತು ಹಿಂದಕ್ಕೆ ತೆಗೆದುಕೊಂಡರೆ, ನಾಳೆ ಮತ್ತೆ ಬೇಕೆಂದರೆ ಕೊಡಬಹುದಲ್ಲ. ಇದು ದಂಡರೂಪವಾಗಿಯಲ್ಲವಾದರೂ, ಪರೀಕ್ಷಾರೂಪವಾಗಿ ನಡೆಯಲಿ. ಅವರಿಗೆ ನಮ್ಮಲ್ಲಿರುವ ಅಭಿಮಾನ ನಿಜವಾದರೆ, ಈ ಹೊತ್ತಿನಲ್ಲಿ ಏನು ಮಾಡುತ್ತಾರೋ ನೋಡೋಣ'

—ಎಂದು ಕಾಳಿದಾಸಯ್ಯ ಹೇಳಿದಾಗ—

'ಸರಿ, ತಮಗೆ ಹೇಗೆ ಸೂಕ್ತವೆಂದು ತೋರುತ್ತದೋ ಹಾಗೆ ಮಾಡಿ'

—ಎಂಬ ಮಾತನ್ನು ಆಡಿಸಿತು.

'ಹಾಗಾದರೆ-ಅಧಿಕಾರ ಬದಲಾವಣೆಯ ಓಲೆಯನ್ನು ಬರೆಯಿಸಿ, ಹಸ್ತಾಕ್ಷರಕ್ಕೆ ಕಳಿಸಲೇ?'

—ಆಗಲೇ ಆ ಮಾತನ್ನು ಮುಗಿಸಿಬಿಡಲು ಕೇಳಿದ ಕಾಳಿದಾಸಯ್ಯ

’ನಾವಿಂದು ಬಂದಿರುವುದು ಶುಭಕಾರ್ಯಕ್ಕಾಗಿ. ಈ ಅಪ್ರಿಯವಾದ ಕೆಲಸವೇಕಾಗಬೇಕು? ಈ ದೇವತಾಕಾರ್ಯ ಮುಗಿದ ಬಳಿಕ ಆಗಲಿ.’

—ಎಂದ ವಿಕ್ರಮಾದಿತ್ಯ.

’ಇಷ್ಟು ದೂರವಂತೂ ಗೆದ್ದುದ್ದಾಯಿತು. ಕೇಳುವ ಕಿವಿ ನಮ್ಮದಾದ ಬಳಿಕ ನುಡಿಯುವ ನಾಲಗೆಯೂ ನಮ್ಮದೇ ಆಗುವುದಿಲ್ಲವೇ?’

—ಎಂದುಕೊಂಡು ಕಾಳಿದಾಸಯ್ಯನೂ—

’ಪ್ರಭು ಚಿತ್ತ.’

—ಎಂದು ಆ ಮಾತನ್ನು ಅಲ್ಲಿಗೆ ಮುಗಿಸಿದ.

’ಹಾಗೆ ಈ ಮಾತು ಕಾರ್ಯರೂಪಕ್ಕೆ ಬರುವವರೆಗೂ ಹೊರಗೆಲ್ಲೂ ಹರಡದಿರಲಿ’

—ಎಂದು ವಿಕ್ರಮಾದಿತ್ಯ ಆ ಮಾತನ್ನು ಮುಗಿಸಿದ.

ತಾವು ದೊರಗಳು ಎನ್ನಿಸಿಕೊಂಡ ದಿನದಿಂದಲೂ ಚಾಲುಕ್ಯರ ಮಿತ್ರರಾಗಿ, ನೆಂಟರಾಗಿದ್ದು ಚಾಲುಕ್ಯ ಸಾಮ್ರಾಜ್ಯದ ಆಧಾರಸ್ತಂಭಗಳಲ್ಲಿ ಒಬ್ಬರಾಗಿದ್ದ. ಅಷ್ಟೇಕೆ, ಚಾಲುಕ್ಯ ರಾಜ್ಯದ ದಕ್ಷಿಣದ್ವಾರದ ಲಾಳಮುಂಡಿಗೆಯಂತಿದ್ದ ಹೊಯ್ಸಳ ಅರಸರನ್ನು ಪದಚ್ಯುತರನ್ನಾಗಿ ಮಾಡುವ ವಾರ್ತೆ 'ಸದ್ಯಕ್ಕೆ ಆದಷ್ಟು ರಹಸ್ಯವಾಗಿರಲಿ' ಎಂದು ವಿಕ್ರಮಾದಿತ್ಯ, ತನ್ನ ಪ್ರಧಾನಿ ಕಾಳಿದಾಸಯ್ಯನಿಗೆ ಹೇಳಿದಾಗ, ಆ ಮಾತಿನಲ್ಲಿ ದೂರಾಲೋಚನೆಯೊಂದಿಗೆ ಭೀತಿಯೂ ಇತ್ತು.

ಚಾಲುಕ್ಯರು ಗಂಗವಾಡಿ ತೊಂಭತ್ತಾರು ಸಾವಿರದ ಸೀಮೆಯ ಸಾಮ್ರಾಟರು ಎನ್ನಿಸಿಕೊಂಡಿದ್ದರು. ಹೊಯ್ಸಳರು ಆ ಗಂಗವಾಡಿಯ ಮಂಡಲಾಧೀಶ್ವರರಾಗಿ ನೇಮಿಸಲ್ಪಟ್ಟೂ ಇದ್ದರು.

ಆದರೆ ಯಥಾರ್ಥವಾಗಿ ಗಂಗವಾಡಿ ಚಾಲುಕ್ಯ ಸಾಮ್ರಾಜ್ಯದ ಭಾಗವೂ ಆಗಿರಲಿಲ್ಲ, ಹೊಯ್ಸಳರ ಮಂಡಲಾಧಿಪತ್ಯಕ್ಕೆ ಸೇರಿದ ಸೀಮೆಯೂ ಆಗಿರಲಿಲ್ಲ. ಇವರಿಬ್ಬರೂ ತಮ್ಮದು ಎಂದುಕೊಂಡ ಆ ಸೀಮೆ, ವಾಸ್ತವವಾಗಿ, ಚಾಲುಕ್ಯ ಹೊಯ್ಸಳರಿಬ್ಬರಿಗೂ ವೈರಿಗಳಾದ ಚೋಳ ಚಕ್ರವರ್ತಿಗಳ ಅಧಿಪತ್ಯಕ್ಕೆ ಒಳಪಟ್ಟಿತ್ತು. ಗಂಗವಾಡಿ, ಚೋಳ ಚಕ್ರವರ್ತಿ ರಾಜರಾಜನ ಕಾಲದಲ್ಲೇ, ಗಂಗವಾಡಿಗೆ ಆ ಹೆಸರು ಕೊಟ್ಟ, ಗಂಗವಂಶದ ದೊರೆಗಳ ಕೈತಪ್ಪಿ, ಗಂಗೈಕೊಂಡ ಚೋಳ ಮಂಡಲವಾಗಿತ್ತು. ಗಂಗ ಚಕ್ರವರ್ತಿಗಳ ರಾಜಧಾನಿಯಾಗಿದ್ದ ತಲವನವುರ, ಚೋಳರ ವ್ಯಾಘ್ರಲಾಂಛನವನ್ನು ಹೊತ್ತದ್ದೇ ಅಲ್ಲದೆ, ಆ ದಾಸ್ಯಲಾಂಛನವಾಗಿ ತನ್ನ ಹೆಸರನ್ನೂ

ಕಳೆದುಕೊಂಡು ರಾಜರಾಜಪುರವಾಗಿತ್ತು. ಗಂಗ ಚಕ್ರಾಧಿಪತ್ಯದ ಮತ್ತೊಂದು ಭಾಗವಾಗಿದ್ದ ಕೊವಳಾಲಪುರದ ಪ್ರಾಂತ 'ನಿಗರಿಲಿ ಚೋಳಮಂಡಲ'ವಾಗಿತ್ತು.

ಹೀಗಾಗಿ ಗಂಗವಾಡಿ ತೊಂಭತ್ತಾರು ಸಾವಿರದ ಸೀಮೆಯ ಅಧಿಪತಿಗಳು ಎಂಬ ಮಾತು ಚಾಲುಕ್ಯ, ಹೊಯ್ಸಳರೀರ್ವರ ಪಾಲಿಗೂ ವಾಸ್ತವಾಧಿಕಾರದ ಕುರುಹಾಗದೆ, ಕೇವಲ ಅಲಂಕಾರವೇ ಆಗಿತ್ತು. ಹಾಗೂ ಗಂಗವಾಡಿಯ ಸೀಮೆಯ ಅಷ್ಟಿಷ್ಟು ಭಾಗವಾದರೂ ಚಾಲುಕ್ಯರದಾಗಿ ಉಳಿದಿದ್ದರೆ, ಅದಕ್ಕೆ ಕಾರಣ ಹೊಯ್ಸಳರ ಪರಾಕ್ರಮ.

ಆ ಅಲ್ಪ-ಸ್ವಲ್ಪ ಭೂಮಿಯನ್ನೂ ನೊಣೆದು ನುಂಗಬೇಕೆಂದು ಅಹರ್ನಿಶಿಯೂ ಪ್ರಯತ್ನಿಸುತ್ತಿದ್ದ ಚೋಳ ಸಾಮಂತರಾದ ಚಂಗಾಳ್ವ, ಕೊಂಗಾಳ್ವ ಅರಸುಗಳ ಬಲವನ್ನು ದಿನದಿನವೂ ಮಣಿಸಿ, ಹೊಯ್ಸಳರು ಚಾಲುಕ್ಯರ ಪಾಲಿಗೆ ಗಂಗವಾಡಿಯ ಆಧಿಪತ್ಯದ ಹೆಸರನ್ನಾದರೂ ಉಳಿಸಿದ್ದರು. ವಸ್ತುಸ್ಥಿತಿ ಹೀಗಿದ್ದಾಗ, ವಿಕ್ರಮಾದಿತ್ಯ ಗಂಗವಾಡಿ ತೊಂಭತ್ತಾರು ಸಾವಿರದ ಸೀಮೆಯ ಅಧಿಕಾರವನ್ನು ಹೊಯ್ಸಳರಿಂದ ಕಿತ್ತುಕೊಂಡರೆ, ಅದರಿಂದ ಹೊಯ್ಸಳರಿಗಾಗುತ್ತಿದ್ದ ನಷ್ಟ ಕೇವಲ ಹೆಸರಿನದಷ್ಟೇ ಆಗುತ್ತಿದ್ದಿತಲ್ಲದೆ, ಅದಕ್ಕಿಂತಲೂ ಮಿಗಿಲಾದುದೇನೂ ಆಗುತ್ತಿರಲಿಲ್ಲ.

ಆದರೆ ಅಂಥ ಬದಲಾವಣೆಯಿಂದ ಚಾಲುಕ್ಯರಿಗೇ ಹೆಚ್ಚು ನಷ್ಟ, ಹೆಚ್ಚು ಅಪಾಯ ಸಂಭವಿಸಬಹುದಾದ ಅವಕಾಶವಿತ್ತು.

ತಮ್ಮ ಅಂತಸ್ತಿನಲ್ಲಾದ ಬದಲಾವಣೆಯಿಂದ ಹೊಯ್ಸಳರು ಮುನಿದು, ಚಾಲುಕ್ಯರ ಬಗ್ಗೆ ಅಸಂತೃಪ್ತರಾಗಿ ಚೋಳರಿಗೆ ಅನುಕೂಲವಾದರೆ, ಆಗ ನಾಮಮಾತ್ರವಾಗಿ ಚಾಲುಕ್ಯರದಾಗಿದ್ದ ಗಂಗವಾಡಿಯಿರಲಿ, ಚಾಲುಕ್ಯರದೇ ಆಗಿದ್ದ ಬನವಾಸಿ ಪ್ರಾಂತವೂ ಚೋಳರ ದಾಳಿಗೆ ಪಾಲಾಗಬಹುದಾದ ಭೀತಿಯಿತ್ತು.

ಈ ಪರಿವರ್ತನೆಯಿಂದ ಹೊಯ್ಸಳರಿಗೆ ನಷ್ಟವಿರಲಿಲ್ಲ. ಚಾಲುಕ್ಯರಿಗೆ ಅಪಾರ ನಷ್ಟವಾಗಬಹುದಿತ್ತು.

ಆದರೂ ಹೊಯ್ಸಳರ ಬುದ್ಧಿ, ದಿನದಿನಕ್ಕೆ ಬೆಳೆಯುತ್ತಿರುವ ಬಲವನ್ನು ನಂಬಿ ಉದ್ಧಟತನವಾಗಿ ಪರಿಣಮಿಸಬಾರದು ಎಂಬ ಎಚ್ಚರಿಕೆ ಕೊಡುವ ಕಾರಣಕ್ಕಾಗಿ ಇತರ ಸಾಮನ್ತರಿಗೂ ಇದು ಒಂದು ಎಚ್ಚರಿಕೆಯಾಗಲಿ ಎಂಬ ಉದ್ದೇಶಕ್ಕಾಗಿ ವಿಕ್ರಮಾದಿತ್ಯ ಪ್ರಧಾನಾಮಾತ್ಯ ಕಾಳಿದಾಸಯ್ಯನ ಸಲಹೆಗೆ ತನ್ನ ಒಪ್ಪಿಗೆಯನ್ನಿತ್ತಿದ್ದ.

ಕೇವಲ ಈ ಉದ್ದೇಶದಿಂದಲೇ ಆದ ಕೆಲಸ ಮತ್ತಾವ ಘೋರ ಪರಿಣಾಮಕ್ಕೂ ದಾರಿಯಾಗದಂತೆ ನೆರವೇರಿಸಬೇಕು. 'ಆ ಕೆಲಸವನ್ನು ಹಾಗೆ ಹೇಗೆ ಮಾಡುವುದು?' ಎಂಬ ದಾರಿ ಕಾಣುವವರೆಗೂ, ತಮ್ಮ ನಿರ್ಧಾರ ರಹಸ್ಯವಾಗಿರುವುದು ಲೇಸು ಎಂಬ ದೂರಾಲೋಚನೆಯಿಂದ ವಿಕ್ರಮಾದಿತ್ಯ 'ಈ ವಿಷಯ ರಹಸ್ಯವಾಗಿರಲಿ' ಎಂದು ಪ್ರಧಾನಿ ಕಾಳಿದಾಸಯ್ಯನನ್ನು ಎಚ್ಚರಿಸಿದ್ದ.

ದೊರೆಯಂತೆಯೇ ರಾಜನೀತಿನಿಪುಣನಾದ ಕಾಳಿದಾಸಯ್ಯನಿಗೂ ಇದೆಲ್ಲಾ ಯೋಚನೆಗಳು ಇಲ್ಲದಿರಲಿಲ್ಲ.

ಆದರೆ- 'ಓಲಗದಲ್ಲಿ ಸಾಮಂತರ ಹಸುಳೆ ತನಗೆ ಮಾಡಿದ ಅಪಮಾನವನ್ನು ತೀರಿಸಿಕೊಳ್ಳಬಲ್ಲ ಬಲ ನನಗಿದೆ. ಇಗೋ, ಹೀಗೆ ತೀರಿಸಿಕೊಂಡಿದ್ದೇನೆ- ನೋಡಿ' ಎಂದು ಹೇಳಿಕೊಳ್ಳದೆ ಹೋದಮೇಲೆ, ತಾನು ಪ್ರಧಾನಿಯಾಗಿದ್ದು ಏನು ಸಾರ್ಥಕ? ಹಾಗೆ ತೋರಿಸಿಕೊಳ್ಳದೆ ಹೋದರೆ, ಉಳಿದ ಸಾಮಂತರು ಇದುರಿಗೆ ತಲೆಬಾಗಿದರೂ ಬೆನ್ನಹಿಂದೆ 'ಈ ಪ್ರಧಾನಿಯದೆಲ್ಲಾ ಬರೀ ತೋರಿಕೆಯ ಬಡಿವಾರ' ಎಂದು ಆಡಿಕೊಂಡು ನಗುವುದಿಲ್ಲವೇ?'

ಈ ಚಪಲ, ಈ ದೌರ್ಬಲ್ಯ ಎಲ್ಲ ವಿವೇಕ, ಅನುಭವಜನ್ಯವಾದ ವಿವೇಚನೆಗಳನ್ನೂ ಗೆದ್ದು, ಕಾಳಿದಾಸಯ್ಯ ತಾನೆ, ಚಕ್ರವರ್ತಿ 'ರಹಸ್ಯವಾಗಿರಲಿ' ಎಂದ ವಿಷಯವನ್ನು ಬೇರೆಯವರ ಮುಂದೆ ಬಾಯಿಬಿಟ್ಟು ಆಡಲು ಕಾರಣವಾಯಿತು. ಒಂದು ವೇಳೆ ಆತ ತಾನಾಗಿಯೇ ಬಾಯಿ ಬಿಡದಿದ್ದರೂ, ಆತನಿಂದ ಸುದ್ದಿಯನ್ನು ಹೊರಡಿಸಲು ಕಾದಿದ್ದರು—ಹಗಲು ಕಾಳಿದಾಸಯ್ಯ ಚಕ್ರವರ್ತಿಗಳನ್ನು ಕಾಣಲುಹೋದ ಗಳಿಗೆಯಿಂದಲೂ ಏನು ಸುದ್ದಿಯನ್ನು ತರುತ್ತಾರೋ ಎಂದು, ಆತ ಹಿಂದಿರುಗಿ ಬರುವುದನ್ನೇ ಕಾದಿದ್ದ ಉಳಿದ ಸಾಮಂತರು, ಕಾಳಿದಾಸಯ್ಯ ಚಕ್ರವರ್ತಿಗಳನ್ನು ಕಾಣಲು ಹೋದರೆಂದ ಗಳಿಗೆಯಿಂದ 'ಬಂದರೇ, ಬಂದರೇ' ಎಂದು ವಿಚಾರಿಸಲು, ಪ್ರಧಾನಿಗಳ ಬಿಡಾರಕ್ಕೆ ಹತ್ತುಬಾರಿ ಆಳುಗಳನ್ನು ಕಳುಹಿಸಿ ಕೊನೆಗೆ ತನ್ನ ಕುತೂಹಲವನ್ನು ಅಡಗಿಸಿಕೊಳ್ಳಲಾಗದೆ, ತಾನೇ ಪ್ರಧಾನಿಗಳ ಬಿಡಾರಕ್ಕೆ ಬಂದು, ಕಾಳಿದಾಸಯ್ಯ ಹಿಂದಿರುಗುವುದನ್ನೇ ಕಾಯುತ್ತಾ ಕುಳಿತಿದ್ದ ಗಂಗ ಪೆರ್ಮಾಡಿ.

ಕಾಳಿದಾಸಯ್ಯನ ಬರುವಿಕೆಯನ್ನು ಕಾಯುವುದರಲ್ಲಿ ಆತನೊಂದಿಗೆ ಪೊಟ್ಟಪೊಂಬುರ್ಚಪುರದ ಜಗದೇವ, ಸರ್ವದೇವನ ಸೋದರ ಚಾವುಂಡರಾಯನೂ ಬೆರೆಯುತಿದ್ದರು.

ಮಧ್ಯಾಹ್ನದ ಬಿಸಿಲಿನಲ್ಲೂ ತನ್ನ ಬರುವನ್ನೇ ನಿರೀಕ್ಷಿಸುತ್ತಾ ಕುಳಿತಿದ್ದ ಗುಂಪನ್ನು ಕಂಡು ಕಾಳಿದಾಸಯ್ಯನಿಗೆ ಆಶ್ಚರ್ಯವಾಯಿತು.

'ಏನು ಬಂದಿರಿ?'

—ಎಂದು ಗಂಗ ಪೆರ್ಮಾಡಿಯನ್ನು, ಜಗದೇವರಾಯನನ್ನು ಒಟ್ಟಾಗಿಯೇ ಉದ್ದೇಶಿಸಿ ಕೇಳಿದ.

'ಚಕ್ರವರ್ತಿಗಳ ದೃಷ್ಟಿಯಲ್ಲಿ ನಂಟಸ್ತಿಕೆ ಗೆದ್ದಿತೋ, ನಿಷ್ಠೆ ಗೆದ್ದಿತೋ ಎಂದು ತಿಳಿಯಲು ಆತುರವಾಗಿ ಬಂದಿದಾರೆ. ಏನಾಯಿತು?'

—ಎಂದು ಅವರಿಬ್ಬರ ಮನದಲ್ಲೂ ಮಿಡಿಯುತ್ತಿದ್ದ ಪ್ರಶ್ನೆಯನ್ನು ತಾನೇ ಬಾಯಿಬಿಟ್ಟು ಕೇಳಿದ ಚಾವುಂಡರಾಯ.

'ಹೂ. ಅಂತೂ ನಾವಲ್ಲಿ ಚಕ್ರವರ್ತಿಗಳೊಂದಿಗಿದ್ದಾಗ, ನೀವಿಲ್ಲಿ ನಮ್ಮ ಮರ್ಯಾದೆಯ ಬೆಲೆ ಕಟ್ಟುತ್ತಾ ಕುಳಿತಿದ್ದಿರಿ. ಅಲ್ಲವೇ?'

—ಕಿರುನಗೆ ನಗುತ್ತಾ ಕವಿಯ ರತ್ನಕುಂಡಲಗಳು ಧಳಧಳಿಸುವಂತೆ ತಲೆದೂಗುತ್ತಾ ಕೇಳಿದ ಕಾಳಿದಾಸಯ್ಯ, ಅಲ್ಲಿದ್ದ ಮೀಸಲು ಆಸನದಲ್ಲಿ ಮೈಯೊರಗಿಸಿ, ಬೆವರಿದ ಮೈಯನ್ನು ಉತ್ತರೀಯದಿಂದ ಒರೆಸಿಕೊಳ್ಳುತ್ತಾ, ಸನಿಹದಲ್ಲಿದ್ದ ಆಳಿಗೆ ಗಾಳಿ ಹಾಕುವಂತೆ ಸೂಚಿಸಿ.

ನೀರಿನಲ್ಲಿ ತೋಯಿಸಿದ ಲಾವಂಚದ ಬೇರುಗಳಿಂದ ನಿರ್ಮಿತವಾದ ಬೀಸಣಿಗೆಯ ತಣ್ಣನೆಯ ಪರಿಮಳಗಾಳಿ, ಮೈಯ ಧಗೆಯನ್ನು ನಿವಾರಿಸಿ, ಚಕ್ರವರ್ತಿಯ ಬಳಿ ಮಾತಿನಲ್ಲಾದ ಗೆಲುವಿನಿಂದ ಪ್ರಸನ್ನವಾದ ಕಾಳಿದಾಸಯ್ಯನ ಚಿತ್ತವನ್ನು ಮತ್ತಷ್ಟು ಪ್ರಸನ್ನ ಗೊಳಿಸಿತು. ಆ ವೇಳೆಗೆ ಮತ್ತೊಬ್ಬ ದಾಸಿ ತಂದಿತ್ತ ತಣ್ಣನೆಯ ಪಾನಕವನ್ನು ಗುಟುಕರಿಸಿ, ಆಸನದ ಮೇಲೆ, ಮೈಯನ್ನು ಚಾಚಿ, ಕೇಳಿದ ಕಾಳಿದಾಸಯ್ಯ—

'ಅಂತೂ-ನಮ್ಮ ಬೆಲೆ ಎಷ್ಟೆಂದು ತೀರ್ಮಾನವಾಯಿತು?'

'ತಮ್ಮ ಬೆಲೆ ಕಟ್ಟುವ ಯೋಗ್ಯತೆ ನಮಗುಂಟೆ? ನಮ್ಮ ಭವಿಷ್ಯ ಹೇಗೆಂದೇ ತಿಳಿಯದ ಗಾವಿಲರು ನಾವು.'

—ತನ್ನನ್ನು ಪ್ರಧಾನಾಮಾತ್ಯರು ಮಾತನಾಡಿಸಿದುದೇ ಮಹಾ ಭಾಗ್ಯವೆಂಬ ಧ್ವನಿಯಲ್ಲಿ ಹೇಳಿದ ಗಂಗ ಪೆರ್ಮಾಡಿ.

'ತೂಗುತ್ತಲೂ ಇರಲಿಲ್ಲ, ಅಳೆಯುತ್ತಲೂ ಇರಲಿಲ್ಲ. ಬರಿ ಕಣ್ಣಿಗೇ ವಜ್ರವೆಂದು ಕಾಣುವುದನ್ನು ಪರೀಕ್ಷಿಸಿ ನೋಡಬೇಕೆಂಬ ವಿಪರೀತ ಬುದ್ಧಿ ನಮಗಿಲ್ಲ. ಹೊಯ್ಸಳರ ಗರ್ವ ಮರ್ದನಕ್ಕೆ ಸಿದ್ಧತೆಗಳಾಯಿತು ತಾನೇ?'

—ಚಕ್ರವರ್ತಿಯ ಬಳಿ ಆ ಮಾತುಗಳೇ ನಡೆದಿರಬೇಕೆಂಬ ನಂಬಿಕೆಯಿಂದ ಕೇಳಿದ ಜಗದೇವರಾಯ.

'ಆದ ಹಾಗೇ ಎನ್ನಬಹುದು'

ಕಾಳಿದಾಸಯ್ಯನ ಸೂಕ್ಷ್ಮವಾದ ಆ ಮಾತು, ಅಲ್ಲಿ ನೆರೆದವರ ಕುತೂಹಲವನ್ನು ಮತ್ತಷ್ಟು ರೇಗಿಸಿತು, 'ಅಂದರೆ—' ಎಂದು ಮೂವರೂ ಒಟ್ಟಾಗಿಯೇ, ವಿವರವನ್ನು ಅರಿಯಲು ಆತುರರಾಗಿ ಪ್ರಶ್ನಿಸಿದರು.

'ಮತ್ತೇನು-ಕಾಡಿನಲ್ಲಿ ಬೇಟೆಯಾಡಿಕೊಂಡು ಬದುಕುತ್ತಿದ್ದ ಹೊಯ್ಸಳರು, ಮತ್ತೆ ತಮ್ಮ ಪೂರ್ವಸ್ಥಿತಿಗೆ ಹಿಂದಿರುಗಲು ಏನು ಬೇಕೋ ಆದನ್ನು ಮಾಡಿದ್ದಾಯಿತು. ಓಲಗದಲ್ಲಿ ನಮಗಾದ ಅಪಮಾನ ಗಂಗ ಪೆರ್ಮಾಡಿಗಳ ಭಾಗ್ಯಕ್ಕೆ ಬಾಗಿಲು ತೆರೆಯಿತು'

'ಹಾಗೆಂದರೆ?'

—ಗಂಗ ವೆರ್ಮಾಡಿ ಕೇಳಿದ

'ಇದು ರಹಸ್ಯ ವಿಷಯ ಪೆರ್ಮಾಡಿಗಳೇ. ಯಾರಿಗೂ ಇದನ್ನು ಹೇಳಬಾರದೆಂದೇ ಚಕ್ರವರ್ತಿಗಳು ನಮಗೆ ಕಟ್ಟಪ್ಪಣೆ ಮಾಡಿದಾರೆ.'

’ತಾವು ಚಕ್ರವರ್ತಿಗಳ ಅಪ್ಪಣೆಯನ್ನು ಮೀರಬೇಕೆಂಬುದು ನನ್ನ ಇಚ್ಛೆಯಲ್ಲ, ಆದರೂ’

’ಆದರೂ ನಿಮಗೆ ಬರಲಿರುವ ಭಾಗ್ಯ ಏನೆಂದು ತಿಳಿದುಕೊಳ್ಳಬೇಕೆಂಬ ಚಪಲ-ಅಲ್ಲವೇ? ಚಕ್ರವರ್ತಿಗಳ ರಹಸ್ಯವನ್ನು ಬಯಲು ಮಾಡುವ ಬಯಕೆ ನಮಗೂ ಇಲ್ಲ, ಆದರೆ ಮುಂದೆ ಆಗಲಿರುವುದಕ್ಕೆ ನೀವು ಇಂದಿನಿಂದಲೇ ಸಿದ್ಧರಾಗಿರಬೇಕೆಂಬ ಉದ್ದೇಶದಿಂದಲೇ ಸಾವೂ ಹೇಳುತ್ತಿದೇವೆ. ಇಂದು ಮಾತಾಗಿರುವುದು ಕಾರ್ಯರೂಪಕ್ಕೆ ಬರುವವರೆಗೂ, ಈ ಮಾತು ನಿಮ್ಮಲ್ಲಿ ರಹಸ್ಯವಾಗಿ ಉಳಿದಿರಲಿ...’

—ಕಾಳಿದಾಸಯ್ಯ ಕೊಂಚ ಕಾವೇರುತ್ತಾ ಹೇಳಿದ.

’ತಮ್ಮ ರಹಸ್ಯ ನಮ್ಮಿಂದ ಎಂದಿಗೂ ಬಯಲಾಗದು.’

—ಕೇಳುತ್ತಾ ಕುಳಿತವರೆಲ್ಲರ ಪರವಾಗಿ ಚಾವುಂಡರಾಯ ಭರವಸೆ ನೀಡಿದ.

’ಗಂಗ ಪೆರ್ಮಾಡಿಗಳೇ-ನಿಮ್ಮ ಗಂಗವಾಡಿಯ ಅಧಿಪತ್ಯ ಮತ್ತೆ ನಿಮ್ಮದೇ ಆಗಲಿದೆ. ಆದರೆ ಇದು ಅಧಿಕಾರದಾನವಷ್ಟೇ ಅಲ್ಲ. ಹೊಯ್ಸಳರೊಂದಿಗೆ ಬರಲಿರುವ ಸಮರದ ಆಹ್ವಾನವೆಂಬ ಎಚ್ಚರಿಕೆಯೂ ನಿಮಗಿರಬೇಕು.’

ಒಂದೇ ಮಾತಿನಲ್ಲಿ ಗಂಗ ಪೆರ್ಮಾಡಿಯಲ್ಲಿ ಸಂತೋಷ-ಭಯಗಳೆರಡನ್ನೂ ಮೂಡಿಸುತ್ತಾ ಹೇಳಿದ ಕಾಳಿದಾಸಯ್ಯ

’ಅಂದರೆ-ಗಂಗ ಪೆರ್ಮಾಡಿಗಳಿಗೆ ಗಂಗವಾಡಿಯ ಅಧಿಪತ್ಯವನ್ನು ವಹಿಸಿಕೊಟ್ಟರೆ, ಹೊಯ್ಸಳರು ಚಕ್ರವರ್ತಿಗಳ ಮೇಲೇ ತಿರುಗಿ ಬೀಳಬಹುದೆಂದು ನಿಮ್ಮ ಚಿಂತೆಯೇ?’

—ಚಾವುಂಡರಾಯ ಪ್ರಶ್ನೆ ಮಾಡಿದ.

’ಹಾಗಾಗದಿರಬಹುದು. ಹೊಯ್ಸಳರ ದುರಹಂಕಾರ ಅವರನ್ನು ಅಷ್ಟು ದೂರ ನಡೆಸದಿರಬಹುದು, ಆದರೂ ನಮ್ಮ ಎಚ್ಚರಿಕೆಯಲ್ಲಿ ನಾವಿರಬೇಕು.’

’ಒಂದು ವೇಳೆ-ಹೊಯ್ಸಳರು ಯುದ್ಧ ಪ್ರಯತ್ನವನ್ನೇ ಮಾಡಿದರೆ ಅದರಿಂದ ಅನುಕೂಲವೇ ಆದೀತು’

—ಅದುವರೆಗೂ ಸುಮ್ಮನೆ ಕುಳಿತಿದ್ದ ಸಾಂತರ ಜಗದೇವರಾಯ ಹೇಳಿದ.

’ಹೇಗೆ?’

—ಕಾಳಿದಾಸಯ್ಯ ಕೇಳಿದ.

’ಅವರ ದುರಹಂಕಾರದಿಂದ ಗಂಗ ಪೆರ್ಮಾಡಿಗಳಿಗೆ ಗಂಗವಾಡಿ ಲಭ್ಯವಾದಂತೆ, ಅವರು ಯುದ್ಧವನ್ನೇ ಮಾಡಿದರೆ ಹೊಯ್ಸಳ ನೃಪಕಾಮ, ವಿನಯಾದಿತ್ಯ ನಮ್ಮವರಿಂದ ಹಿಂದೆ ಕಿತ್ತುಕೊಂಡ ನಮ್ಮ ಮಲೆನಾಡಿನ ಸೀಮೆಗಳನ್ನು ನಾವು ವಶಪಡಿಸಿ ಕೊಳ್ಳಬಹುದಲ್ಲ- ಈ ನೆಪದಲ್ಲಿ. ನಮ್ಮಂತೆಯೇ ಹೊಯ್ಸಳರೂ ಚಕ್ರವರ್ತಿಗಳ ಸಾಮಂತರು ಎಂಬ ಅಡ್ಡಿಯೊಂದಿಲ್ಲವಾಗಿದ್ದಲ್ಲಿ, ಈ ವೇಳೆಗೇ ಆ ಕೆಲಸ ಮಾಡಿ ಮುಗಿಸುತ್ತಿದ್ದೆವು. ಈಗ ಅವರೇ ಯುದ್ಧ ಪ್ರಯತ್ನ ಮಾಡಿದರೆ-ತಪ್ಪನ್ನು ಅವರ ಮೇಲೇ ಹಾಕಿ, ನಮ್ಮ ಬಯಕೆ ತೀರಿಸಿಕೊಳ್ಳಬಹುದು. ಆದ್ದರಿಂದ ಪ್ರಧಾನಿಗಳಿಗೆ ಆ ಚಿಂತೆ ಬೇಡ’

—ಜಗದೇವರಾಯ ’ಇಂದೇ ಹೊಯ್ಸಳರೊಂದಿಗೆ ಸಮರ ಬಂದರೂ ಸರಿ’ ಎಂಬಷ್ಟು ಉತ್ಸಾಹದಿಂದ ಹೇಳಿದ.

ಆತನ ಮಾತುಗಳಲ್ಲಿ ಉತ್ಸಾಹವಿದ್ದಷ್ಟೇ ನಂಜಿತ್ತು. ಆ ಮಾತುಗಳನ್ನು ಕೇಳಿ ಕಾಳಿದಾಸಯ್ಯನಿಗೆ ಸಂತೋಷವಾದರೂ ಅದರೊಂದಿಗೆ ಚಿಂತೆಯೂ ಮೂಡದಿರಲಿಲ್ಲ.

ಜಗದೇವರಾಯನ ಮಾತು ಪ್ರಧಾನಿ ಕಾಳಿದಾಸಯ್ಯನ ಕಣ್ಣೆದುರಿಗೆ ಸಾಮ್ರಾಜ್ಯದ ಅಂತರಂಗದಲ್ಲೇ ಬೇಯುತ್ತಿರುವ ಕಿಚ್ಚಿನ ಘೋರ ಸ್ವರೂಪದ ಪರಿಚಯ ಮಾಡಿಕೊಟ್ಟಿತು.

ಈ ಮಹಾ ಚಾಲುಕ್ಯ ಚಕ್ರಾಧಿಪತ್ಯವನ್ನು ಒಂದು ತೋಳಾಗಿ ಕಾಪಾಡಬೇಕಾದ ಈ ಹಲ ಸಾಮಂತರಲ್ಲಿ ಎಷ್ಟು ಬಗೆಯ ದ್ವೇಷ, ಅಸೂಯೆ ಸ್ಪರ್ಧೆಗಳು ಉರಿಯುತ್ತಿವೆ. ಒಬ್ಬರನ್ನೊಬ್ಬರು ತುಳಿಯಲು ಎಷ್ಟು ಆತುರವಾಗಿದಾರೆ. ಈ ಪರಸ್ಪರ ಅಸೂಯೆ, ಹೀಗೆ ಪ್ರಧಾನಿಗಳ ಬಳಿ ದೂರಾಗಿ ಕಾಣಿಸಿಕೊಳ್ಳುವವರೆಗೂ, ಚಕ್ರವರ್ತಿಗಳ ಅಂಕೆಗೆ ಒಳಪಟ್ಟಿರುವವರೆಗೂ ಚಿಂತೆಯಿಲ್ಲ. ಎಂದಾದರೂ, ಎಂದಾದರೂ ಒಮ್ಮೆ ಇದು ಚಕ್ರವರ್ತಿ, ಪ್ರಧಾನಿಗಳ ಆಂಕೆಯನ್ನೂ ಮೀರಿ ಉಲ್ಬಣಿಸಿದರೆ, ಆಗ ಈ ದ್ವೇಷದ ದಾವಾಗ್ನಿಯಲ್ಲಿ, ಸಾಮಂತರು ಉಳಿಯುವುದಿರಲಿ, ಸಾಮ್ರಾಜ್ಯವೇ ಉಳಿದೀತೇ? ತನ್ನೊಳಗಿನ ಬಿದಿರನ್ನೇ ಮಸೆದು ಉರಿಯಾದ ಬಿದಿರುವೆಳೆ, ತಾನು ದಹಿಸುವುದೇ ಅಲ್ಲದೆ, ಕಾಡನ್ನೇ ನುಂಗುವ ಕಾಳ್ಗಿಚ್ಚಾಗುವಂತೆ, ಸಾಮಂತರ ಅಸೂಯಾಗ್ನಿ ಸಾಮ್ರಾಜ್ಯದ ಪಾಲಿಗೇ ಚಿತಾಗ್ನಿಯಾಗದೆ?

ಈ ಭಾವನೆ ಮನಸಿನಲ್ಲಿ ಮೂಡಿದಾಗ ಕಾಳಿದಾಸಯ್ಯನಿಗೆ, ತಾನು ಯಾವುದೋ ಕಾರಣಕ್ಕಾಗಿ, ಒಬ್ಬ ಸಾಮಂತನನ್ನು ಕೆಳಗಿಳಿಸಿ, ಮತ್ತೊಬ್ಬನನ್ನು ಮೇಲೆತ್ತುವ ಪ್ರಯತ್ನ ಮಾಡಿದುದೂ ತಪ್ಪಾಯಿತೋ ಏನೋ, ಇಷ್ಟು ದಿನಗಳವರೆಗೂ ಸುಪ್ತವಾಗಿದ್ದ ಈ ಬೆಂಕಿ ಪ್ರಕಟವಾಗಿ ದಳ್ಳುರಿಯಾಗಲು ತಾನೇ ಅವಕಾಶ ಒದಗಿಸಿ ಕೊಟ್ಟಂತಾಯಿತೇನೋ ಎನಿಸಿ, ಒಂದೇ ಬಂದು ಗಳಿಗೆಯ ಮುಂಚೆ ಆತನ ಮನದಲ್ಲಿ

ಮೂಡಿದ್ದ ಗೆಲುವಿನ ಭಾವನಾ ತರಂಗಗಳು ಹ.ಟ್ಟಿದಲ್ಲೇ ಅಡಗಿ ಹೋಗಿ, ಹರ್ಷವಿದ್ದಲ್ಲಿ ಚಿಂತೆ ಮೂಡಿತು. ಆ ಚಿಂತೆಯಲ್ಲೇ ಒಂದು ಗಳಿಗೆ ಸುಮ್ಮನೆ ಕುಳಿತಿದ್ದು ಬಳಿಕ ಜಗದೇವರಾಯ, ಗಂಗ ಪೆರ್ಮಾಡಿ ಇಬ್ಬರನ್ನೂ ಉದ್ದೇಶಿಸಿ ಹೇಳಿದ—

’ಯುದ್ಧ ಬರುತ್ತದೆಯೋ ಬಿಡುತ್ತದೆಯೋ, ಅದು, ಬಂದಾಗ ಆಲೋಚಿಸಬೇಕಾದ ಮಾತು. ಯುದ್ಧ ಸಂದರ್ಭ ಒದಗದ ರೀತಿಯಲ್ಲೇ ಈ ಪ್ರಕರಣವನ್ನು ಮುಗಿಸಬೇಕೆಂಬುದು ಪ್ರಭುಗಳ ಇಚ್ಛೆ. ಅದಕ್ಕಾಗಿಯೇ ಅವರು ಈ ವಿಷಯ ಸದ್ಯಕ್ಕೆ ರಹಸ್ಯವಾಗಿರಲಿ ಎಂದದ್ದು. ನೀವೂ ಅಷ್ಟು ಮಾಡಿ. ಹಾಗೇ-ನೀವು ಈಗಲೇ ನಿಮ್ಮ ಸೇನೆಗಳಿಗೆ ಕತ್ತಿ ಮಸೆದುಕೊಳ್ಳಿ ಎಂದೂ ಹೇಳಬೇಕಾದದ್ದಿಲ್ಲ, ಎಚ್ಚರವಾಗಿರಿ ಎಂದು ಹೇಳಿ. ಅಷ್ಟೇ-ನಮಗಿನ್ನು ಅನುಮತಿ ಕೊಡಿ-ಮಾಧ್ಯಾಹ್ನಿಕದ ವೇಳೆಯಾಯಿತು.’

ಆ ಮಾತು ಹೇಳುತ್ತಲೇ ಕುಳಿತಿದ್ದ ಕಾಳಿದಾಸಯ್ಯ ಆಸನದಿಂದ ಎದ್ದುನಿಂತ. ಅದರಿಂದ, ಅಲ್ಲಿಗೆ ಮಾತುಕಥೆ ಮುಕ್ತಾಯವಾಯಿತು ಎಂಬುದನ್ನು ಅರಿತುಕೊಂಡ ಗಂಗ ಪೆರ್ಮಾಡಿ, ಜಗದೇವರಾಯ-ಇಬ್ಬರೂ, ಕಾಳಿದಾಸಯ್ಯನಿಗೆ ವಂದಿಸಿ—

’ನಮ್ಮಿಂದ ತಮಗೆ ತೊಂದರೆಯಾಯಿತು. ಮನ್ನಿಸಬೇಕು’

—ಎಂದು ಔಪಚಾರಿಕವಾಗಿ ಹೇಳಿ ಹೊರಟರು

ಯಾವುದೋ ಆಲೋಚನೆಯಲ್ಲಿ ಕಾಳಿದಾಸಯ್ಯ ತನ್ನ ಮಾತನ್ನು ತಟಕ್ಕನೆ ಮುಗಿಸಿದುದು ಗಂಗಪೆರ್ಮಾಡಿಗೆ, ಜಗದೇವರಾಯನಿಗೆ ಅರ್ಥವಾಯಿತೋ ಬಿಟ್ಟಿತೋ ಆದರೆ ಕಾಳಿದಾಸಯ್ಯನ ಅತ್ಯಂತ ನಿಕಟ ಪರಿಚಯವಿದ್ದ ಚಾವುಂಡರಾಯನಿಗಂತೂ ಬಹು ಸ್ಪಷ್ಟವಾಗಿ ಅರ್ಥವಾಗಿತ್ತು. ಎಂತಲೇ ಗಂಗ ಪೆರ್ಮಾಡಿ, ಜಗದೇವರಾಯ

ಮಾತಿನ ಸದ್ದು ಕೇಳದಷ್ಟು ದೂರ ಹೋಗುವವರೆಗೂ ಸುಮ್ಮನಿದ್ದು ಬಳಿಕ ಅತ್ತಿಂದಿತ್ತ ಶತಪಥ ಹಾಕುತ್ತಿದ್ದ ಕಾಳಿದಾಸಯ್ಯನ ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿದ.

'ನಾನು ಮಾಡಿದುದು ಸರಿಯೇ ತಪ್ಪೇ ಎಂಬುದೇ ತಿಳಿಯದಾಗಿದೆ ನನಗೆ'

—ಅತ್ತಿಂದಿತ್ತ ಓಡಾಡುತ್ತಲೇ, ಮಾತು ಮಾತನ್ನೂ ತೂಗುವವನಂತೆ ಹೇಳಿದ ಕಾಳಿದಾಸಯ್ಯ

'ಯಾವುದು?'

'ಚಕ್ರವರ್ತಿಗಳನ್ನು ಹೊಯ್ಸಳರ ವಿರುದ್ಧ ಪ್ರೇರೇಪಿಸಿದುದು'

'ಏಕೆ?'

'ಹೊಯ್ಸಳರಲ್ಲಿ ಉದ್ಧಟತನವಿರಬಹುದು. ಆ ಉದ್ಧಟತನಕ್ಕೆ ನಾವು ಅಂದುಕೊಂಡ ಕಾರಣವೂ ಇರಬಹುದು, ಬೇರೆಯದೂ ಇರಬಹುದು. ಆದರೆ ಅನುಭವದಿಂದ ನಾನು ಇಷ್ಟಂತೂ ಬಲ್ಲೆ—'

'ಏನು?'

'ಅವರಲ್ಲಿ ಬಲವಿದೆ-ಹಾಗೆಂದು ಇತರರ ಮೇಲೆ ಎಂದು ಬಿದ್ದೇವೋ ಎಂಬ ತವಕವಿಲ್ಲ, ಅಧಿಕಾರ ಬೇಕು ಎಂಬ ಬಯಕೆಯಿದೆ. ಅದು ಯಾರಲ್ಲಿ ಇಲ್ಲ? ಆದರೆ ಹೊಯ್ಸಳರ ಬಯಕೆಯಲ್ಲಿ ಹೇಗಾದರೂ, ಕಾಲು ಹಿಡಿದೋ, ತಲೆ ಕಡಿದೋ ಮುಂದುವರಿಯಬೇಕೆಂಬ ಕುಹಕವಿಲ್ಲ'

'ಅದು ಹೇಗೆ ಹೇಳುತ್ತೀರಿ?'

—ಕಾಳಿದಾಸಯ್ಯನ ಮಾತಿನ ತರ್ಕವೇ ಅರ್ಥವಾಗದೆ ಕೇಳಿದ ಚಾವುಂಡರಾಯ.

'ಕಾಣುವ ಕಣ್ಣಿದ್ದರೆ ಸ್ಪಷ್ಟವಾಗಿಯೇ ಇದೆಯಲ್ಲ. ಸಮಯಸಾಧಕರು ಎಂದೂ ತಮ್ಮ ನಡೆ ನುಡಿಯಲ್ಲಿ ಅಂತರಂಗವನ್ನು ತೋರಿಕೊಡುವುದಿಲ್ಲ. ಎದೆಯಲ್ಲಿ ಹಾಲಾಹಲವಿಟ್ಟುಕೊಂಡೂ ನಾಲಿಗೆಯಿಂದ ಜೇನು ಹನಿ ತೊಟಕಿಸುತ್ತಾರೆ. ಅಂಥವರ ಅತಿವಿಧೇಯತೆಯೇ ನಮಗೆ ಎಚ್ಚರಿಕೆಯಾಗಬೇಕು.'

'ನಿಮ್ಮ ಮಾತು ಕೇಳಿದರೆ, ಏಕೋ ನೀವು ಹೊಯ್ಸಳರಿಗಿಂತಲೂ ಇವರ ವಿಷಯದಲ್ಲೇ, ಹೆಚ್ಚು ಸಂಶಯ ತಾಳಿರುವಂತೆ ಕಾಣುತ್ತದೆ.'

'ನಿಜ.'

ಕಾಳಿದಾಸಯ್ಯ ಕೊಟ್ಟ ಆ ಒಂಟಿ ಮಾತಿನ ಉತ್ತರ ಕೇಳಿ ಚಾವುಂಡರಾಯನಿಗೆ ಎತ್ತಿ ಕುಕ್ಕಿದಷ್ಟು ಆಶ್ಚರ್ಯವಾಯಿತು. ಆ ಆಶ್ಚರ್ಯವನ್ನು ಮುಚ್ಚಿಟ್ಟುಕೊಳ್ಳಲಾಗದೆ ಕೇಳಿದ—

'ನಿಮ್ಮ ಮಾತೇ ನನಗೆ ಅರ್ಥವಾಗುತ್ತಿಲ್ಲ'

'ಏಕೆ?'

'ಮತ್ತೆ-ನಮಗೆ ಮಿತ್ರರಾಗಿದ್ದು ನಮಗಾಗಿ ಏನು ಬೇಕಾದರೂ ಮಾಡುತ್ತೇವೆ ಎನ್ನುವವರಲ್ಲೇ ನಾವು ಸಂಶಯ ತಾಳಬೇಕು ಎಂದರೆ, ಆ ಮಾತನ್ನು ಹೇಗೆ ನಂಬಬೇಕು?'

—ದಿಗ್ಭ್ರಾಂತನಾಗಿ ಕೇಳಿದ ಚಾವುಂಡರಾಯ.

ಚಾವುಂಡರಾಯನ ಪ್ರಶ್ನೆಗೆ ಕಾಳಿದಾಸಯ್ಯ ಕೂಡಲೇ ಉತ್ತರ ಕೊಡಲಿಲ್ಲ. ಒಂದು ಗಳಿಗೆ ಸುಮ್ಮನೆ ಆತನ ಮುಖವನ್ನು ದಿಟ್ಟಿಸಿ ನೋಡಿ ಒಣ ನಗೆ ನಕ್ಕು ಬಳಿಕ ಹೇಳಿದ—

'ಇವರೇಕೆ ನಮ್ಮ ಮಿತ್ರರಾಗಿದಾರೆ ಎಂದು ಒಂದು ಗಳಿಗೆ ಯೋಚಿಸಿ ನೋಡು ಚಾವುಂಡರಾಯ, ಬಳಿಕ ನಿನಗೇ ನನ್ನ ಮಾತು ಅರ್ಥವಾಗುತ್ತದೆ'

'ಅಂದರೆ—'

'ಅಂದರೆ— ಇಷ್ಟೆ. ಇವರು ನಮಗೆ ಮಿತ್ರರಾಗಿರುವುದು ನಮಗೆ ಒಳಿತಾಗಲಿ ಎನ್ನುವ ಕಾರಣಕ್ಕಲ್ಲ. ನಮ್ಮಿಂದ ತಮಗೆ ಒಳ್ಳೆಯದಾಗಬಹುದು ಎಂಬ ಉದ್ದೇಶಕ್ಕಾಗಿ, ನಮ್ಮ ಸ್ನೇಹದಿಂದ ಅವರಿಗೆ ಲಾಭವಿದೆ-ಆ ಕಾರಣಕ್ಕಾಗಿ. ಇಂಥ ಜನ ಮಿತ್ರರಾಗುವುದು ಎಷ್ಟು ಸುಲಭವೋ ಶತ್ರುಗಳಾಗುವುದೂ ಅಷ್ಟೇ ಸುಲಭ. ಅಷ್ಟೇ ಅಲ್ಲ—ಹೊಯ್ಸಳರ ಶತ್ರುತ್ವಕ್ಕಿಂತ, ಇವರ ಅಸೂಯೆ ಸ್ವಾರ್ಥಭಾವನೆ ಸಾಮ್ರಾಜ್ಯಕ್ಕೆ ಅತ್ಯಂತ ಹೆಚ್ಚಿನ ಅಪಾಯಕಾರಿಯೆಂದೇ ನನಗೀಗ ತೋರುತ್ತಿದೆ...'

'ಏಕೆ?'

'ಇವನು ಶತ್ರು ಎಂದೇ ನಿರ್ಧಾರವಾದವನನ್ನು ಪ್ರಯತ್ನ ಮಾಡಿ ಸೋಲಿಸಬಹುದು, ಸಖ್ಯವನ್ನೂ ಬೆಳೆಸಬಹುದು—ಪ್ರಯತ್ನ ಪಟ್ಟರೆ. ಆದರೆ ಈ ಅಸೂಯೆಯನ್ನು ತಣಿಸುವುದು ಹೇಗೆ ಹೇಳು? ಇವೊತ್ತು ಇವರು— ಹೊಯ್ಸಳರಿಗೆ ನಮಗಿಂತ ಹೆಚ್ಚಿನ ರಾಜ್ಯವಿದೆ, ಅದು ನಮಗಾಗಲಿ ಎನ್ನುತ್ತಾರೆ, ನಾಳೆ ಇವರು ಇದೇ ಮಾತನ್ನು ಚಕ್ರವರ್ತಿಗಳ ವಿಷಯದಲ್ಲೂ ಹೇಳಲಿಕ್ಕಿಲ್ಲ ಎಂಬ ಭರವಸೆ ಏನು? — ಅಲ್ಲವೇ, ಚಾವುಂಡರಾಯ? ಇಂಥ ಸಂದೇಹಾಸ್ಪದವಾದ ಮಿತ್ರತ್ವಕಿಂತ, ಖಚಿತವಾಗಿ

ತಿಳಿದ ಶತ್ರುವೇ ಹೆಚ್ಚು ವಿಶ್ವಾಸಾರ್ಹನಲ್ಲವೇ? ಲಾಭಾಪೇಕ್ಷೆಯಿಂದ ಮಿತ್ರರಾದವರು ಬಹುದಿನ ಮಿತ್ರರಾಗಿಯೇ ಉಳಿಯಲಾರರು'

—ಕಾಳಿದಾಸಯ್ಯ ಹೇಳಿದ. ಆತ ಆ ಮಾತನ್ನು ಇದಿರು ಕುಳಿತ ಚಾವುಂಡರಾಯನಿಗೆ ಹೇಳುವುದಕ್ಕಿಂತ ಹೆಚ್ಚಾಗಿ ತನಗೆ ತಾನೇ ಯಾವುದೋ ಮಾತನ್ನು ತರ್ಕ ಮಾಡಿ ಆಡಿಕೊಳ್ಳುವಂತಿತ್ತು.—ಆತ ಆ ಮಾತುಗಳನ್ನಾಡಿದ ರೀತಿ, ಆತನ ತರ್ಕವನ್ನು ಕೇಳಿದ ಬಳಿಕ ಚಾವುಂಡರಾಯನಿಗೂ ಅಷ್ಟು ಹೊತ್ತು ಏನೂ ಮಾತನಾಡಲು ತೋರಲಿಲ್ಲ. ಅಷ್ಟು ಮಾತನಾಡಿದ ಕಾಳಿದಾಸಯ್ಯನೂ ಮುಂದೆ ಮಾತನಾಡದೆ ಸುಮ್ಮನೆ ಏನೋ ಯೋಚಿಸುತ್ತ ಕುಳಿತಿದ್ದ. ಆ ಮೌನದಲ್ಲಿ ಏಕೋ ಹೊರಗಿದ್ದ ಬಿಸಿಲು ಒಳಗೇ ಬಂದು, ಸಹಿಸಲಾರದ ಧಗೆ ಹಬ್ಬಿದಂತಿತ್ತು.

'ಹಾಗಾದರೆ—ಈಗ ಮುಂದೇನು?'

—ಮೌನದ ಕುದಿಯನ್ನು ತಡೆಯಲಾರದೆ ಅದನ್ನು ಮುರಿದು ಕೇಳಿದ ಚಾವುಂಡರಾಯ.

'ಮುಂದೇನು? ಸಚಿವನೆನಿಸಿಕೊಂಡನು ಸಿಟ್ಟಿಗೆ ಮನಸ್ಸು ಕೊಡಬಾರದು ಎಂಬ ಬಹು ದೊಡ್ಡ ಪಾಠವನ್ನು ಇಂದು ಕಲಿತುಕೊಂಡಂತಾಯಿತು. ನನ್ನ ಬುದ್ಧಿ ಇಷ್ಟು ಶೀಘ್ರ ಉದ್ರೇಕಕ್ಕೆ ಶರಣಾಗಬಹುದು ಎಂದು ನನಗೇ ತಿಳಿದಿರಲಿಲ್ಲ. ಅದೇನು ನನ್ನ ಪ್ರಾರಬ್ಧವೋ, ಸಾಮ್ರಾಜ್ಯದ ಗ್ರಹಚಾರವೋ—ಆದದ್ದಾಯಿತು. ಮುಂದೆ ಹಾಗಾಗದಂತೆ ಎಚ್ಚರವಾಗಿರಬೇಕು.'

—ತನ್ನ ಮೇಲೆ ತಾನೇ ತೀರ್ಪು ಕೊಟ್ಟುಕೊಳ್ಳುತ್ತಾ ಹೇಳಿದ ಕಾಳಿದಾಸಯ್ಯ.

'ಈಗಾದುದು ಸರಿಯಾಗಲಿಲ್ಲ ಎಂದು ನಿಮಗೆ ತೋರಿದರೆ—ಇಂದಾದ ತೀರ್ಮಾನವನ್ನೇ ಬದಲಾಯಿಸಬಹುದಲ್ಲ.'

—ಕಾಳಿದಾಸಯ್ಯನ ಸಮಸ್ಯೆಗೆ ಪರಿಹಾರ ಮಾರ್ಗ ತೋರುತ್ತಾ ಹೇಳಿದ ಚಾವುಂಡರಾಯ.

'ಊಹೂ —ಅದೂ ಸಾಧ್ಯವಿಲ್ಲ.'

'ಏಕೆ?'

'ಗಳಿಗೆಗೊಂದು ಮಾತನಾಡುವ ಸಚಿವರಲ್ಲಿ ಚಕ್ರವರ್ತಿಗಳಿಗೆ ನಂಬಿಕೆ ಬಹುದಿನ ಉಳಿಯುವುದಿಲ್ಲ, ಗಂಗವಾಡಿಯ ಆಧಿಪತ್ಯವನ್ನು ಹೊಯ್ಸಳರಿಂದ ತಪ್ಪಿಸುವುದು ಪ್ರಭುಗಳಿಗೇ ಬೇಕಾಗಿರಲಿಲ್ಲ. ನಾನೇ, ಅವರ ಸುತ್ತಲೂ ವಾದದ ಅಭೇದ್ಯ ಕೋಟೆ ಕಟ್ಟಿ, ಅವರ ಬುದ್ಧಿಯನ್ನು ನನಗೆ ಬೇಕಾದ ಜಾಡಿಗೆ ತಿರುಗಿಸಿದೆ. ಹಾಗಿರುವಾಗ ನಾನೇ ಈಗ ಹೋಗಿ—ನನ್ನಿಂದ ತಪ್ಪಾಯಿತು ಎಂದು ಹೇಳಿದರೆ, ಚಕ್ರವರ್ತಿಗಳಿಗೆ ಮುಂದೆ ನನ್ನಲ್ಲಿ ಗೌರವ, ನನ್ನ ಮಾತಿನಲ್ಲಿ ನಂಬಿಕೆ ಉಳಿದೀತೇ? ಹಾಗೆ ಮಾಡಹೋದರೆ ನನ್ನ ಪತನಕ್ಕೆ ನಾನೇ ಆಹ್ವಾನವಿತ್ತಂತಾಗುತ್ತದೆ. ಅದು ಸಾಧ್ಯವಿಲ್ಲ'

—ಅಪರಿಹಾರ್ಯವಾದ ಸಮಸ್ಯಾಚಕ್ರದಲ್ಲಿ ಸಿಲುಕಿಕೊಂಡ ಕಹಿಯಲ್ಲಿ ಹೇಳಿದ ಕಾಳಿದಾಸಯ್ಯ

'ಹಾಗಾದರೆ ಮುಂದೆ—?'

'ಮುಂದೆಯೇ? ಹಿಂದಕ್ಕೆ ನಡೆಯುವುದು ಸಾಧ್ಯವಿಲ್ಲ, ಚಾವುಂಡರಾಯ, ಮುಂದೆಯೇ ನಡೆಯಬೇಕು. ಇಳುಕಲು ದಾರಿಯಲ್ಲಿ ಚಕ್ರವನ್ನು ಉರುಳು ಬಿಟ್ಟದ್ದಾಯಿತು. ಅದು ಹೇಗೆ ಹೋಗುವುದೋ ನೋಡಬೇಕು. ಬಳ್ಳಿಗಾಮೆಯಲ್ಲಿರುವ

ನೀವು ಹಿಂದಿಗಿಂತಲೂ ಎಚ್ಚರವಾಗಿರಿ. ಹಳೆಯ ಅಧಿಕಾರ ಕಳೆದುಕೊಂಡವರು, ಹೊಸ ಅಧಿಕಾರ ಪಡೆದವರು—ಇಬ್ಬರ ಬುದ್ಧಿಯೂ ಹೇಗೆ ಹರಿಯುವುದೆಂಬುದನ್ನು ಹುಷಾರಾಗಿ ನೋಡುತ್ತಿರಬೇಕು. ಅದು ಬಹು ಅಗತ್ಯ. ಇಂದು ಆದದ್ದು ಆಯಿತು. ನಾಳೆ ನನ್ನನ್ನು ನಾನೇ 'ನಿನ್ನಿಂದ ಚಾಲುಕ್ಯ ಸಾಮ್ರಾಜ್ಯದ ಅವನತಿ ಆರಂಭವಾಯಿತು' ಎಂದು ಹಳಿದುಕೊಳ್ಳುವಂಥ ಪರಿಸ್ಥಿತಿಯೊಂದು ರೇಣುಕೆಯ ಕೃಪೆಯಿಂದ ಬರದಿದ್ದರೆ ಸಾಕಾಗಿದೆ'

—ದೂರ, ದೂರ, ಬಹುದೂರ ಭವಿಷ್ಯದ ಗರ್ಭದಲ್ಲಿ ಏನೇನನ್ನೋ ಹುಡುಕಿ, ಆ ಪ್ರಯತ್ನದಲ್ಲಿ ದಣಿದು ಹೇಳಿದ ಚಾವುಂಡರಾಯ.

ಆ ಮಾತುಗಳಿಗೆ ಪ್ರತಿಯಾಗಿ ಏನೂ ಹೇಳಲಾಗದೆ ಮೂಕನಾಗಿ ಕುಳಿತ ಚಾವುಂಡರಾಯ.

ಅಷ್ಟು ಹೊತ್ತು ಸುಮ್ಮನಿದ್ದು ಬಳಿಕ ಕಾಳಿದಾಸಯ್ಯನೇ ನಿಟ್ಟುಸಿರು ಬಿಟ್ಟು ಹೇಳಿದ—

'ಯಾಗ ಮಂಟಪದಲ್ಲಿ ಇವೊತ್ತಿನ ಬೆಳಗಿನ ಕೆಲಸಗಳು ಮುಗಿಯಿತೇನೋ ವಿಚಾರಿಸು ಚಾವುಂಡರಾಯ. ಬ್ರಾಹ್ಮಣರಿಗೆ ಎಲೆ ಹಾಕುವ ವೇಳೆಗೆ ನಾನೂ ಸ್ನಾನ ಸಂಧ್ಯಾವಂದನೆ ಮುಗಿಸಿ ಸಿದ್ಧನಾಗುತ್ತೇನೆ.'

—ಎಂದು ಚಾವುಂಡರಾಯನಿಗೆ ಹೇಳಿ ಕಳಿಸಿ, ಕಾಳಿದಾಸಯ್ಯ ಸ್ನಾನಗೃಹದ ಕಡೆ ತೆರಳಿದ.

ಅನಿರೀಕ್ಷಿತವಾಗಿ ಬಂದ ಲಾಭ ಅಷ್ಟೇ ಅನಿರೀಕ್ಷಿತವಾಗಿ ನಷ್ಟವಾಗಿಹೋದವನಂತಿತ್ತು ಸ್ನಾನಗೃಹದ ಕಡೆ ನಡೆದ ಕಾಳಿದಾಸಯ್ಯನ ತೂಗು ನಡಿಗೆ.

೮

ಮನೆಯ ಮುಂದಿನ ಚೌಪಳಿಗೆಯಲ್ಲಿ ಕುಳಿತು ಹೆಗ್ಗಡೆ ಮಾರಸಿಂಗಮಯ್ಯ ತಮ್ಮೆದುರಿಗಿದ್ದ ವ್ಯಾಸಪೀಠದಲ್ಲಿದ್ದ ತಾಳೆಯ ಗರಿಗಳ ಕಡತವನ್ನು ನೋಡುತ್ತಿದ್ದರು. ಅವರ ಹೆಗ್ಗಡಿಕೆಗೆ ಸೇರಿದ ಗ್ರಾಮಗಳಿಂದ ಬರಬೇಕಾದ ರಾಜಾದಾಯದಲ್ಲಿ ಬೊಕ್ಕಸಕ್ಕೆ ಎಷ್ಟು ಸಂದಾಯವಾಗಿದೆ, ಎಷ್ಟು ಉಳಿದಿದೆ ಎಂಬ ಹಣಕಾಸಿನ ಗಣಿತದಲ್ಲಿ ಮನಸ್ಸು ತೊಡಗಿದ್ದರೂ, ಕಣ್ಣುಗಳು ಮಾತ್ರ ಆಗಾಗ, ತೆರೆದ ತಲೆಬಾಗಿಲಿನಿಂದಾಚೆಗೆ ಕಾಣುವ ಬೀದಿಯನ್ನು ದಿಟ್ಟಿಸುತ್ತಿದ್ದವು.

ಹೊರಗೆ ಬೀದಿಯಲ್ಲಿ ಪ್ರಖರವಾದ ನಡು ಹಗಲಿನ ಬಿಸಿಲು, ಸಣ್ಣ ಗಾಳಿಗೆ ಆಡುವ ತೆಳುವಾದ ಜವನಿಕೆಯಂತೆ ಮಿರುಗುತ್ತಿತ್ತು. ಮಾರ್ಗದ ಬದಿಯಲ್ಲಿ, ಇಬ್ಬದಿಯಲ್ಲೂ ಕಾಲುವೆಯ ದಂಡೆಯ ಮೇಲೆ ಬೆಳೆದ ತೆಂಗಿನಮರದ ಹಸಿರುಗರಿಗಳೂ, ಆ ಬಿಸಿಲನಲ್ಲಿ, ತಂಪಿನ ಭಾವನೆಯನ್ನು ಮೂಡಿಸದೆ, ಮಿರುಗಿಟ್ಟ ಉಕ್ಕಿನ ಸಲಾಕೆಗಳಂತೆ ಕಣ್ಣನ್ನು ಇರಿಯುತ್ತಿದ್ದವು. ವಾತಾಯನದಾಚೆ ಕಾಣುವ ಆಕಾಶಖಂಡದ ತೊಳೆದ ನೀಲಿಯ ಬಣ್ಣವೂ ಹೃದಯಕ್ಕೆ ಹಿತವನ್ನುಂಟು ಮಾಡದೆ ಏಕೋ ಕೊರೈಸುತ್ತಿರುವಂತ್ತಿತ್ತು. ಬಿಸಿಲಿಗೆ ಹೆದರಿ ಎಲ್ಲೋ ಅವಿತುಕೊಂಡಿದ್ದು ಆಗೊಮ್ಮೆ ಈಗೊಮ್ಮೆ ಸುಳಿಯುವ ಸಣ್ಣ ಗಾಳಿ ಬೀದಿಯಲ್ಲಿ ಆ ಬಿಸಿಲು ಉರಿಯ ಹೊಗೆಯಂಥ ಸಣ್ಣ ಕೆಂಪು ಧೂಳನ್ನು ಕೆದರುತ್ತಿತ್ತು.

ಮಾಗಿ ಕಾಲದಲ್ಲಿ, ಮಧ್ಯಾಹ್ನದ ವೇಳೆಯಲ್ಲೂ ಕಂಬಳಿ ಬೇಕೆನ್ನಿಸುವಂಥ ಚಳಿ ಇರುತ್ತಿತ್ತು. ಆದರೆ ಈ ದಿನ ಮಾತ್ರ ಹಗಲು, ಶೋಧಿಸಿದ ಅಕ್ಕಿಯ ಹಿಟ್ಟಿನಂಥ ಇಬ್ಬನಿ ಸುರಿದಿದ್ದರೂ ಈಗ, ಸೂರ್ಯ, ಆ ಚಳಿಯ ಮೇಲೆ ಸೇಡು ತೀರಿಸಿಕೊಳ್ಳುತ್ತಿರುವವನಂತೆ

ಉರಿದು, ಮೈ ಮೇಲೆ ಹೊದ್ದ ತೆಳುವಾದ ಉತ್ತರೀಯವನ್ನೂ ಕಿತ್ತು ಒಗೆಯಬೇಕು ಎನ್ನಿಸುವಂತಿತ್ತು ಬಿಸಿಲು.

ಕಡತವನ್ನು ನೋಡುತ್ತಿದ್ದ ಮಾರಸಿಂಗಮಯ್ಯನವರ ಕಣ್ಣು ಆ ಬಿಸಿಲ ಕಡೆ ನೋಡಿದಾಗ ಅವರ ಹೃದಯ ಮಿದುಳನ್ನು ಪ್ರಶ್ನಿಸುತ್ತಿತ್ತು—

'ಇಷ್ಟು ಹೊತ್ತಾದರೂ ಏಕೆ ಬರಲಿಲ್ಲ? ಇಂಥ ಬಿಸಿಲಿನಲ್ಲಿ ಆದಷ್ಟು ಬೇಗ ಪೂಜೆ ತೀರಿಸಿಕೊಂಡು ಬಂದು ಮನೆ ಸೇರಿಕೊಳ್ಳಬಾರದಿತ್ತೆ? ಏಕೆ ತಡವಾಗಿರಬಹುದು? ಎಂದೂ ಇಷ್ಟು ವಿಳಂಬವಾಗುತ್ತಿರಲಿಲ್ಲ'

ಆದರೆ ಹೃದಯದ ಪ್ರಶ್ನೆಗೆ ಉತ್ತರ ಕೊಡುವುದು ಬುದ್ಧಿಗೆ ತಿಳಿದಿರಲಿಲ್ಲವಾಗಿ, ಹೃದಯ ಪ್ರಶ್ನೆ ಕೇಳಿ ಸುಮ್ಮನಾಗಬೇಕಾಗಿತ್ತು ಬಿಸಿಲ ಧಗೆಯೊಂದಿಗೆ ಆ ಚಿಂತೆಯೂ ಬೆರೆತು, ಆ ಸೆಖೆ—ಚಿಂತೆಗಳಲ್ಲಿ ಕಡತವನ್ನು ನೋಡುವುದೂ ಆಗದೆ, ಮಾರಸಿಂಗಮಯ್ಯನವರು ಕೈಯಲ್ಲಿ ಹಿಡಿದ ಓಲೆಯ ಹಾಳೆಯನ್ನು ಹಾಗೇ ವ್ಯಾಸಪೀಠದ ಮೇಲಿಟ್ಟು, ದಿಂಬಿಗೆ ಮೈ ಒರಗಿಸಿದರು. ಆದರೆ ಅಂದಿನ ಅನೈಸರ್ಗಿಕ ಬಿಸಿಲಿನಲ್ಲಿ ಹತ್ತಿ ತುಂಬಿದ ಮೃದುವಾದ ದಿಂಬೂ ಮೈಗೆ ಹಿತವಾಗಲಿಲ್ಲ.

'ಏಕೋ, ಬರಲಿರುವ ಬೇಸಗೆಯ ರುಚಿಯನ್ನು ಈ ದಿನವೇ ತೋರಿಸುತ್ತಿದೆ ಬಿಸಿಲು. ಇಷ್ಟು ಬಿಸಿಲಾದರೂ ಬೇಗ ಮನೆಗೆ ಬರಬೇಕೆಂಬ ಬುದ್ಧಿ ಏಕೆ ಇವರಿಗೆ ಬರಲಿಲ್ಲ?'

—ಎಂದು ತಮ್ಮನ್ನು ತಾವೇ ಪ್ರಶ್ನಿಸಿಕೊಳ್ಳುತ್ತಾ, ಬಸದಿಗೆ ಪ್ರಾತಃಪುಜೆಗೆಂದು ಹೋಗಿದ್ದ ತಮ್ಮ ಮಡದಿ ಮಕ್ಕಳ ವಿಷಯವನ್ನೇ ಚಿಂತಿಸುತ್ತಾ ಕುಳಿತಿದ್ದರು ಮಾರಸಿಂಗಮಯ್ಯ.

*   *   *   *   *   *

ತಮ್ಮ ಮಡದಿ ಮಾಚಿಕಬ್ಬೆಯ ಸ್ವಭಾವ ಮಾರಸಿಂಗಮಯ್ಯನಿಗೆ ಚೆನ್ನಾಗಿ ತಿಳಿದಿತ್ತು. ಆಕೆ ದೇವತಾ ವಿಷಯದಲ್ಲಿ ಬಹು ನಿಷ್ಠಳು ಏನು ಕೆಲಸವಿದ್ದರೂ ಹಗಲು, ಸಂಜೆ ಬಸದಿಗೆ ಹೋಗಿ ದೇವತಾದರ್ಶನ ಮಾಡಿಕೊಂಡು ಬರುವುದನ್ನು ತಪ್ಪಿಸುತ್ತಿರಲಿಲ್ಲ. ಅದರಲ್ಲೂ ಬಹು ದಿನ ಮಕ್ಕಳಿಲ್ಲದ ತನಗೆ ಮಗಳನ್ನು ಕರುಣಿಸಿದ ಮಲ್ಲಿಕಾಮೋದ ಬಸದಿಯ ಶಾಂತಿನಾಥ ತೀರ್ಥಂಕರನ ದರ್ಶನಕ್ಕೆ ಹೋಗುವುದೆಂದರಂತೂ ಆಕೆಗೆ ತವರುಮನೆಗೆ ಹೋದಷ್ಟು ಹರುಷ ಎಷ್ಟೋ ವೇಳೆ ಸುಂದರ ಜಿನ ಬಿಂಬವನ್ನು ನೋಡುತ್ತಾ, ಆ ಆನಂದದಲ್ಲಿ ಮನೆಯನ್ನು ಮರೆತು, ಯಾವಾಗಲೋ ಎಚ್ಚರವಾದಾಗ, ಎಷ್ಟು ಹೊತ್ತಾಯಿತೆಂದು ನಾಚುತ್ತಾ ಮನೆ ಸೇರುತ್ತಿದ್ದಳು. ತಮ್ಮ ಇಪ್ಪತ್ತು ವರ್ಷಗಳ ದಾಂಪತ್ಯ ಜೀವನದಲ್ಲಿ ಮಾರಸಿಂಗಮಯ್ಯ, ಮಾಚಿಕಬ್ಬೆ ಮನೆಯನ್ನು ಮರೆತ ಇಂಥ ಎಷ್ಟೋ ದಿನಗಳನ್ನು ಕಂಡಿದ್ದ.

ಶಾನ್ತಲೆ ಆ ತಾಯಿಗೆ ತಕ್ಕ ಮಗಳು. ತಾಯಿಗೆ ದೇವರನ್ನು ಕಂಡು ಮೈ ಮರೆತು ಹೋದರೆ, ಈ ಮಗಳಿಗೆ ಮೈ ಮರೆಯುವುದಕ್ಕೆ ದೇವರೂಬೇಡ—ಆಕಾಶದಲ್ಲಿ ಬಣ್ಣ ಬಣ್ಣದ ಗರಿ ಚಿಮ್ಮಿಸುತ್ತಾ ಹಾರುವ ಹಕ್ಕಿ, ಯಾವುದೋ ಬಳ್ಳಿಯಲ್ಲಿ ಅರಳಿದ ಹೂವು, ಎಲ್ಲೋ ಗಾಳಿಯಲ್ಲಿ ತೇಲಿಬರುವ ಯಾರದೋ ಹಾಡಿನ ಸೆಳಕು, ಮಾರ್ಗದಲ್ಲಿ ಹೋಗುತ್ತಿರುವ ಬಂಡಿಯ ಎತ್ತಿನ ಕತ್ತಿಗೆ ಕಟ್ಟಿದ ಗೆಜ್ಜೆಯ ಧ್ವನಿ, ಯಾವುದೂ ಆಕೆಯ ಮೈ ಮರೆಸಬಹುದು—ಅಂಥ ಭಾವುಕ ಹೃದಯ ಶಾನ್ತಲೆಯದು. ಆ ಮಗಳ ಸ್ವಭಾವವೂ ಮಾರಸಿಂಗಯ್ಯನಿಗೆ ಚೆನ್ನಾಗಿ ತಿಳಿದಿತ್ತು. ಬಸದಿಯಿಂದ ಬರುವುದು ತಡವಾದ ಎಷ್ಟೋದಿನ 'ಏಕೆ ತಡವಾಯಿತು?' ಎಂದು ಮಾರಸಿಂಗಯ್ಯ ಕೇಳಿದಾಗ ಮಾಚಿಕಬ್ಬೆ 'ನನ್ನನ್ನು ಏನು ಕೇಳುತ್ತೀರ, ಗೊಂಬೆಯನ್ನು ಕಂಡು ಗೊಂಬೆಯಾಗಿ ನಿಲ್ಲುವ ನಿಮ್ಮ

ಮಗಳನ್ನು ಕೇಳಿ' ಎಂದು ನಕ್ಕಿದ್ದಳು. ಮನೆಯ ಹೊರಗಿರಲಿ, ಮನೆಯೊಳಗೇ ಒಮ್ಮೆ ಮಾರಸಿಂಗಮಯ್ಯ ಮಗಳ ಸ್ವಭಾವ ಹೇಗೆಂಬುದನ್ನು ಕಂಡಿದ್ದರು.

ಆ ದಿನ ಮನೆಯಲ್ಲಿ ಶಾನ್ತಲೆಗೆ ಸಂಗೀತವನ್ನು ಹೇಳಿಕೊಡುತ್ತಿದ್ದ ಗುರುಗಳು ವೀಣೆಯಲ್ಲಿ ಯಾವುದೋ ಒಂದು ರಾಗವನ್ನು ನುಡಿಸುವ ಕ್ರಮವನ್ನು ಕಲಿಸಿ, ತಮ್ಮ ಮನೆಗೆ ಹೋದ ಬಳಕ, ಶಾನ್ತಲೆ, ಅಷ್ಟು ಹೊತ್ತು ತಾನೇ ಆ ರಾಗವನ್ನು ನುಡಿಸುತ್ತಿದ್ದಳು. ಹಾಗೇ ನುಡಿಸುತ್ತಾ ನುಡಿಸುತ್ತಾ ಕ್ರಮೇಣ ವೀಣೆಯ ಮೇಲೆ ಚಲಿಸುವ ಕೈಬೆರಳು ನಿಂತು ಹೋದುದೂ ಅರಿವಿಲ್ಲದೆ, ಬಿಟ್ಟಕಣ್ಣು ಬಿಟ್ಟು ಹಾಗೇ ಕುಳಿತು ಬಿಟ್ಟಿದ್ದಳು. ವೀಣೆ ನುಡಿಸುವುದನ್ನು ನಿಲ್ಲಿಸಿ ಎಷ್ಟೋ ಹೊತ್ತಾದರೂ ಮಗಳು ಕೊಠಡಿಯಿಂದ ಹೊರಗೆ ಬರದಿದುದ್ದನ್ನು ಕಂಡು 'ಏನು ಮಾಡುತ್ತಿದ್ದಾಳೆ' ಎಂದು ಮಗಳನ್ನು ನೋಡಬಂದ ಮಾಚಿಕಬ್ಬೆ ವೀಣೆಯ ಮುಂದೆ ಕಂಡರಿಸಿದ ವಿಗ್ರಹದಂತೆ ಕುಳಿತ ಮಗಳನ್ನು ಕಂಡು, ತಾನೇ ಮಾರಸಿಂಗಮಯ್ಯನನ್ನು ಕರೆದು ತಂದು, ಆತನಿಗೆ ಶಾನ್ತಲೆಯನ್ನು ತೋರಿಸಿದ್ದಳು. ತಂದೆತಾಯಿಗಳು ಕೊಠಡಿಯೊಳಗೆ ಬಂದರೂ ಶಾನ್ತಲೆಗೆ ಅರಿವಿರಲಿಲ್ಲ. ಕಡೆಗೆ ಮಾರಸಿಂಗಮಯ್ಯನೇ ಆಕೆಯ ಬೆನ್ನು ತಟ್ಟಿ ಎಚ್ಚರಿಸಿ—

'ವೀಣೆಯನ್ನು ಇದುರಿಗಿಟ್ಟುಕೊಂಡು ಅದೇನು ಕನಸು ಕಾಣುತ್ತಿದ್ದೆಯೇ ತಾಯಿ?'

—ಎಂದು ಕೇಳಿದಾಗ—

ಶಾನ್ತಲೆ ತಾನು ಏನು ಆಡುತ್ತಿರುವೆನೆಂದೂ ತಿಳಿಯದೆ—-

'ಸಂಗೀತವನ್ನು ಕೇಳುತ್ತಾ ಕುಳಿತಿದ್ದೆ ಅಪ್ಪಾಜಿ.'

—ಎಂದು ಎಲ್ಲೋ ಕನಸು ಕಾಣುತ್ತಿರುವ ಧ್ವನಿಯಲ್ಲಿ ಉತ್ತರ ಕೊಟ್ಟಿದ್ದಳು.

'ಹೌದೇ ಜಾಣೆ. ನೀನು ಕೇಳುತ್ತಿದ್ದೆಯೆಂಬುದು ನಮ್ಮ ಕಣ್ಣುಗಳಿಗೂ ಕಂಡಿತು. ಆದರೆ ನೀನು ಕೇಳಲು ಹಾಡುತ್ತಿದ್ದವರು ಯಾರು? ನಮಗಾರಿಗೂ ಕೇಳಿಸದ ಹಾಗೆ, ಗಂಧರ್ವರು ಯಾರಾದರೂ ಹಾಡುತ್ತಿದ್ದರೇ?'

—ಮಾಚಿಕಬ್ಬೆ ನಗುತ್ತಾ ಮಗಳನ್ನು ಪ್ರಶ್ನೆ ಮಾಡಿದ್ದಳು.

ತಾಯಿಯ ಮಾತನ್ನು ಕೇಳಿ, ತನ್ನಿದಿರು ಯಾರೂ ಹಾಡುತ್ತಾ ಇಲ್ಲದುದು ನೆನಪಾಗಿ, ಶಾನ್ತಲೆಯ ಮುಖ ಆ ನಾಚಿಕೆಯಿಂದ ಕೆಂಚಾಗಿ, ತೊದಲುತ್ತಾ ಹೇಳಿದ್ದಳು—

'ಅದೇನಾಯಿತೋ ನಾನು ಕಾಣೆ ಅವ್ವೆ, ವೀಣೆಯನ್ನು ಯಾರೂ ನುಡಿಸುತ್ತಿರಲಿಲ್ಲ, ನಿಜ. ಆದರೂ ನಾನು ನುಡಿಸಲಾಗದೆ ನಿಲ್ಲಿಸಿದಾಗ, ಮತ್ತಾರೋ ನನಗೆ ನುಡಿಸಲಾಗದಂಥ ರಾಗ ವಿಶೇಷವನ್ನು ನುಡಿಸಿ ತೋರಿಸುತ್ತಿರುವಂತಾಗಿ, ಹಾಗೇ ಕೇಳುತ್ತಾ ಕುಳಿತು ಬಿಟ್ಟೆ'

ತನ್ನ ಪ್ರಶ್ನೆಗೆ ಮಗಳು ಕೊಟ್ಟ ಮುಗ್ಧ ಉತ್ತರವನ್ನು ಕೇಳಿ, ಮಾಚಿಕಬ್ಬೆಗೆ ಮಗಳ ಮೇಲೆ ಅಕ್ಕರೆ ಉಕ್ಕಿ ಬಂದು, ಆಕೆಯನ್ನು ಬಾಚಿ ತಬ್ಬಿ—

'ಇರಬೇಕು, ಇರಬೇಕು, ಆ ದೇವತೆಗಳ ಪ್ರೀತಿಯನ್ನು ಕಂಡವರು ಯಾರು? ನಿನಗೆ ಬರದಿದ್ದುದನ್ನು ಆ ಶಾರದೆಯೇ 'ಹೀಗೆ ನುಡಿಸು ಮಗಳೆ' ಎಂದು ಹೇಳಿ ತೋರಿಸಿ ಕೊಡುತ್ತಿದ್ದಳೋ ಏನೋ—ಯಾರು ಬಲ್ಲರು? ನಮಗೆ ಕೇಳುವ ಕಿವಿಯೂ ಇಲ್ಲ, ಕಾಣುವ ಕಣ್ಣೂ ಇಲ್ಲ.'

—ಎಂದಿದ್ದಳು ಮಾಚಿಕಬ್ಬೆ ಆನಂದದ ಅಶ್ರುಗಳನ್ನು ಕರೆಯುತ್ತಾ.

ಆ ತಾಯಿಮಕ್ಕಳ ಭಾವುಕತೆಯನ್ನು ಕಂಡಾಗ ಮಾರಸಿಂಗಮಯ್ಯನಿಗೆ 'ಇವರಿಬ್ಬರಿಗೂ ಇದೇನು ಹುಚ್ಚು' ಎನಿಸಿದರೂ, 'ಇರಬಾರದೇಕೆ? ತನ್ನ

ವರಪ್ರಸಾದದಿಂದ ಜನಿಸಿದವಳಿಗೆ, ತಾಯಿ ಅಷ್ಟು ಮಾಡಲಾರಳೆ' ಎಂದೂ ಅನಿಸದೆ ಹೋಗಲಿಲ್ಲ. ಆ ಭಾವನೆಯಿಂದ ಆತನಿಗೂ ಮಗಳ ಮೇಲೆ ಅಭಿಮಾನ ಉಕ್ಕಿ ಬಂದರೂ ಅದನ್ನು ತೋರಗೊಡದೆ—

'ಚೆನ್ನಾಯಿತು ಮಾಚಿ! ವಿಗ್ರಹ ಕಂಡು ಮೈ ಮರೆಯುವ ನಿನ್ನನ್ನು ಕೈ ಹಿಡಿದು ನಾನು ಹೊತ್ತುಗೊತ್ತಿಗೆ ಊಟ ಕಾಣದೆ ಪರದಾಡಬೇಕಾಗಿದೆ. ಇನ್ನು ಹಾಡು ಕೇಳಿ ಮೈ ಮರೆಯುವ ನಿನ್ನ ಮಗಳನ್ನು ಕಟ್ಟಿಕೊಂಡವನ ಕಥೆ ಏನಾಗಬೇಕು? ಇವತ್ತು ನಿನ್ನ ಮಗಳು ಎಂಬ ಅಭಿಮಾನದಲ್ಲಿ, ನಾಳೆ ಇವಳು ಬೇರೆಯವರ ಮನೆಯ ಸೊಸೆಯಾಗಿ ಬಾಳಬೇಕು ಎಂಬುದನ್ನು ಮರೆಯಬೇಡ. ಇವಳ ಹುಚ್ಚನ್ನು ಮೆಚ್ಚಿಕೊಂಡು ನೀನೂ ಕಣ್ಣೀರು ಹಾಕುತ್ತಾ ಕುಳಿತರೆ, ಒಲೆಯ ಮೇಲಿನ ಎಸರು ಕುದಿಯುವುದಿಲ್ಲ. ಏಳು.'

—ಎಂದು ಹೇಳಿ, ಆ ತಾಯಿ ಮಕ್ಕಳಿಗೆ ಮರೆತು ಹೋದ ಸಂಸಾರವನ್ನು ನೆನಪಿಸಿದ್ದರು.

ಇಂಥ ಪ್ರಸಂಗ ಒಂದಲ್ಲ ಹತ್ತು ಬಾರಿ ಆಗಿತ್ತು—-ಮನೆಯಲ್ಲಿ, ಬಸದಿಯಲ್ಲಿ ದೇವಾಲಯದಲ್ಲಿ. ಒಮ್ಮೊಮ್ಮೆ ಈ ಮೈ ಮರೆವಿಗಾಗಿ 'ಇದೇನು ಹೀಗೆ ಮಾಡಿದಿರಿ?' ಎಂದು ಕೇಳಿದರೂ, ಮಾರಸಿಂಗಮಯ್ಯನಿಗೂ ಅದು ಅಪ್ರಿಯವಾಗಿರಲಿಲ್ಲ. ಯಾವಾಗಲಾದರೊಮ್ಮೆ ಹಗಲು ಬಸದಿಗೆ ಹೋಗಿ, ಹೊತ್ತು ಮೀರಿ ಬಂದು, ತಮಗಾಗಿ ಹಸಿದು ಕಾದು ಕುಳಿತ ಗಂಡನನ್ನು ನೋಡಿ ಪಶ್ಚಾತ್ತಾಪದಿಂದ ಮಾಚಿಕಬ್ಬೆ—

'ಬಸದಿಗೆ ಹೋದಾಗ ನನ್ನ ಬುದ್ಧಿಗೆ ಅದೇನು ಮಂಕು ಕವಿಯುತ್ತದೋ ಏನೋ? ಆ ದೇವರ ಮುಖ ನೋಡಿಕೊಂಡು ಮನೆಯ ದೇವರನ್ನು ಬಳಲಿಸುತ್ತೇನೆ. ನನ್ನ ಬುದ್ಧಿ ಹೀಗೆಂದು ತಿಳಿದ ನೀವಾದರೂ ಯಾರ ಕೈಲಾದರೂ ಹೇಳಿಕಳಿಸಬಾರದಿತ್ತೆ?'

—ಎಂದಾಗ, ಮಾರಸಿಂಗಮಯ್ಯನೇ—

'ಅಂಥ ತಪ್ಪು ಮಾಡಬಹುದೇ ಮಾಚಿ? ಯಾವ ಪಾಪದ ಫಲವೋ ನನಗಂತೂ ದಿನವೂ ಸಾಕಷ್ಟು ಹೊತ್ತು ಶಿವಪೂಜೆ ಮಾಡಲೂ ಸಾಧ್ಯವಾಗದ ಈ ಹೆಗ್ಗಡಿಕೆಯ ಕಾರ್ಯ ಗಂಟು ಬಿದ್ದಿದೆ. ಹಿಂದಿನ ಜನ್ಮದಲ್ಲಿ ಯಾರ ಪೂಜೆಗೆ ಏನು ವಿಘ್ನ ತಂದಿದ್ದೆನೋ ಏನೋ, ಈ ಜನ್ಮಕ್ಕೆ ತೃಪ್ತಿಯಾಗುವಷ್ಟು ಪೂಜೆ ಮಾಡಲು ಆಗುತ್ತಿಲ್ಲ. ಅದು ತಿಳಿದೂ ತಿಳಿದೂ ನಿನ್ನ ಪೂಜೆಗೆ ಅಡ್ಡ ಬರಲೆ? ಅದೇನೂ ಬೇಡ— ಈ ಹೊಟ್ಟೆ ಹಸಿದು ದಣಿದರೂ ಚಿಂತೆಯಿಲ್ಲ, ನೀನೇ ನಮ್ಮಿಬ್ಬರಿಗೂ ಸಾಕಾಗುವಷ್ಟು ಪೂಜೆ ಮಾಡಿ, ಮುಂದಿನ ದಾರಿಗೆ ಬುತ್ತಿಯನ್ನು ಕಟ್ಟು'

—ಎಂದಿದ್ದರು.

ಹಾಗೆ ಹೇಳುವುದೇನು? ಮಾಚಿಕಬ್ಬೆಯೊಂದಿಗೆ ಬಸದಿಗೆ ಹೋಗುವ ದಾಸಿಯರಿಗೂ 'ಯಾರೂ ಹೊತ್ತಾಯಿತೆಂದು ಅವಸರ ಪಡಿಸಬಾರದು' ಎಂದು ಕಟ್ಟಪ್ಪಣೆ ಮಾಡಿದ್ದರು.

* * * * * *

ಎಂದಿನಂತೆಯೇ ಇಂದೂ ತಾಯಿ ಮಗಳು—ಇಬ್ಬರೇ ಬಸದಿಗೆ ಹೋಗಿದ್ದಿದ್ದರೆ ಈ ದಿನವೂ 'ಇಷ್ಟೇಕೆ ಹೊತ್ತಾಯಿತು?' ಎಂದು ಚಿಂತಿಸುತ್ತಿರಲಿಲ್ಲ ಆದರೆ ಈ ದಿನ ಮಾಚಿಕಬ್ಬೆ, ಶಾನ್ತಲೆಯರೊಂದಿಗೆ, ಮನೆಗೆ ಅತಿಥಿಗಳಾಗಿ ಬಂದಿಳಿದ ಏಚಲಾದೇವಿ, ಆಕೆಯ ಮಗಳು ವಾಸನ್ತಿಕೆಯರೂ ಹೋಗಿದ್ದುದರಿಂದ 'ಈಕೆಯ ಮೈ ಮರೆವು ಅವರಿಗೆಲ್ಲಿ ಬೇಸರಕ್ಕೆ ಕಾರಣವಾದೀತೋ? ಮುಖದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಬಾಯಿ ಬಿಟ್ಟು ಏನೊಂದನ್ನೂ ಹೇಳದೇ ಹೋದರೂ, ಮನಸ್ಸಿನಲ್ಲಿ ನಮ್ಮ ವಿಷಯವಾಗಿ ಏನು ತಪ್ಪು ತಿಳಿದುಕೊಂಡಾರೊ?' ಎಂಬ ಚಿಂತೆ ಮೂಡಿತ್ತು.

ಪಕ್ಕದಲ್ಲಿ ಆಳು ತಂದಿಟ್ಟಿದ್ದ ತಾಳೆಯಗರಿಯ ಬೀಸಣಿಗೆಯಿಂದ ಮೆತ್ತಗೆ ಗಾಳಿ ಬೀಸಿಕೊಳ್ಳುತ್ತಾ ಈ ಆಲೋಚನೆ ಮಾಡುತ್ತಿರುವಾಗಲೇ ಮನೆಯ ಮುಂದೆ, ರಥ ಬಂದು ನಿಂತ ಸದ್ದಾಗಿ, ಸ್ವಲ್ಪ ಹೊತ್ತಿನಲ್ಲೇ ಮಾಚಿಕಬ್ಬೆ, ಶಾನ್ತಲೆಯೊಂದಿಗೆ ಮನೆಯೊಳಗೆ ಪ್ರವೇಶಿಸಿದಳು.

ಮನೆಯೊಳಗೆ ಬಂದ ಮಡದಿ, ಮಗಳನ್ನು ಕಂಡು, ಮಾರಸಿಂಗಮಯ್ಯನಿಗೆ ನೋಡಿದ ಕಣ್ಣನ್ನು ಅತ್ತಿತ್ತ ಆಡಿಸಲಾಗಲಿಲ್ಲ. ಎಂದಿನಂತೆ ಇಂದೂ, ಆತನ ಕಣ್ಣಿಗೆ ಚಿರಪರಿಚಿತ ಮಡದಿ ಮಗಳ ಸೌಂದರ್ಯ, ಅಂದೇ ಕಂಡ ಹೊಸ ಸಂಶೋಧನೆಯಂತೆ ವಿನೂತನ ಲಾವಣ್ಯವಾಗಿ ಕಂಡಿತು.

ಯಾವ ಜರಿಯ ಕೆಲಸದ ಅಲಂಕಾರವೂ ಇಲ್ಲದ ತಿಳಿ ಹಸಿರು ರೇಶಿಮೆಯ ಸೀರೆಯನ್ನುಟ್ಟು ಮಾಚಿಕಬ್ಬೆಯ ಬಳಿಯಲ್ಲಿ ನಿಂತ ದಂತದ ಗೊಂಬೆಯಂಥ ಶಾನ್ತಲೆ, ಮಾರಸಿಂಗಮಯ್ಯನಿಗೆ ಬಳ್ಳಿಯ ಎಲೆಯ ಮರೆಯಲ್ಲಿ ಅರಳಿ ಕಳಕಳಿಸುವ ಹೂವಿನಂತೆ ಕಾಣಿಸಿದಳು. ಆ ಮೆಚ್ಚುಗೆ ತುಂಬಿದ ದೃಷ್ಟಿಯನ್ನು ಹಾಗೇ ಮಾಚಿಕಬ್ಬೆಯ ಮುಖದತ್ತ ಹಾಯಿಸಿದಾಗ, ತಣ್ಣನೆಯ ಹಸಿರು ಹುಲ್ಲಿನಲ್ಲಿ ನಡೆಯುತ್ತಿರುವಾಗ ಅನಿರೀಕ್ಷಿತವಾಗಿ ಕೆಂಡವನ್ನು ತುಳಿದಂತಾಯಿತು.

ಮಾಚಿಕಬ್ಬೆಯ ಮುಖದಲ್ಲಿ, ದಿನವೂ ಆಕೆ ದೇವ ಮಂದಿರದಿಂದ ಹಿಂದಿರುಗಿದಾಗ ಲಾಸ್ಯವಾಡುತ್ತಿದ್ದ ಶಾಂತಿ, ತೃಪ್ತಿ ಪ್ರಸನ್ನತೆಗಳು ಕಾಣಬರದೆ, ಯಾವುದೋ ದುಗುಡದ ಕಾರ್ಮೋಡ ಕವಿದಿತ್ತು. ಆಕೆಯ ಉಜ್ವಲವಾದ ನೇತ್ರಗಳ ಮೇಲಾವುದೋ ಚಿಂತೆಯ ತೆರೆ ಕವಿದಿದ್ದು ನೋಡುವವರಿಗೂ, 'ನಾನೊಬ್ಬಳೇ ಈ ಭಾರ ಹೊರಲಾರೆ, ಹಂಚಿಕೋ' ಎಂದು ಹೇಳುವಂತಿತ್ತು.

ಆ ಮುಖವನ್ನು ನೋಡುತ್ತಿದ್ದಂತೆಯೇ, ತಡವಾಗಿ ಮನೆಗೆ ಬಂದ ಮಡದಿಯನ್ನು ನಗೆ ಮಾತಿನಿಂದ ಕೆಣಕಬೇಕು ಎಂದುಕೊಂಡು ಜ್ಞಾಪಿಸಿಕೊಂಡ ಮಾತುಗಳು ಎಲ್ಲೋ ತಲೆ ಮರೆಸಿಕೊಂಡು, ಮಾತನಾಡಿಸುವುದನ್ನೂ ಮರೆತು ಹಾಗೇ ಕುಳಿತು ಬಿಟ್ಟ ಮಾರಸಿಂಗಮಯ್ಯ.

ಆತನಿಗೆ ಮಾತು ಮರೆತು ಹೋದಂತೆ ಮಾಚಿಕಬ್ಬೆಗೂ ಮಾತಾಡಲು ಶಕ್ತಿ ಇದ್ದಂತಿರಲಿಲ್ಲ. ನಡೆಯಲಾರೆನೆನ್ನುವ ಕಾಲುಗಳನ್ನು ನಿಧಾನವಾಗಿ ನಡೆಯಿಸಿ, ಪತಿಯ ಬಳಿ ಸಾರಿ, ದಿನದಂತೆ, ಕೈಯಲ್ಲಿದ್ದ ಬೆಳ್ಳಿಯ ಸಣ್ಣ ಹರಿವಾಣದಲ್ಲಿದ್ದ ತೀರ್ಥ, ಪ್ರಸಾದಗಳನ್ನು ಮಾರಸಿಂಗಮಯ್ಯನಿಗೆ ಕೊಟ್ಟು, ಬಳಿಕ ನಿಲ್ಲಲೂ ಸಾಧ್ಯವಾಗದವಳಂತೆ, ಹಾಗೇ ಹತ್ತಿರದಲ್ಲಿದ್ದ ಕಂಭಕ್ಕೆ ಒರಗಿ ಕುಳಿತಳು.

ಬಿಸಿಲ ಝಳಕ್ಕೆ ಬಾಡಿದ ಜಾಜಿಯ ಹೂವಿನಂತಾಗಿದ್ದ ಮಾಚಿಕಬ್ಬೆಯ ಮುಖ, ಆಕೆ ಸೋತು ಕಂಭಕ್ಕೆ ಒರಗಿ ಕುಳಿತ ರೀತಿ, ಕುಳಿತುಕೊಳ್ಳುತ್ತಿದ್ದ ಹಾಗೇ ಅಯಾಚಿತವಾಗಿ ಹೊರಹೊಮ್ಮಿದ ನಿಟ್ಟುಸಿರು—ಒಂದೊಂದೂ ಆಕೆಯ ಹೃದಯವನ್ನಾವುದೋ ತೀವ್ರ ವ್ಯಥೆ ಬಳಲಿಸುತ್ತಿರುವುದೆಂಬುದನ್ನು ಸೂಚಿಸಿ, ಏನಾಯಿತೆಂಬುದನ್ನು ಅರಿಯಲು ಕಾತರನಾಗಿ ಮಾರಸಿಂಗಮಯ್ಯ ಕೇಳಿದ—

'ಏನಾಯಿತು ಮಾಚಿ?'

ಆತನ ಪ್ರಶ್ನೆಗೆ ನಾನೇ ಉತ್ತರವೆಂಬಂತೆ, ಮಾಚಿಕಬ್ಬೆಯ ಕಣ್ಣುಗಳಲ್ಲಿ ನೀರಾಡಿತು. ಆ ಕಂಬನಿಯನ್ನು ಕಂಡು ಮಾರಸಿಂಗಮಯ್ಯನ ಮನಸು 'ಆದಾಗಿರಬಹುದೇ, ಹೀಗಾಗಿರಬಹುದೇ' ಎಂದು ಏನೇನೋ ನೂರೆಂಟನ್ನು ಚಿಂತಿಸಿ ಮತ್ತಷ್ಟು ಕಾತರವಾಗಿ—

'ಕಣ್ಣೀರೇಕೆ? ಬಸದಿಯಲ್ಲಿ ಏನಾದರೂ ಅಚಾತುರ್ಯವಾಯಿತೇ? ಯಾರು ಏನಾದರೂ ಆಡಿದರೆ?'

—ಎಂದು ನಾಲ್ಕಾರು ಪ್ರಶ್ನೆಗಳನ್ನು ಒಟ್ಟಿಗೆ ಕೇಳಿದ. ಅ ಪ್ರಶ್ನೆಗಳಿಗೂ ಆಕೆ ಉತ್ತರ ಕೊಡದಿರಲು, ತಾಯ ಬಳಿ ಸುಮ್ಮನೆ ನಿಂತ ಮಗಳನ್ನು ಕೇಳಿದ—

'ಬಸದಿಯಲ್ಲಿ ನಿನ್ನ ಅವ್ವೆಯನ್ನು ಯಾರಾದರೂ ಅಂದು ಆಡಿದರೇ ಶಾನ್ತಲಾ?'

'ಊಹೂ'

—ತಲೆಯನ್ನು ಆಡಿಸಿ ಹೇಳಿದಳು ಶಾನ್ತಲಾ.

'ಮತ್ತೆ?'

'ಏನೋ ಸುದ್ದಿ ಕೇಳಿ ಅವ್ವೆಯ ಮನಸ್ಸಿಗೆ ಬೇಸರವಾಗಿದೆ.'

'ಏನು ಸುದ್ದಿ?'

'ಚಕ್ರವರ್ತಿಗಳು, ನಮ್ಮ ಮನೆಗೆ ಬಂದಿರುವ ವಿನಯಾದಿತ್ಯ ದೊರೆಗಳಿಂದ ಗಂಗವಾಡಿಯ ಆಧಿಪತ್ಯವನ್ನು ಕಸಿದುಕೊಂಡು, ಅದನ್ನು ಎಡೆಯೂರಿನ ಗಂಗ ಪೆರ್ಮಾಡಿ ದೊರೆಗಳಿಗೆ ವಹಿಸಿ ಕೊಟ್ಟರಂತೆ'

'ಆ! ಹೌದೇ? ಯಾರು ಹೇಳಿದರು?'

—ಮಗಳು ಹೇಳಿದ ಸುದ್ದಿಯನ್ನು ಕೇಳಿ ಮಾರಸಿಂಗಮಯ್ಯ ಚಕಿತನಾಗಿ ಕೇಳಿದ.

'ಬಸದಿಯಲ್ಲಿ ಗೊತ್ತಾಯಿತು.'

'ಈ ಸುದ್ದಿ ಅಲ್ಲಿಗೆ ಹೇಗೆ ಬಂತು?'

'ಆ ಸಂತೋಷಕ್ಕಾಗಿ ಈ ದಿನ ಬಸದಿಯಲ್ಲಿ, ಗಂಗ ಪೆರ್ಮಾಡಿಗಳ ಮಡದಿ ಬಾಚಲಾದೇವಿಯರು ವಿಶೇಷ ಪೂಜೆ ಏರ್ಪಡಿಸಿದ್ದರು. ನಾವು ಬಸದಿಗೆ ಹೋದಾಗ, ಅವರೂ ಅಲ್ಲಿಗೆ ಬಂದಿದ್ದರು. ನಮ್ಮ ದಾಸಿಯೊಬ್ಬಳು, ಅವರ ಕಡೆಯ ಪರಿಚಾರಕೆಯೊಬ್ಬಳನ್ನು 'ಇಂದೇನು ವಿಶೇಷ?' ಎಂದು ವಿಚಾರಿಸಿದಾಗ ಆಕೆ ಹೇಳಿದಳಂತೆ. ದಾಸಿ ಆ ಸುದ್ದಿಯನ್ನು ಅವ್ವೆಗೆ ಹೇಳಿದಳು.'

'ದಾಸಿ ಆ ಸುದ್ದಿ ಹೇಳಿದಾಗ ಏಚಲಾದೇವಿಯರೂ ಅಲ್ಲೇ ಇದ್ದರೇ?'

'ಹೂ. ಕೆಟ್ಟ ಸುದ್ದಿ ಕೇಳಿ ಅವರ ಮುಖ ಹೇಗಾಯಿತು ಎನ್ನುತ್ತೀರ ಅಪ್ಪಾಜಿ? ಇದ್ದಕ್ಕಿದ್ದ ಹಾಗೇ ಬೆಳಕು ತುಂಬಿದ ಮನೆಯಲ್ಲಿ ಕತ್ತಲು ಕವಿದಂತಾಯಿತು. ಚಕ್ರವರ್ತಿಗಳು ಇಂಥ ಕೆಲಸ ಮಾಡಬಹುದೇ ಅಪ್ಪಾಜಿ?'

—ತನ್ನ ಎದೆಗುದಿಯಲ್ಲಿ ಅದಕ್ಕೆ ಅಪ್ರತ್ಯಕ್ಷವಾಗಿ ಕಾರಣವಾದ ಚಕ್ರವರ್ತಿಯನ್ನೇ ದೂರಿ ಕೇಳಿದಳು ಶಾನ್ತಲೆ.

ಆಕೆ ಹೇಳಿದುದನ್ನು ಕೇಳಿ ಮಾರಸಿಂಗಯ್ಯನ ಮುಖವೂ ಕಪ್ಪಿಟ್ಟು ಹೋಗಿತ್ತು ಎಂತಲೇ ಮಗಳ ಪ್ರಶ್ನೆಗೆ ಏನೊಂದೂ ಉತ್ತರ ಹೇಳಲಾಗದೆ ಹಾಗೇ ಮೌನವಾಗಿ ಕುಳಿತ.

'ಯಾರನ್ನು ಅನ್ನುವುದೇಕೆ? ಅವರು ನಮ್ಮ ಮನೆಗೆ ಬಂದ ಹೊತ್ತೇ ಅಂಥದು. ಬರುತ್ತಿದ್ದ ಹಾಗೇ ದೊಡ್ಡ ಮಕ್ಕಳಿಗೆ ಜ್ವರ ಬಂತು. ಇನ್ನೇನು ಇವತ್ತೋ ನಾಳೆಯೋ ಹೊರಡುತ್ತೇವೆ ಎನ್ನುವಾಗ ಈ ಕೆಟ್ಟ ವಾರ್ತೆ? ಅವರು ಈ ಮನೆಯ ನೆಲವನ್ನು

ತುಳಿದದ್ದೇ ತಪ್ಪಾಯಿತೋ ಏನೋ? ಸಣ್ಣವರ ಮುಂದೆ ನಗೆಪಾಟಲಿಗೆ ಗುರಿಯಾಗಬೇಕಾಯಿತು. ಈ ಸುದ್ದಿ ಕೇಳಿದ ಬಳಿಕ ನನಗಂತೂ ಆ ತಾಯಿಯ ಮುಖ ನೋಡುವುದಾಗಲಿಲ್ಲ. ಅವರು ನನ್ನಂಥ ನಿರ್ಭಾಗ್ಯಳ ಜೊತೆಯಲ್ಲಿ ಬಸದಿಗೆ ಬಂದದ್ದೇ ತಪ್ಪಾಯಿತು'

—ಆದ ಎಲ್ಲದರ ಹೊಣೆಗಾರಿಕೆಯನ್ನೂ ತನ್ನ ಮೇಲೆಯೇ ಹಾಕಿಕೊಳ್ಳುತ್ತಾ ಹೇಳಿದಳು ಅದುವರೆಗೂ ಸುಮ್ಮನಿದ್ದ ಮಾಚಿಕಬ್ಬೆ.

ಆಕೆ ಹೇಳಿದುದೆಲ್ಲವನ್ನೂ ಕೇಳಿ ಮಾರಸಿಂಗಮಯ್ಯನೂ ಒಂದು ಕ್ಷಣ ಮೌನವಾಗಿ ಕುಳಿತಿದ್ದು ಬಳಿಕ ತಾನೂ ನಿಟ್ಟುಸಿರು ಬಿಟ್ಟು ಹೇಳಿದ.

'ಏನಾದರೂ ಆಗಬಹುದು ಎಂದು ನಾವೂ ಅಂದುಕೊಂಡಿದ್ದೆವು. ಆದರೆ ಹೀಗಾಗುವುದೆಂದು ತಿಳಿದಿರಲಿಲ್ಲ.'

'ನೀವೂ ಹೀಗೇನಾದರೂ ಆಗ ಬಹುದು ಎಂದು ಕೊಂಡಿದ್ದಿರಾ?'

—ಗಂಡನ ಮಾತನು ಕೇಳಿ, ಮಾಚಿಕಬ್ಬೆ ಚಕಿತಳಾಗಿ ಕೇಳಿದಳು.

'ಹೂ'

'ಏಕೆ?'

ಆ ಪ್ರಶ್ನೆಗೆ ಉತ್ತರವಾಗಿ ಮಾರಸಿಂಗಮಯ್ಯ ವಿನಯಾದಿತ್ಯ ಬಳ್ಳಿಗಾಮೆಗೆ ಬಂದ ದಿನ ಓಲಗದಲ್ಲಿ ಪ್ರಧಾನಾಮಾತ್ಯರಿಗೂ ವಿಷ್ಣುವರ್ಧನನಿಗೂ ನಡೆದ ವಾಗ್ವಾದವನ್ನು ವಿವರಿಸಿ ಹೇಳಿದ.—

’ಪ್ರಧಾನಾಮಾತ್ಯರಿಗೆ ಆ ದಿನವೇ ಹುಡುಗನ ಮೇಲೆ ಸಿಟ್ಟು ಬಂದಿತ್ತು. ಅದರಿಂದ ಚಕ್ರವರ್ತಿಗಳಿಗೂ ಬೇಸರವಾಗಿತ್ತು. ಓಲಗದಲ್ಲಿ ಅವಮಾನಿತರಾದ ಪ್ರಧಾನಿಗಳು ಸುಮ್ಮನಿರುವುದಿಲ್ಲ ಎಂದು ನಾವು ಆ ದಿನವೇ ಅಂದುಕೊಂಡಿದ್ದೆವು.’

’ಹೌದೇ ಅಪ್ಪಾಜಿ? ಚಕ್ರವರ್ತಿಗಳ ಇದಿರಿನಲ್ಲೇ, ಪ್ರಧಾನಿಗಳಿಗೇ ಹೀಗೆ ಹೇಳಿದರೆ?’

—ತಂದೆಯ ಮಾತು ಮುಗಿಯುತ್ತಿದ್ದಂತೆಯೇ ಕೇಳಿದಳು ಶಾನ್ತಲಾ.

’ಹೂ’

’ಹುಡುಗ ಅಷ್ಟೆಲ್ಲಾ ಮಾತನಾಡಬಾರದಾಗಿತ್ತು.’

—ಮಾಚಿಕಬ್ಬೆ ಹೇಳಿದಳು.

’ಆಡಿದ್ದರಲ್ಲಿ ತಪ್ಪೇನಾಯಿತು ಅವ್ವೆ? ತಮಗೆ ಪದವಿಯಿದೆ ಎಂದು ಪ್ರಧಾನಿಗಳು ಎಲ್ಲರ ಎದುರಿಗೆ ಹಾಗಾಡಬಹುದೇ? ಚಿಕ್ಕವರಿಗೆ ಮಾನ ಮರ್ಯಾದೆ ಇರುವುದಿಲ್ಲವೇ? ವಯಸ್ಸು ಚಿಕ್ಕದಾದವರನ್ನು ಹಿರಿಯರು ಹಾಗೆ ಮಾತನಾಡಿಸಿದರೆ, ಅವರಲ್ಲಿ ಹಿರಿತನ ಎಲ್ಲಿಂದ ಬಂತು? ಗುಣದಲ್ಲಿ ಹಿರಿತನ ಇಲ್ಲದವರನ್ನು ಹಿರಿಯರೆಂದು ಗೌರವಿಸಬೇಕೇ?’

—ತಾಯಿಯ ಮಾತನ್ನು ಒಪ್ಪದೆ, ಪ್ರಧಾನಿಗಳ ಮೇಲೆ ಸಿಟ್ಟಾಗಿ ಹೇಳಿದಳು ಶಾನ್ತಲೆ.

ಶಾನ್ತಲೆಯ ಮಾತನ್ನು ಕೇಳಿ, ಮಾರಸಿಂಗಮಯ್ಯ, ಮಾಚಿಕಬ್ಬೆ ಇಬ್ಬರೂ ತಟಕ್ಕನೆ ಆಕೆಯ ಮುಖ ನೋಡಿದರು. ಶಾನ್ತಲೆಯ ಸುಂದರ ನಯನಗಳ ಆಳದಲ್ಲಿ

ಸಿಟ್ಟು, ಕಡಲ ತಳದಲ್ಲಿ ಉರಿವ ಬಡಬಾಗ್ನಿಯಂತೆ ಉರಿಯುತ್ತಿತ್ತು. ಆ ಕ್ರೋಧದಲ್ಲಿ ಹುಬ್ಬುಗಳು ಹೆದೆ ಏರಿಸಿದ ಬಿಲ್ಲಿನಂತಾಗಿದ್ದವು. ಕ್ರೋಧದ ಉದ್ವೇಗದಿಂದ ಹೆಚ್ಚು ರಕ್ತ ಹರಿದು ಆಕೆಯ ಕಮಲವರ್ಣದ ಮುಖ ಕೆಂಪು ದಾಸವಾಳವಾಗಿತ್ತು. ಇದ್ದಕ್ಕಿದ್ದ ಹಾಗೇ ಪ್ರಜ್ವಲಿಸಿದ ಉರಿಯಂಥ ಶಾನ್ತಲೆಯ ಸಿಟ್ಟನ್ನು ಕಂಡು, ಮಾಚಿಕಬ್ಬೆಗೂ ಒಂದುಗಳಿಗೆ 'ನನ್ನ ಮಗಳಲ್ಲಿ ಇಂಥ ಸಿಟ್ಟೂ ಇದೆಯೆ?' ಎನಿಸಿ ಆಶ್ಚರ್ಯವಾಯಿತು. ತನ್ನ ಮಗಳ ರೋಷೋಜ್ವಲ ನಯನ ದೀಧಿತಿಯ ಮುಂದೆ ಮಾರಸಿಂಗಮಯ್ಯನಿಗೂ ಒಂದುಗಳಿಗೆ ಮಾತಾಡುವುದಾಗಲಿಲ್ಲ. ಸದಾ ಸುಮದಂತೆ ನಳನಳಿಸುವ ತನ್ನ ಕನ್ಯೆ ಹೀಗೆ ಸಿಡಿಲೂ ಆಗಬಹುದೆಂಬುದನ್ನು ಆತ ಎಂದೂ ಕಂಡಿರಲಿಲ್ಲ.

ತನ್ನ ತಂದೆ ತಾಯದಿರಿಬ್ಬರೂ, ಮಾತು ನಿಲ್ಲಿಸಿ ತನ್ನ ಮುಖವನ್ನೇ ನೋಡುತ್ತ ಕುಳಿತುದನ್ನು ಕಂಡು ಶಾನ್ತಲೆಗೇ ತನ್ನ ಮಾತು ಅತಿಯಾಯಿತೇನೋ ಅನಿಸಿ, ಕೊಂಡ ಮೆತ್ತಗಾಗಿ ಕೇಳಿದಳು—

'ನಾನಾಡಿದುದು ತಪ್ಪೇ ಅಪ್ಪಾಜಿ? ಪ್ರಧಾನಿಗಳಲ್ಲಿ ಪೌರುಷ ಇದ್ದಿದ್ದರೆ, 'ನಿನಗೆ ಉತ್ತರ ಹೇಳಲು ನನ್ನ ಬಳಿ ಕತ್ತಿ ಇದೆ' ಎನ್ನಬೇಕಾಗಿತ್ತು. ಅದು ಬಿಟ್ಟು ಚಕ್ರವರ್ತಿಗಳ ಕಿವಿಗೆ ಚಾಡಿಯ ವಿಷ ಎರೆದು, ಯಾರ ಮೇಲಿನದೋ ಸಿಟ್ಟನ್ನು ಮತ್ತಾರಮೇಲೋ ತೀರಿಸಿಕೊಳ್ಳುವ ಈ ಹಿಸುಣತನವನ್ನು ಹಿರಿಯರು ಎಂದು ಮನ್ನಿಸಬಹುದೇ ಅಪ್ಪಾಜಿ? ದೇವರಂಥ ಆ ತಾಯಿಯ ಕಣ್ಣಿನಲ್ಲಿ, ಈ ದಿನ, ದೇವ ಮಂದಿರದಲ್ಲೇ ಕಣ್ಣೀರು ಹಾಕಿಸಿದ ಇವರಿಗೆ, ಯಾವ ದೇವರಾದರೂ ಒಳ್ಳೆಯದನ್ನು ಮಾಡುತ್ತಾನೆಯೇ?'

ಶಾನ್ತಲೆಯ ಸಿಟ್ಟನಿದಿರು ಮೂಕನಾಗಿ ಕುಳಿತಂತೆ, ಆಕೆಯ ಪ್ರಶ್ನೆಗೂ ಉತ್ತರ ಕೊಡಲಾಗದೆ ಕುಳಿತ ಮಾರಸಿಂಗಮಯ್ಯ.

’ನಿನ್ನ ಮಾತು ಸರಿಯೋ ತಪ್ಪೋ—ಆದರೂ ಹಿರಿಯರ ಮಾತಿನಲ್ಲಿ ಹೆಣ್ಣು ಮಗಳು ತಲೆಹಾಕಿ ಹೀಗೆ ಮಾತಾಡಬಾರದು, ಇಂಥ ಅತಿಮಾತು ಕೇಳಿಯೇ ಕೇಳಿದವರು ಬೇಸರಿಸಿಕೊಳ್ಳುತ್ತಾರೆ. ಮಾತು ಸಾಕು—ಭೋಜನಶಾಲೆಗೆ ಹೋಗಿ ಪರಿಚಾರಕರು ಊಟಕ್ಕೆ ಸಿದ್ಧತೆ ಮಾಡಿದಾರೋ ಇಲ್ಲವೋ ನೋಡಿ, ಬಾ. ನಮ್ಮಿಂದ ಈದಿನ ಎಲ್ಲರಿಗೂ ತಡವಾದಂತಾಯಿತು’

—ಎಂದು ಮಾಚಿಕಬ್ಬೆಯೇ ಆ ಮಾತು ಮುಂದೆ ಬೆಳೆಯುವುದನ್ನು ತಪ್ಪಿಸಿ, ಮಗಳನ್ನು ಅಲ್ಲಿಂದ ಕಳಿಸಿದಳು.

’ನಾನೇನಾದರೂ ತಪ್ಪಾಡಿದ್ದರೆ, ತನ್ನ ದುಡುಕನ್ನು ಮನ್ನಿಸಿ ಅಪ್ಪಾಜಿ. ಅವ್ವೆ—ನೀನೂ ಬೇಸರಮಾಡಿಕೊಳ್ಳಬೇಡ.’

—ಎಂದು ತಾಯಿತಂದೆಗಳಿಬ್ಬರನ್ನೂ ಬೇಡಿ, ತಾಯಿ ತನಗೆ ನೇಮಿಸಿದ ಕೆಲಸವನ್ನು ಮಾಡಲು ಹೋದಳು ಶಾನ್ತಲೆ.

ಮನೆಯೊಳಗೆ ಕಣ್ಣುಮರೆಯಾದ ಮಗಳನ್ನೇ ನೋಡುತ್ತಿದ್ದು ಬಳಿಕ ಹೇಳಿದ ಮಾರಸಿಂಗಮಯ್ಯ—

’ನೀನೇನಾದರೂ ಅನ್ನು ಮಾಚಿ—ಶಾನ್ತಲೆಯ ಮಾತು ಸುಳ್ಳಲ್ಲ. ಚಕ್ರವರ್ತಿಗಳು ಈ ಕೆಲಸ ಮಾಡಿದ್ದು ಒಳ್ಳೆಯದಲ್ಲ’

’ಅದೆಲ್ಲಾ ದೊಡ್ಡವರ ಮಾತು ನಮಗೇಕೆ? ಯಾರಿಗೆ ದುಃಖವಾದರೂ ನಾವು ಮಾಡಬಹುದಾದದ್ದು ಎರಡು ಹನಿ ಕಣ್ಣೀರು ಹಾಕುವುದು. ಅದೆಲ್ಲಿಯಾದರೂ ಹೋಗಲಿ. ಬಲವಂತವಾಗಿ ಮಾತನಾಡಿಸಿದರೂ ಎರಡು ಮಾತನಾಡದ, ಈ ಹುಡುಗಿಗೆ ಈ ದಿನ ಇಷ್ಟು ಮಾತಾಡುವ ಬುದ್ಧಿ ಎಲ್ಲಿಂದ ಬಂತು?’

—ಮಾಚಿಕಬ್ಬೆ ಮಗಳ ಮಾತಿಗೆ ಅಚ್ಚರಿ ಪಡುತ್ತಾ ಕೇಳಿದಳು.

# ೯

ಮಾಚಿಕಬ್ಬೆ ತನ್ನ ಅಚ್ಚರಿಯಲ್ಲಿ ಪತಿಯನ್ನು ಕೇಳಿದ ಪ್ರಶ್ನೆಯೇ ಶಾನ್ತಲೆಯ ಮನದಲ್ಲೂ ಮಿಡಿಯುತ್ತಿತ್ತು—

'ಎಂದೂ ಇಲ್ಲದೆ ನಾನೇಕೆ ಇಂದು ಇಷ್ಟು ಮಾತಾಡಿದೆ?'

ತನ್ನ ಅತಿಮಾತಿನಿಂದ ತಂದೆ ತಾಯಿಗಳಿಗೆ ಬೇಸರವಾಯಿತೇನೋ ಎಂಬ ಅಳುಕು ಶಾನ್ತಲೆಯಲ್ಲಿ ಆ ಪ್ರಶ್ನೆಯನ್ನು ಪ್ರೇರೇಪಿಸಿತ್ತು.

'ನಾನಾಡಿದುದು ತಪ್ಪೇ?'

ಬಸದಿಯಲ್ಲಿ ದಾಸಿ ಹೇಳಿದ ಅನಿರೀಕ್ಷಿತವಾದ ಸುದ್ದಿಯನ್ನು ಕೇಳಿ ಏಚಲಾದೇವಿಯ ಮುಖ ಮೇಘಾಚ್ಛಾದಿತ ಚಂದ್ರನಂತೆ ಕಳೆಗುಂದಿ, ಎಲ್ಲ ಸಂಯಮವನ್ನೂ ಮೀರಿ, ಆಕೆಯ ಕಣ್ಣುಗಳಲ್ಲಿ ಕೆಳಗುರುಳದಂತೆ ತಡೆಹಿಡಿದ ಕಂಬನಿಗಳು ಹೊಳೆದಾಗಲೇ ಶಾನ್ತಲೆಗೆ, ಏಚಲಾದೇವಿಯ ಕಣ್ಣೀರಿಗೆ ಕಾರಣನಾದ ಚಕ್ರವರ್ತಿಯ ಮೇಲೆ ಸಿಟ್ಟು ಬಂದಿತ್ತು.

ಚಕ್ರವರ್ತಿಗಳು ಈ ಕೆಲಸವನ್ನು ಏಕೆ ಮಾಡಿದರೋ, ಆದು ಸರಿಯೋ ತಪ್ಪೋ ಅದೊಂದೂ ಶಾನ್ತಲೆಗೆ ತಿಳಿದಿರಲಿಲ್ಲ, ಆಕೆಗೆ ತಿಳಿದಿದ್ದುದಿಷ್ಟೆ—ಏಚಲಾದೇವಿ ಒಳ್ಳೆಯವರು.

ಏಚಲಾದೇವಿ ಬಳ್ಳಿಗಾಮೆಗೆ ಬಂದ ದಿನ, ತನ್ನ ತಾಯಿಯೊಂದಿಗೆ ಆಕೆಯನ್ನು ಕಂಡಾಗ ಏಚಲಾದೇವಿ ಮಾಚಿಕಬ್ಬೆಯೊಂದಿಗೆ, ಶಾನ್ತಲೆಯೊಂದಿಗೆ ಆಡಿದ ಎರಡು ವಿಶ್ವಾಸದ ಮಾತು, ಶಾನ್ತಲೆಯ ಹೃದಯವನ್ನು ಸಂಪೂರ್ಣವಾಗಿ ಗೆದ್ದಿತ್ತು.

*           *           *           *           *           *

ಶ್ರೀಮದ್ರಾಜಧಾನಿ ಎನ್ನಿಸಿಕೊಂಡ ಬಳ್ಳಿಗಾಮೆ, ಅದರೊಂದಿಗೆ ಸಕಲ ಸಮಯದವರಿಗೂ ದರ್ಶನೀಯವಾದ ಪುಣ್ಯಕ್ಷೇತ್ರವಾಗಿದ್ದುದರಿಂದ ಅಲ್ಲಿಗೆ ದಿನಕ್ಕೊಬ್ಬರು ಯಾರಾದರೂ ದೊಡ್ಡವರು ಬರುತ್ತಿದ್ದರು. ಹಾಗೆ ಬಂದ ಹಲವು ನಾಡಿನ ಮಂಡಲೇಶ್ವರರನ್ನೂ, ಅವರ ಮನೆಯ ಹೆಂಗಸರನ್ನೂ ಶಾನ್ತಲೆ ಎಷ್ಟೋ ಬಾರಿ ಬಳ್ಳಿಗಾಮೆಯ ಮಠಗಳಲ್ಲಿ, ದೇವಮಂದಿರಗಳಲ್ಲಿ ಕಂಡಿದ್ದಳು. ಎಷ್ಟೋವೇಳೆ ಅಂಥವರೊಂದಿಗೆ ಮಾತನಾಡುವ ಸಂದರ್ಭವೂ ಬಂದಿತ್ತು. ಅಂಥ ಒಂದೊಂದು ಸಂದರ್ಭದಲ್ಲೂ ಆ ಹೆಂಗಸರನ್ನು ಕಂಡಾಗ, ಅವರ ಮಾತನ್ನು ಕೇಳಿದಾಗ ಶಾನ್ತಲೆಗೆ ಏಕೋ ಅವರ ನಡೆ ನುಡಿ ಅಸಹಜ ಎನಿಸಿತ್ತು. ಒಮ್ಮೆ ಒಬ್ಬ ಮಂಡಲಾಧೀಶ್ವರನ ಮಡದಿ, ತಾನು ಉಳಿದವರೊಂದಿಗೆ ಸರಳವಾಗಿ ಮಾತನಾಡುವುದಿರಲಿ, ನೋಡುವುದೂ ಮಹೋಪಕಾರವೆಂಬ ರೀತಿಯಲ್ಲಿ ವರ್ತಿಸಿದಾಗ ಶಾನ್ತಲೆ, ತನ್ನ ತಾಯಿಯನ್ನು—

'ಅವ್ವೆ, ಆಕೆಯ ಕತ್ತನ್ನೇನು ದೇವರು ಕಲ್ಲಿನಲ್ಲಿ ಕಡೆದಿದಾನೆಯೇ? ಅಥವಾ ಕಣ್ಣು ಹೊರಳಿದ ಕಡೆ ಕತ್ತು ತಿರುಗುವುದಕ್ಕಾದಂಥ ವಾಯು ನೋವೇನಾದರೂ ಆಕೆಗೆ ಬಂದಿದೆಯೋ?'

—ಎಂದು ಕೇಳಿ ತಾನೂ ನಕ್ಕು, ಮಾಚಿಕಬ್ಬೆಯನ್ನೂ ನಗಿಸಿದ್ದಳು. ಮಗಳ ಮಾತುಕೇಳಿ ನಕ್ಕ ಮಾಚಿಕಬ್ಬೆ—

'ಅದು ಕಲ್ಲಿನ ಕತ್ತೂ ಅಲ್ಲ, ವಾಯು ಜಾಡ್ಯವೂ ಅಲ್ಲ. ಅದು ಗಾಂಭೀರ್ಯ ವ್ಯಾಧಿ. ನಾಳೆ ನೀನೂ ಒಬ್ಬ ಯಾರಾದರೂ ಮಂಡಲಾಧೀಶ್ವರನೋ, ಸಚಿವ ಸಾಮನ್ತರನ್ನೋ ಕೈಹಿಡಿದಾಗ ನಿನಗೂ ಈ ಕತ್ತು ಆಡದ ವ್ಯಾಧಿ ಬರುತ್ತದೆ'

—ಎಂದಿದ್ದಳು ನಗುತ್ತಲೇ.

'ಊಹೂ ನಾನು ಸಾಮನ್ತರ ಮಡದಿಯಿರಲಿ, ಸಾಮ್ರಾಟರ ಮಹಿಷಿಯಾದರೂ ಈ ಹೊಲಸು ಜಾಡ್ಯ ನನಗೆ ಬರದಂತೆ ನೋಡಿಕೊಳ್ಳುತ್ತೇನೆ. ಗಂಡನಿಗೆ ರಾಜ್ಯಾಧಿಕಾರವಾದರೆ ಇವರ ತಲೆಗೇನು ಬಂಗಾರದ ಕೋಡು ಬರುತ್ತದೆಯೇ? ವಿಚಿತ್ರ ಜನ! ಇಂಥವರಿಂದ ಎಷ್ಟು ದೂರವಿದ್ದರೆ ಅಷ್ಟು ಮೇಲು'

—ಎಂದಿದ್ದಳು ಶಾನ್ತಲೆ.

ಶ್ರೀಮಂತರ ಮನೆಯ ಹೆಣ್ಣುಗಳ ಬಗ್ಗೆ ಆ ಭಾವನೆಯಿದ್ದ ಶಾನ್ತಲೆಗೆ, ಚಾಲುಕ್ಯ ಸಾಮ್ರಾಜ್ಯದ ಮಹಾಮಂಡಲಾಧೀಶ್ವರರೊಬ್ಬರು, ತಮ್ಮ ಮಡದಿ, ಮಕ್ಕಳೊಂದಿಗೆ ತಮ್ಮ ಮನೆಗೇ ಅತಿಥಿಗಳಾಗಿ ಬರುತ್ತಾರೆ ಎಂದು ಕೇಳಿದಾಗ 'ಮನೆಯಲ್ಲಿ ನಾವೂ ಹಾಯಾಗಿ ನಕ್ಕುನಲಿಯುವುದಕ್ಕೆ ವಿಘ್ನವಾಗಿ ಇವರೇಕೆ ಬರುತ್ತಾರೋ?' ಎನಿಸಿತ್ತು.

ಏಚಲಾದೇವಿ ಬಳ್ಳಿಗಾಮೆಗೆ ಬಂದಾಗ, ಮಾಚಿಕಬ್ಬೆ ಮಗಳಿಗೆ—

'ಬಾ, ಹೋಗಿ ಮಾತನಾಡಿಸಿಕೊಂಡು ಬರೋಣ.'

—ಎಂದಾಗ ಆ ಭಾವನೆಯಿಂದಲೇ ಶಾನ್ತಲೆ—

'ಬಡವರ ಕಣ್ಣು ಬಿದ್ದರೆ ದೃಷ್ಟಿಯಾಗುವ ಈ ಶ್ರೀಮಂತರ ಸಹವಾಸ ನನಗೆ ಬೇಡ ಅವ್ವೆ. ಎಷ್ಟು ಮಾತಾಡಿದೆ, ಅದರಲ್ಲಿ ಎಷ್ಟು ಹೆಚ್ಚಾಯಿತು. ಎಷ್ಟು ಕಡಿಮೆಯಾಯಿತು ಎಂದು ಲೆಕ್ಕ ಹಾಕಿಕೊಳ್ಳುತ್ತಾ ಮಾತನಾಡುವುದು ನನಗೆ ಬರದು. ನೀನೇ ಹೋಗಿ ಬಾ'

—ಎಂದಿದ್ದಳು.

’ಹಾಗಲ್ಲ. ಮನೆಗೆ ಬಂದವರನ್ನು ಹೋಗಿ ಮಾತನಾಡಿಸಿಕೊಂಡು ಬರಬೇಕಾದದ್ದು ನಮ್ಮ ಧರ್ಮ. ಅವರು ಮನಸ್ಸು ಬಿಚ್ಚಿ ಮಾತನಾಡಿದರೆ ಒಳಿತು, ಇಲ್ಲವಾದಲ್ಲಿ ನಮ್ಮ ಕರ್ತವ್ಯ ತೀರಿತು ಎಂದು ತೃಪ್ತಿ ಪಟ್ಟುಕೊಂಡು ಬರಬೇಕು ಹಾಗೆಲ್ಲಾ ಮಾತನಾಡುವುದು ಸರಿಯಲ್ಲ.’

—ಎಂದು ಮಗಳಿಗೆ ಕರ್ತವ್ಯ ಬೋಧಿಸಿ, ಅವಳನ್ನು ಏಚಲಾದೇವಿಯ ದರ್ಶನಕ್ಕೆ ಕರೆದುಕೊಂಡು ಹೋಗಿದ್ದಳು ಮಾಚಿಕಬ್ಬೆ.

ತಾಯ ಒತ್ತಾಯಕ್ಕೆ ಕಟ್ಟುಬಿದ್ದು ಹೋಗುವಾಗಲೂ ಶಾನ್ತಲೆ ’ಆಕೆ ತಾನು ಮಂಡಲಾಧೀಶ್ವರನ ಮಡದಿ ಎಂಬ ಬಿಗುಮಾನವನ್ನು ಬಿಟ್ಟು ಮಾತನಾಡಿಸಿದರೆ, ಮಾತನಾಡುವುದು. ಇಲ್ಲವಾದರೆ ಶಾನೂ ಮಾತುಬರದ ಗೊಂಬೆಯಂತಿದ್ದು ಬರುವುದು’ ಎಂದುಕೊಂಡೇ ಹೋಗಿದ್ದಳು.

ಆದರೆ ಏಚಲಾದೇವಿಯನ್ನು ಕಂಡ ಬಳಿಕ, ಆಕೆಯ ಮಾತುಗಳನ್ನು ಕೇಳಿದ ಬಳಿಕ, ಶಾನ್ತಲೆ ಏಚಲಾದೀವಿಯ ಸರಳ ಸಹಜ ಮಾರ್ದವತೆಗೆ ಮರುಳಾಗಿ, ಹೂವನ್ನೂ ಒಪ್ಪಿಸಿದಂತೆಯೇ ತನ್ನ ಹೃದಯವನ್ನೂ ಪಸಾಯನ ದಾನ ನೀಡಿ ಬಂದಿದ್ದಳು. ಏಚಲಾದೇವಿಯೊಂದಿಗೆ ಮಾತನಾಡಿದಾಗ ಆಕೆಯ ಬಗ್ಗೆ ಮೂಡಿದ ಅಭಿಮಾನವನ್ನು ಹೃದಯದಲ್ಲಿ ಬೈತಿಡಲಾಗಿದೆ—

’ಅವ್ವೆ ದೇವರು ಅಧಿಕಾರ, ಶ್ರೀಮಂತಿಕೆಯನ್ನು ಕೊಟ್ಟರೆ ಇಂಥವರಿಗೆ ಕೊಡಬೇಕು. ಇಂಥವರಿಗೆ ಪದವಿ ಬಂದರೆ ಚಿನ್ನದ ಹೂವಿಗೆ ಪರಿಮಳ ಬಂದಂತಾಗುತ್ತದೆ, ಗುಣವಿಲ್ಲದವರ ಅಧಿಕಾರ-ಕೋಡಗಕ್ಕೆ ಕಿರೀಟವಿಟ್ಟಂತೆ. ಅದನ್ನೇನು ಮಾಡಬೇಕು?’

—ಎಂದು ತನ್ನ ತಾಯಿಯ ಮುಂಡೆ ಆಡಿ ತೋರಿಸಿಕೊಂಡಿದ್ದಳು.

'ಏಕೆ—ಅವರು ನಿನ್ನ ರೂಪವನ್ನು ಮೆಚ್ಚಿಕೊಂಡರು ಎಂದು ನೀನು ಅವರ ಗುಣವನ್ನು ಹೊಗಳುತ್ತೀಯೋ?'

—ಎಂದು ಮಾಚಿಕಬ್ಬೆ ತನ್ನನ್ನು ಕೀಟಲೆ ಮಾಡಿದಾಗ

'ಸತ್ಯವಾಗಿಯೂ ಇಲ್ಲ ಅವ್ವೆ ನನ್ನ ರೂಪವೇನು ಮಹಾ. ಹುಡುಕಿದರೆ ನನ್ನಂಥವರು ಲಕ್ಷ ಜನ ಸಿಕ್ಕಾರು. ಅವರ ಕಣ್ಣಿಗೆ ತನ್ನ ರೂಪು ಹೆಚ್ಚಿನದು ಎನಿಸಿದರೆ ಅದಕ್ಕೆ ಕಾರಣ ನನ್ನ ಅಂದವಲ್ಲ, ಮಣ್ಣನ್ನು ಬಂಗಾರ ಮಾಡುವ ಅವರ ಒಳ್ಳೆಯತನ.'

—ಎಂದಿದ್ದಳು ಶಾನ್ತಲೆ.

'ನಿಜ ಕಣೆ-ನಿನ್ನ ಮಾತು ನಿಜ. ನಿನಗೆ ಅಂಥ ಅತ್ತೆ ಸಿಕ್ಕಿದರೆ ಸಾಕು ಎಂದೇ ನಾನು ದೇವರನ್ನು ದಿನವೂ ಬೇಡುವುದು. ಈ ಲೋಕದಲ್ಲಿ ಶ್ರೀಮಂತಿಕೆ ಅಪರೂಪವಲ್ಲ ಶಾನ್ತಲಾ, ಆದರೆ ಇಂಥ ಒಳ್ಳೆತನ, ಸಜ್ಜನಿಕೆ ಮಾತ್ರ ಬಹು ಅಪರೂಪದ ವಸ್ತು'

—ಎಂದು ಮಾಚಿಕಬ್ಬೆ ಮಗಳ ಮಾತಿಗೆ ತನ್ನ ಸಮ್ಮತಿ ಸೂಚಿಸಿದ್ದಳು.

* * * * * *

ಅಷ್ಟು ಒಳ್ಳೆಯ ಹೆಂಗಸು ಏಚಲಾದೇವಿ!

ಯಾವ ಕಾರಣಕ್ಕೇ ಆಗಲಿ, ಅಂಥವರ ಕಣ್ಣಿನಲ್ಲಿ ನೀರು ಹಾಕಿಸಿದ ಚಕ್ರವರ್ತಿ ಕೆಟ್ಟವರು!

ತಮ್ಮ ಜೊತೆಗೆ ಹೂವು ಆರಳಿದ ಬೆಳಗಿನ ಬಳ್ಳಿಯಂತೆ ನಗುತ್ತಾ ಬಸದಿಗೆ ಬಂದ ಏಚಲಾದೇವಿ, ಆ ದುರ್ವಾರ್ತೆಯನ್ನು ಕೇಳಿ, ಬಿಸಲಿಗೆ ಬಿದ್ದ ಪಾರಿಜಾತಪುಷ್ಪದಂತೆ ಬಾಡಿದ ಮುಖ ಮಾಡಿಕೊಂಡು, ಆ ಸುದ್ದಿ ತಿಳಿದೂ

ತಿಳಿಯದಂತೆ, ನಗಲಾಗದಿದ್ದರೂ ನಗಲೆತ್ನಿಸಿದಾಗ, ಶಾನ್ತಲೆಗೆ ಏಚಲಾದೇವಿಯ ನಗೆಯನ್ನು ಕೊಲೆ ಮಾಡಿದ ಚಕ್ರವರ್ತಿಯ ಮೇಲೆ ಇನ್ನಿಲ್ಲದಷ್ಟು ಸಿಟ್ಟು ಬಂದಿತ್ತು.

'ನಾನು ಗಂಡಸಾಗಿ ಹುಟ್ಟಿದ್ದಿದ್ದರೆ ಹೀಗೇ ಹೋಗಿ ಚಕ್ರವರ್ತಿಗಳ ಕೆನ್ನೆಗೆ ಹೊಡೆದು 'ಇಂಥ ತಪ್ಪೇಕೆ ಮಾಡಿದಿರಿ. ತಿದ್ದಿಕೊಳ್ಳಿ' ಎಂದೇ ಹೇಳುತ್ತಿದ್ದೆ. ಖಂಡಿತ ಹೀಗಾಗಲು ಬಿಡುತ್ತಿರಲಿಲ್ಲ' ಎಂದು ಕೊಂಡು ಕುದಿಯುತ್ತಲೇ ಬಸದಿಯಿಂದ ಮನೆಗೆ ಹಿಂದಿರುಗಿದ್ದಳು ಶಾನ್ತಲೆ ಏಚಲಾದೇವಿಯ ಸಜ್ಜನಿಕೆಗೆ ಮನಸೋತ ಶಾನ್ತಲೆಯ ಮನಸ್ಸಿನಲ್ಲಿ ಒಂದೇ ಮಾತು ಕಟೆಯುತ್ತಿತ್ತು—

'ಇಂಥವರಿಗೆ ಹೀಗಾಗಬಾರದು. ಏನೇ ಕಾರಣವಿದ್ದರೂ ಚಕ್ರವರ್ತಿಗಳು ಹೀಗೆ ಮಾಡಬಾರದಾಗಿತ್ತು.'

ಈ ಭಾವನೆ ಶಾನ್ತಲೆಯ ಮನಸ್ಸಿನಲ್ಲಿ ತುಂಬಿದ್ದುದರಿಂದಲೇ ಆಕೆ, ಮಾರಸಿಂಗಮಯ್ಯ ಅಂದಾದುದಕ್ಕೆ ಕಾರಣವಾಗಿದ್ದಿರಬಹುಗಾದ ಓಲಗದಲ್ಲಾದ ಘಟನೆಯನ್ನು ವಿವರಿಸಿದಾಗ 'ಇಂಥ ಚಕ್ರವರ್ತಿ, ಪ್ರಧಾನಿಗಳಿಗೆ ವಿಷ್ಣುವರ್ಧನ ಮಾಡಿದ ಮರ್ಯಾದೆ ಯುಕ್ತವಾದದ್ದೇ' ಎನಿಸಿತು. ಒಳ್ಳೆಯವರ ಕಣ್ಣಿನಲ್ಲಿ ನೀರುತರಿಸುವ ಚಕ್ರವರ್ತಿಗಳಿಗೆ ಕುಮಾರರು ತಕ್ಕ ಶಿಕ್ಷೆಯನ್ನೇ ಮಾಡಿದರು ಎಂಬ ಭಾವನೆಯೊಂದಿಗೆ, ಎಲ್ಲಿಯೂ ಸಾಹಸವನ್ನು ಕಂಡುಮೆಚ್ಚುವ ಯೌವ್ವನದ ಸಹಜ ಉತ್ಸಾಹವೂ ಬೆರೆತು ಶಾನ್ತಲೆಯ ಬಾಯಿಂದ ಆ ಮಾತುಗಳನ್ನು ಆಡಿಸಿದ್ದವು.

ಈಗ ಮಾತು ಆಡಿಯಾದ ಮೇಲೂ, ಮನದಲ್ಲಿ 'ನನ್ನಿಂದ ಅನೌಚಿತ್ಯವೇನಾದರೂ ಆಯಿತೇ?' ಎಂಬ ಪ್ರಶ್ನೆ ಮೂಡಿದಾಗಲೂ ಶಾನ್ತಲೆಗೆ ತಾನು ತಪ್ಪು ಮಾತೇನೂ ಆಡಲಿಲ್ಲವೆಂದೇ ತೋರಿತು.

'ಅದು ಸರಿ. ಕುಮಾರರು ಹಾಗೆ ಮಾಡಿದುದೂ ಸರಿ. ನಾನು ಹಾಗೆ ಆಡಿದುದೂ ಸರಿ ಅಧಿಕಾರಪೀಠದಿಂದಾದ ಅವಮಾನವನ್ನು ಬಾಯಿಮುಚ್ಚಿ ಸಹಿಸುವ ಶುನಕತನಕ್ಕಿಂತಲೂ, ಇಂಥ ಅವಿಧೇಯತೆ ಉದ್ಧಟತನ—ಅದಕ್ಕೆ ಲೋಕ ಏನಾದರೂ ಹೆಸರಿಡಲಿ—ಅದೇ ಅಭಿನಂದನಾರ್ಹವಾದದ್ದು. ಲೋಕವನ್ನೆಲ್ಲಾ ಗೆದ್ದು ಬಾಳುವ ಚಕ್ರವರ್ತಿಗಳ ಇದಿರೂ ತಲೆಬಾಗದ ಈ ಸ್ವಾಭಿಮಾನಕ್ಕೆ, ಮನ್ನಣೆ ಕೊಡದೆ ಹೋದರೆ, ಅದರಿಂದ ಜಗತ್ತಿಗೇ ಲೋಪವೇ ಹೊರತು, ಆ ಪೌರುಷಕ್ಕೇನೂ ಕಲಂಕವಲ್ಲ.'

ಆದುದೆಲ್ಲವನ್ನೂ ಯೋಚಿಸುತ್ತಾ ಯೋಚಿಸುತ್ತಾ ಶಾನ್ತಲೆಗೆ ಹಾಗೆಂದೇ ತೋರಿತು.

ಹಾಗೆಯೇ ಅದುವರೆಗೂ ಅವಳು ಒಮ್ಮೆಯೂ ಸರಿಯಾಗಿ ನೋಡದ, ಒಮ್ಮೆಯೂ ಮಾತನಾಡಿಸದ ವಿಷ್ಣುವರ್ಧನನ ವಿಷಯದಲ್ಲಿ ಅಪಾರ ಅಭಿಮಾನ, ಗೌರವಗಳು ಮೂಡಿದವು. ಅದರೊಂದಿಗೆ 'ಒಮ್ಮೆ ಕುಮಾರರನ್ನು ಕಂಡು ಮಾತಾಡಿಸಿ, 'ನಿಮ್ಮ ಧೀರತೆ ನನಗೆ ಮೆಚ್ಚಿಗೆಯಾಯಿತು' ಎಂದು ಹೇಳಬೇಕು' ಎನಿಸಿತು.

ವಿಷ್ಣುವರ್ಧನನನ್ನು ನೋಡಬೇಕು, ಮಾತನಾಡಿಸಬೇಕು ಎನಿಸಿದಾಗ, ಏಕೋ ಇದ್ದಕ್ಕಿದ್ದ ಹಾಗೇ ಮೈಯೊಳಗಿನ ರಕ್ತವೆಲ್ಲವೂ ಮುಖಕ್ಕೆ ಏರಿದಂತಾಗಿ, ತಾನು ತನ್ನ ಮನಸಿನೊಳಗೆ ಆಡಿಕೊಂಡ ಮಾತೂ ಇತರರಿಗೆ ಕೇಳಿಸಿತೇನೋ ಎನಿಸಿ, ಬೆದರು ಗಣ್ಣುಗಳಿಂದ ಸುತ್ತಲೂ ನೋಡಿ, ತಾಯಿ ಹೇಳಿದ ಕೆಲಸ ನೆನಪಾಗಿ, ಏಚಲಾದೇವಿ ಮೊದಲಾದವರು ಭೋಜನಕ್ಕೇಳಲು ಸಿದ್ಧವಾಗಿರುವರೋ ಇಲ್ಲವೋ ಎಂದು ನೋಡಿ ಬರಲು, ಅವರ ಬಿಡಾರದತ್ತ ನಡೆದಳು.

# ೧೦

ಶಾನ್ತಲೆ ಏಚಲಾದೇವಿಯ ಕೊಠಡಿಯ ಬಳಿ ಬಂದಾಗ, ಅರೆ ಮುಚ್ಚಿದ ಬಾಗಿಲ ಹಿಂಬದಿಯಿಂದ ಒಳಗೆ ಯಾರೋ ಗಂಡಸರು ಮಾತನಾಡುವ ಧ್ವನಿ ಕೇಳಿಸಿ, ಹಾಗೇ ನಿಂತಳು.

ಒಳಗೆ ಗಂಡಸರಿರುವರೆಂದು ತಿಳಿದ ಬಳಿಕ ಆಕೆ ನೇರವಾಗಿ ಒಳಗೆ ಪ್ರವೇಶಿಸುವಂತಿರಲಿಲ್ಲ. ಹಾಗೇ ತಾನು ಬಂದ ಸುದ್ದಿಯನ್ನು 'ಒಳಗೆ ತಿಳಿಸಿ' ಎಂದು ಹೇಳುವುದಕ್ಕೆ ಸನಿಹದಲ್ಲಾರೂ ಪಡಿಯರತಿಯರು ಕಾಣಲಿಲ್ಲ. ಒಳಗೆ ಹೋಗಲಾಗದೆ, 'ಭೋಜನಕ್ಕೆಲ್ಲವೂ ಅಣಿಯಾಗಿದೆ' ಎಂದು ಹೇಳಿ ಕಳಿಸುವುದಕ್ಕೆ ದಾಸಿಯರೂ ಕಾಣದೆ ಏನು ಮಾಡುವುದೆಂದು ಶಾನ್ತಲೆ ಯೋಚಿಸುತ್ತಾ ನಿಂತಿರುವಾಗಲೇ ಒಳಗೆ ಮಾತನಾಡುತ್ತಿದ್ದ ಪುರುಷಧ್ವನಿ, ಧ್ವನಿಯನ್ನು ಎತ್ತರಿಸಿ ಹೇಳಿದುದು ಕಿವಿಗೆ ಬಿತ್ತು—

'ನೀವು ಕಣ್ಣೀರಿಡಬೇಡಿ ಅವ್ವೆ, ನಿಮ್ಮ ಕಣ್ಣೀರಿನ ಹನಿ ಹನಿಗೂ, ನಮ್ಮ ವಿರೋಧಿಗಳ ರಕ್ತದ ಹೊಳೆಯನ್ನೇ ಹರಿಸಿ, ನಿಮ್ಮ ಮುಖದ ಕಂಬನಿಯ ಕರಿಯನ್ನು ತೊಳೆಯಬಲ್ಲ ಶಕ್ತಿ ನಮ್ಮ ತೋಳುಗಳಲ್ಲಿದೆ. ನನ್ನ ಉದ್ಧಟತನದಿಂದ ಅಪ್ಪಾಜಿಯವರಿಗೆ, ತಾತಂದಿರಿಗೆ ಈ ಅಪಮಾನವಾಯಿತೆಂದು ತಾನೇ ನಿಮಗಿಷ್ಟು ವ್ಯಥೆ. ಆಯಿತು—ಮಗನಾಗಿ ಹುಟ್ಟಿ ನಾನು ನಿಮಗೆ ಇಷ್ಟು ದುಃಖಕ್ಕೆ ಕಾರಣವಾದೆ. ಆದರೆ ಈ ದಿನ ನಿಮ್ಮ ಪಾದ ಮುಟ್ಟಿ, ಶಪಥ ಮಾಡಿ ಹೇಳುತ್ತೇನೆ ತಾಯಿ—ಇಂದು ನಿಮಗೆ ಅಪಮಾನ ಮಾಡಿದ ಸಾಮ್ರಾಟರ ಸೊಕ್ಕನ್ನು ಮುರಿಯದಿದ್ದರೆ ನಾನು ವಿಷ್ಣುವರ್ಧನನಲ್ಲ. ನಿಮಗೆ ಅಪಮಾನವಾದ ಇದೇ ಬಳ್ಳಿಗಾಮೆಯ ಬಸದಿಯಲ್ಲಿ ನಿಮ್ಮನ್ನು ಮಹಾರಾಜ್ಞಿಯನ್ನಾಗಿ ಮಾಡಿ ಮೆರಸದೆ ಹೋದರೆ ನಾನು ನಿಮ್ಮ ಮಗನಲ್ಲ ಇಂದು ತಮ್ಮ ಪದವಿಯ

ದುರಹಂಕಾರದಿಂದ ಬೀಗುತ್ತಿರುವವರು, ನಮ್ಮ ಹೆಸರು ಕೇಳಿ ನಡುಗಿ ತಲೆಮರೆಸಿಕೊಳ್ಳುವಂತೆ ಮಾಡದಿದ್ದರೆ ನಾನು ವೀರ ಹೊಯ್ಸಳ ಸಂತಾನವಲ್ಲ. ಇಗೋ ಈ ಕಠಾರಿಕಾಳಿಯ ಸಾಕ್ಷಿಯಾಗಿ ಹೇಳುತ್ತೇನೆ— ಇಂದು ನಿಮಗಾದ ಒಂದು ಮಂಡಲಾಧಿಪತ್ಯದ ನಷ್ಟಕ್ಕಾಗಿ, ನೂರು ಮಂಡಲಾಧೀಶ್ವರರನ್ನು ಹೆಡೆಮುರಿ ಕಟ್ಟಿ ಬಿಗಿದು ತಂದು ನಿಮ್ಮ ಚರಣದಲ್ಲಿ ಕೆಡಹಿ, ಇಂದಾದ ಅಪಮಾನವನ್ನು ತೀರಿಸುತ್ತೇನೆ. ನನ್ನ ಮಾತನ್ನು ನಂಬಿ ಅವ್ವೆ—ನೀವು ಹಡೆದಿರುವುದು ಹೇಡಿ ಹುಳುವನ್ನಲ್ಲ, ಗಂಡುಮಗನನ್ನು.'

ಪರ್ವತಾಗ್ರದಲ್ಲಿ ದಟ್ಟಯಿಸಿದ ಕಾರ್ಗಾಲದ ಮುಗಿಲೋಳಿಯ ಸಾಲು ಮೊಳಗಿನಂತೆ ಕೇಳಿಸಿತ್ತು ಕೊಠಡಿಯ ಒಳಗೆ ಮಾತನಾಡಿದ ಗಂಡಸಿನ ಧ್ವನಿ, ಅದನ್ನು ಆಲಿಸುತ್ತಾ ನಿಂತ ಶಾನ್ತಲೆಯ ಕಿವಿಗಳಿಗೆ.

ಏನು ಧೀರತೆ, ಏನು ಸ್ವಪೌರುಷದ ಭರವಸೆ ಆ ಮಾತುಗಳನ್ನು ಆಡುವಾತನಿಗೆ! ಆ ಮಾತುಗಳು ನೊಂದ ಹೃದಯವನ್ನು ಯಾವುದೋ ಸುಳ್ಳು ಅಮಿಷ ತೋರಿ, ನಂಬಿಸಿ ಸಂತೈಸುವ ನುಡಿಗಳಂತಿರಲಿಲ್ಲ. ಗುರಿ ಬದ್ಧವಾದ ಕ್ರೋಧದ ಉಳಿ ಪೆಟ್ಟಿಗೆ ಸಿಡಿದ ಶಿಲಾಖಂಡಗಳಂತಿದ್ದವು ಒಂದೊಂದು ಮಾತೂ—ಲಕ್ಷ್ಯ ಶುದ್ಧಿಯುಳ್ಳ ಕೋವಿದ ಬಿಲ್ಗಾರ ಬಿಟ್ಟ ಬಾಣ, ಒಳಗೆ ಕುಳಿತು ಆ ಮಾತುಗಳನ್ನು ಕೇಳಿದ ಏಚಲಾದೇವಿಗಷ್ಟೇ ಅಲ್ಲ, ಆಕಸ್ಮಿಕವಾಗಿ ಆ ಮಾತುಗಳನ್ನು ಕೇಳಿದ ಶಾನ್ತಲೆಗೂ ಆ ಮಾತುಗಳನ್ನು ನಂಬಬಹುದು ಎಂದು ತೋರಿತು. 'ಆ ಮಾತುಗಳು, ಹೃದಯದಾಳದಿಂದ ಸಹಜವಾಗಿ ಹೊರಹೊಮ್ಮಿದ ಆ ನುಡಿಕಿಡಿಗಳು ಸುಳ್ಳಾಗುವುದಾದರೆ, ಜಗತ್ತಿನಲ್ಲಿ ಸತ್ಯವೆನ್ನುವುದು ಇರುವುದೇ ಸುಳ್ಳು' ಎಂದೇ ತೋರಿತು ಶಾನ್ತಲೆಗೆ.

ಹಾಗೇ ಆ ಮಾತುಗಳನ್ನು ಕೇಳಿ ಶಾನ್ತಲೆಗೆ ಕಾಲನ್ನು ನೆಲಕ್ಕೆ ಕೀಲಿಸಿದಂತಾಗಿ, ಹಾಗೆ ನಿಂತು ಕೇಳುವುದು ಅಸಭ್ಯತನದ ಪರಮಾವಧಿ ಎನಿಸಿದರೂ ಏಕೋ ಕಾಲುಗಳನ್ನು ಅಲ್ಲಿಂದ ಕೀಳುವುದಾಗಲಿಲ್ಲ. 'ಇದು ತಪ್ಪು, ತಪ್ಪು' ಎಂದು ಬುದ್ಧಿ ಸಾರಿ ಸಾರಿ ಹೇಳುತ್ತಿದ್ದರೂ, ಕಾಲನ್ನು ಚಲಿಸಲಾಗದಂತೆ ನೆಲಕ್ಕೆ ಬೆಸೆದವಳ ಹಾಗೆ ನಿಂತಳು.

'ಈ ಮಾತಿನಲ್ಲೇ ಇಷ್ಟು ಗಂಡಸುತನ ಇರುವಾಗ ಇನ್ನು ಈ ಮಾತನಾಡುವಾತ ನೋಡಲು ಹೇಗಿರಬಹುದು?' ಎಂದು ಮಾತು ಕೇಳಿ ಮನನೋತ ಶಾನ್ತಲೆಯ ಹೃದಯ ಆ ಧ್ವನಿಗೆ ಒಂದು ಆಕಾರವನ್ನು ಕಲ್ಪಿಸಲು ಯತ್ನಿಸುತ್ತಿತ್ತು.

ಇಂಥ ಮಾತನ್ನು, ಹೀಗೆ ಆಡುವಾತ ಪೀಚುಮೈಯವನಾಗಿರುವುದು ಸಾಧ್ಯವೇ ಇಲ್ಲ. ನಟುವರ ಮದ್ದಳೆಯೆಲ್ಲಾದರೂ ಸಮರಭೇರಿಯಂತೆ ಮೊಳಗುವುದು ಸಾಧ್ಯವೇ? ಈ ಮಾತನ್ನಾಡಿದಾತ, ಆ ಮಾತಿನ ಹೊಣೆಗಾರಿಕೆಯ ಭಾರವನ್ನು ಹೊರಬಲ್ಲ ಪೌರುಷದ ಪುತ್ಥಳಿಯೇ ಆಗಿರಬೇಕು. ಒಮ್ಮೆ ಚಿಕ್ಕಂದಿನಲ್ಲಿ ಶಾನ್ತಲೆ ತನ್ನ ತಾಯಿಯೊಂದಿಗೆ, ಶ್ರವಣಬೆಳುಗೊಳದ ತೀರ್ಥಕ್ಕೆ ಹೋಗಿದ್ದಾಗ ಅಲ್ಲಿ ಗೊಮ್ಮಟೇಶ್ವರನ ಭವ್ಯ ವಿಗ್ರಹವನ್ನು ನೋಡಿದ್ದಳು. 'ಮಹೋನ್ನತ ವೈರಾಗ್ಯವೇ ಇಲ್ಲಿ ಮೂರ್ತಿರೂಪವಾಗಿ ನಿಂತಿರುವಂತಿದೆ ಸ್ವಾಮಿಯ ವಿಗ್ರಹ' ಎಂದಿದ್ದಳು ಮಾಚಿಕಬ್ಬೆ—-ಆಗ. ಈ ಪೌರುಷದ ವಿಗ್ರಹವೂ ಅಷ್ಟೇ ಭವ್ಯವಾಗಿರಬೇಕು. ಅಂಥ ಮೈ ಇಲ್ಲದಿದ್ದರೆ ಇಂಥ ಮಾತು ಬರುವುದು ಸಾಧ್ಯವೇ?

ಶಾನ್ತಲೆ ಹೀಗೆ ಏನೇನೋ ಯೋಚಿಸುತ್ತಿರುವಾಗಲೇ ಮುಂದೆ ಮಾಡಿದ ಬಾಗಿಲು ಧಡಾರನೆ ತೆರೆದು ವಿಷ್ಣುವರ್ಧನ ಹೊರಬಂದು, ಬಾಗಿಲಿದಿರು ಕಣ್ಣಾಲಿಯೂ ಚಲಿಸದಂತೆ ಒಳಗಾಡುವ ಮಾತುಗಳನ್ನು ಕೇಳುತ್ತಾ ನಿಂತ ಶಾನ್ತಲೆಯನ್ನು ನೋಡಿದ.

ನೋಡುತ್ತಿದ್ದ ಹಾಗೇ ಆತನಿಗೆ ಇದಾರೋ ತಮ್ಮ ಮಾತುಗಳನ್ನು ಕದ್ದು ಕೇಳುವ ಸಲುವಾಗಿಯೇ ಬಂದು ನಿಂತಿದ್ದಾರೋ ಏನೋ, ಎನಿಸಿ ಸಿಟ್ಟು ಬಂದು ಗದ್ದರಿಸಿ ಕೇಳಿದ—

'ಯಾರು ನೀನು?'

ತಟಕ್ಕನೆ ಕೊಠಡಿಯ ಬಾಗಿಲು ತೆರದು ಹೊರಬಂದ ವಿಷ್ಣುವರ್ಧನನನ್ನು ಕಂಡು ಶಾನ್ತಲೆಯೂ ಅಷ್ಟೇ ಚಕಿತಳಾಗಿದ್ದಳು. ಆ ಅಚ್ಚರಿ, ಪರಪುರುಷನಿದಿರು ನಿಂತ ನಾಚಿಕೆ, ವಿಷ್ಣುವರ್ಧನ, ತನ್ನನ್ನು ಪ್ರಶ್ನಿಸಿದ ರೀತಿಯಿಂದ ಮೂಡಿದ ದಿಗಿಲು, ತಪ್ಪುಮಾಡುತ್ತಾ ಸಿಕ್ಕಿಬಿದ್ದಾಗಿನ ಪೇಚಾಟ— ಎಲ್ಲವೂ ಬೆರೆತು ಶಾನ್ತಲೆಯ ಮೈಯಲ್ಲಿ ಹರಿವ ರಕ್ತದ ವೇಗ ಹೆಚ್ಚಿ, ಮುಖ ಓಕುಳಿಯಲ್ಲಿ ಅದ್ದಿದಂತಾಗಿ, ಹಣೆಯ ಮೇಲೆ ಬೆವರುಹನಿ ಮೂಡಿದವು.

'ನಾನು... ನಾನು'

—ಎಂದು ಮುಂದೆ ಮಾತನಾಡಲಾಗದೆ ತೊದಲಿದಳು ಶಾನ್ತಲೆ.

ಅವಳು ತೊದಲುತ್ತಿರುವಾಗ ವಿಷ್ಣುವರ್ಧನನ ಕಣ್ಣುಗಳು ಆಕೆಯ ಮೊಗವನ್ನೇ ದಿಟ್ಟಿಸಿ ನೋಡುತ್ತಿದ್ದವು.

ಅಸ್ತಮಯ ಸೂರ್ಯನ ಕಿರಣಗಳ ಕೆಂಪುಂಡ ಮೋಡದ ತುಂಡಿನಂಥ ಆ ಚೆಲುವಾದ ಮುಖ, ಭಯದಿಂದ ಚಂಚಲವಾಗಿ ನಾಚಿಕೆಯಿಂದ ಮುಚ್ಚಲೆಳಸುವ ಹೊಳಪು ಗಣ್ಣುಗಳು, ನಸುಕಂಪಿಸುವ ಚೆಂದುಟಿಳು, ನಡುಗುವ ತುಟಿಗಳನ್ನು ಆಡದಂತೆ ಒತ್ತಿ ಹಿಡಿದ ಮುತ್ತಿನಂಥ ದಂತ, ಉಸಿರವೇಗಕ್ಕೆ ಏರಿಳಿವ ವಕ್ಷಸ್ಥಲ—

ನೋಡಿದ ಕೂಡಲೇ ಮೂಡಿದ ಸಿಟ್ಟಿನಲ್ಲಿ ಗಡುಸಾಗಿ ಸೆಟೆದ ವಿಷ್ಣುವರ್ಧನನ ಮೈ, ಭೀತಿಯಲ್ಲೂ ಮಿರುಗು ಪಡೆದ ಶಾನ್ತಲೆಯ ಸೌಂದರ್ಯದೀಪ್ತಿಯ ಇದಿರು ಮಯಣದಂತೆ ಮೃದುವಾಯಿತು. ಭೀತಿಯಲ್ಲಿ ಜಡವಾದ ಆ ಹೆಣ್ಣು ಮೈಯನ್ನು ನೇವರಿಸಿ 'ಹೆದರಬೇಡ ನಿನಗೇನಾದರೂ ನಾನಿದ್ದೇನೆ' ಎಂದು ಹೇಳಬೇಕು ಎನಿಸಿತು.

ಒಂದು ಗಳಿಗೆ ಕಣ್ಣೆದುರಿನ ಲಾವಣ್ಯ ಶರಧಿಗೆ ಮನಸೋತ ವಿಷ್ಣುವರ್ಧನನ ಹೃದಯ ಮರುಗಳಿಗೆಯೇ 'ಇಂಥ ರೂಪವತಿಯರನ್ನೇ ದೊರೆಗಳು ಗೂಢಚಾರಿಣಿಯರನ್ನಾಗಿ ನೇಮಿಸುವುದು' ಎಂಬುದು ನೆನಪಾಗಿ, ಮತ್ತೆ ಆತನ ಮೈ ಬಿರುಸಾಗಿ—

'ಹೂ, ಹೇಳು. ಯಾರು ನೀನು? ಇಲ್ಲೇನು ಮಾತು ಕೇಳಬೇಕೆಂದು ಬಂದೆ?'

—ಎಂದು ಗದ್ದರಿಸಿ ಕೇಳಿದ.

'ನನ್ನ ಪ್ರಶ್ನೆಗೆ ಉತ್ತರ ಕೊಡದಿದ್ದರೆ ನೀನಿಲ್ಲಿಂದ ಬದುಕಿ ಹೋಗಲಾರೆ' ಎಂಬ ಬೆದರಿಕೆಯ ಧ್ವನಿಯಲ್ಲಿ ಕೇಳಿಗ ವಿಷ್ಣುವರ್ಧನ.

ಆ ಮಾತನ್ನು ಕೇಳಿ ಶಾನ್ತಲೆಯ ನಾಲಗೆಯ ದ್ರವವೇ ಆರಿಹೋಯಿತು. ತುಟಿಗಳಲ್ಲಿ ಉಳಿದಿದ್ದ ಅಷ್ಟಿಷ್ಟು ಕೆಂಪು ಮಾಯವಾಗಿ ಕಣ್ಣುಗಳಲ್ಲಿ ತಟ್ಟನೆ ಕಂಬನಿ ಮೂಡಿತು. ಆ ಸಿಡಿಲಿನ ಇದಿರು ನಾನು ನುಡಿಯಲಾರೆ ಎಂದು ಮಾತು ಎಲ್ಲೋ ತಲೆತಪ್ಪಿಸಿಕೊಂಡು ಅವಿತಿತು.

'ನಾನು ... ನಾನು .'

—ಎಂದು ಮತ್ತೊಮ್ಮೆ ತೊದಲಿದಳು ಶಾನ್ತಲೆ, ಕೇಳಿಯೂ ಕೇಳಿಸದಷ್ಟು ಮಿದುವಾಗಿ, ನಡುಗುವ ಧ್ವನಿಯಲ್ಲಿ.

’ನಾನು... ನಾನು ಎಂದು ತೊದಲಿದರೇನಾಯಿತು. ತೊತ್ತೆ—ನೀನಾರೆಂದು ಬೊಗಳು. ಒಳ್ಳೆಯ ಮಾತಿನಿಂದ ಹೇಳುತ್ತೀಯೋ, ಅಥವಾ ನಾಲಿಗೆ ಸೀಳಿ ಬಾಯಿ ಬಿಡಿಸಬೇಕೋ?’

—ತಟಕ್ಕನೆ ಸೊಂಟದಲ್ಲಿದ್ದ ಕಠಾರಿಗೆ ಕೈಚಾಚಿ, ಬೆದರಿ ಬೆವರುತ್ತಿದ್ದ ಶಾನ್ತಲೆಯ ಕೈ ಹಿಡಿದು ಕೇಳಿದ ವಿಷ್ಣುವರ್ಧನ.

’ಯಾರದು ಬಿಟ್ಟಿಯಣ್ಣ? ಅದೇನು?’

—ಕೊಠಡಿಯೊಳಗೇ ತನ್ನ ಮಗ ಯಾರೊಂದಿಗೋ ಸಿಟ್ಟಾಗಿ ಮಾತನಾಡುತ್ತಿರುವುದನ್ನು ಕೇಳಿ ’ಯಾರೋ, ಏನಾಯಿತೋ?’ ಎಂದು ಚಿಂತಿಸುತ್ತಾ ಕೊಠಡಿಯಿಂದ ಹೊರಬಂದು ಕೇಳಿದಳು ಏಚಲಾದೇವಿ.

ಹೊರಗೆ ಬಂದು ನೋಡಿದಳು—

ತನ್ನ ಮಗ ಹೆಗ್ಗಡತಿ ಮಾಚಿಕಬ್ಬೆಯವರ ಮಗಳ ಕೈ ಹಿಡಿದು ಗದರಿಸುತ್ತಾ ನಿಂತಿದ್ದಾನೆ. ಆ ಹುಡುಗಿ ಭಯದಿಂದ ಬೆಂಡಾಗಿ ನಿಂತಿದ್ದಾಳೆ. ಹೀಗಾಗುವುದೂ ಉಂಟೆ? ಏಕೋ ಒಂದು ಗಳಿಗೆ ಆಕೆಗೆ ಆ ದೃಶ್ಯವನ್ನು ಕಂಡ ತನ್ನ ಕಣ್ಣನ್ನೇ ನಂಬುವುದು ಸಾಧ್ಯವಿಲ್ಲ ಎನಿಸಿತು. ಬೆಕ್ಕಸಬೆರಗಾಗಿ ಇಬ್ಬರನ್ನೂ ಹಾಗೇ ನಿಂತು ನೋಡಿದಳು, ಹಾಗೆ ನೋಡಿದಾಗ ಶಾನ್ತಲೆಯ ದೀರ್ಘವಾದ ಕಣ್ಣೆವೆಗಳ ಕೊನೆಯಿಂದ ಕೆನ್ನೆಯ ಮೇಲೆ ಧುಮುಕಿದ ಕಂಬನಿಯನ್ನು ಕಂಡು ಆ ಅಶ್ರುದರ್ಶನದಿಂದ ಮೂಡಿದ ವ್ಯಥೆಯಲ್ಲಿ ಮಗನ ಮೇಲೇ ಸಿಟ್ಟು ಬಂದು—

’ಛಿ, ಬಿಟ್ಟಿಯಣ್ಣ ಬಿಡು ಆಕೆಯ ಕೈಯನ್ನು, ಇದೇನು ಕೆಲಸ ಮಾಡುತ್ತಿದೀಯೆ?’

—ಎಂದು ಮಗನನ್ನು ಗದರಿಕೊಂಡು ಶಾನ್ತಲೆಯನ್ನು ಹಿಡಿದ ಅವನ ಕೈಯನ್ನು ಬಿಡಿಸಿ, ಅವಳನ್ನು ತನ್ನ ಪಕ್ಕಕ್ಕೆ ಕರದುಕೊಂಡು, ಆಕೆಯ ಮುಂಗೈಯನ್ನು ನೋಡಿದಳು.

ಶಾನ್ತಲೆಯ ಮೃದುವಾದ ಬಾಳೆಯ ದಿಂಡಿನಂಥ ಮುಂಗೈಯ ಮೇಲೆ, ವಿಷ್ಣುವರ್ಧನನ ಬೆರಳ ಗುರುತು ರಕ್ತದಲ್ಲದ್ದಿ ಬರೆದಂತಿತ್ತು. ಆ ಬೆರಳಗುರುತನ್ನು ನೋಡಿ ಏಚಲಾದೇವಿಗೆ ತನ್ನೆದೆಯ ಮೇಲೇ ಬರೆ ಎಳೆದಷ್ಟು ವ್ಯಥೆಯಾಯಿತು. ಆ ನೋವಿನಲ್ಲೇ ಹೇಳಿದಳು—

’ಕಂಡವರ ಮನೆಯ ಹುಡುಗಿಯೊಂದಿಗೆ ಇದೆಂಥ ಕಾಡುತನ. ನಿನ್ನ ಕೆಲಸಕ್ಕೆ ನಿನಗೇ ನಾಚಿಕೆಯಾಗಬೇಕು. ಹೆತ್ತವರಿಗೆ ಕೆಟ್ಟ ಹೆಸರು ತರುವ ಈ ದುರ್ಬುದ್ಧಿ ನಿನಗೆಂದಿನಿಂದ ಬಂತು?’

—ಸಿಟ್ಟಿನ ಉರಿಗಾರುವ ಕಣ್ಣುಗಳಿಂದ ಮಗನ ಮುಖವನ್ನೇ ನೋಡುತ್ತ ಕೇಳಿ, ಹಾಗೇ ಶಾನ್ತಲೆಯತ್ತ ತಿರುಗಿ, ಅವಳ ಮುಂಗೈಯನ್ನು ಮೃದುವಾಗಿ ನೇವರಿಸುತ್ತಾ—

’ತುಂಬಾ ನೋವಾಯಿತೇ ಕಂದಾ?’

—ಎಂದಳು ಕಂಬನಿಗರೆವ ಧ್ವನಿಯಲ್ಲಿ.

ತಾಯಿಯ ಸಿಟ್ಟಿನ ಮಾತು ಕೇಳಿ ವಿಷ್ಣುವರ್ಧನನಿಗೆ ಹತ್ತಾರು ಚಮ್ಮಟಿಗೆಯ ಏಟುತಿಂದಷ್ಟೇ ನೋವಾಗಿ, ಅದರೊಂದಿಗೆ ಆಕೆ ಶಾನ್ತಲೆಯಲ್ಲಿ ತೋರಿದ ಅಕ್ಕರೆಯಿಂದ ಅಚ್ಚರಿಯೂ ಆಗಿ, ಆ ನೋವು, ಆಶ್ಚರ್ಯಗಳೆರಡೂ ಬೆರತ ಧ್ವನಿಯಲ್ಲಿ ಕೇಳಿದ—

’ಈಕೆ ಯಾರೆಂದು ನಿಮಗೆ ಗೊತ್ತೆ ಅವ್ವೆ?’

'ಹೂ. ನಿನಗೆ ತಿಳಿಯದೆ?'

'ಊಹೂ.'

'ಈಕೆ, ಹೆಗ್ಗಡೆಯವರ ಮಗಳು-ಶಾನ್ತಲೆ.'

'ಹೌದೇ ಅವ್ವೆ!'

—ಏಚಲಾದೇವಿಯ ಮಾತನ್ನೇ ನಂಬದವನಂತೆ ಕೇಳಿದ ವಿಷ್ಣುವರ್ಧನ.

'ಹಾಗೆಂದರೆ—ನೀನು ಈಕೆಯನ್ನು ಯಾರೆಂದು ತಿಳಿದೆ?'

'ನಾನಾರೋ ಚಕ್ರವರ್ತಿಗಳ ಕಡೆಯ ಗೂಢಚಾರಿಣಿ ಇರಬೇಕು, ನಾವಿಲ್ಲಿ ಏನು ಮಾತು ಅಡುತ್ತೇವೋ ಆಲಿಸಿ, ಚಕ್ರವರ್ತಿಗಳಿಗೋ ಪ್ರಧಾನಿಗಳಿಗೋ ವರದಿ ಮಾಡಲೆಂದು ಬಂದ ಬೇಹುಗಾರ್ತಿ ಇರಬೇಕು ಎಂದೇ ಭಾವಿಸಿದೆ. ಅದಕ್ಕಾಗಿಯೇ ಇಷ್ಟು ಒರಟಾಗಿ ಮಾತನಾಡಿಸಿದೆ'

ವಿಷ್ಣುವರ್ಧನನಾಡಿದ ಮಾತನ್ನು ಕೇಳಿ ಶಾನ್ತಲೆಯ ಮುಖ ಕೆಂಪೇರಿತು. ತಾನು ಚಕ್ರವರ್ತಿಯ ಗೂಢಚಾರಿಣಿ ಎಂದು ವಿಷ್ಣುವರ್ಧನ ಊಹಿಸಿದುದನ್ನು ಕೇಳಿಯೇ ಆಕೆಗೆ ಅಪಮಾನವಾದಂತಾಗಿ—

'ಅಂಥ ಮರೆ ಮೋಸ ಈ ಮನೆಯ ಹೊಸ್ತಿಲನ್ನೆಂದೂ ಹತ್ತುವುದಿಲ್ಲ, ನಿಮ್ಮ ಕುಮಾರರಿಗೆ ಹೇಳಿ ತಾಯಿ—ಇದು ಚಕ್ರವರ್ತಿಗಳ ಬಿಡಾರವಲ್ಲ, ಮಾರಸಿಂಗಮಯ್ಯನವರ ಮನೆ ನಾನು ಅವರ ಮಗಳು.'

—ಎಂದು, ಸೆಟೆದು ನಿಂತು ಬಿರುಸಾಗಿ ಹೇಳಿದಳು.

ಆ ಮಾತುಗಳನ್ನು ಕೇಳಿ ವಿಷ್ಣುವರ್ಧನ ಮತ್ತೊಮ್ಮೆ ಬೆಕ್ಕಸಬೆರಗಾಗಿ, ಆ ಮಾತನಾಡಿದ ಶಾನ್ತಲೆಯ ಮೊಗವನ್ನೇ ದಿಟ್ಟಿಸಿ ನೋಡಿದ.

ಒಂದು ಗಳಿಗೆ, ಒಂದೇ ಒಂದು ಗಳಿಗೆಯ ಹಿಂದೆ, ಭೀತಿಯಲ್ಲಿ ಅರಳಿಯ ಚಿಗುರೆಲೆಯಂತೆ ಕಂಪಿಸಿದ ಈ ಕನ್ಯೆ, ಈಗ ಹೆಡೆತುಳಿದ ಸರ್ಪಿಣಿಯಂತೆ ಕೆರಳಿ ನಿಂತಿದಾಳೆ. ಈ ಕೋಮಲ ಕಾಯದಲ್ಲಿ, ಲಾವಣ್ಯಲತೆಯಾದ ಹೆಣ್ಣಿನಲ್ಲಿ, ತಾನೂ ಹೆದರುವಂತೆ ಮಾಡುವ ಈ ಕ್ರೋಧ ಎಲ್ಲಿ ಹುದುಗಿತ್ತು? ಸ್ವಲ್ಪ ಹೊತ್ತಿನ ಹಿಂದೆ ಭೀತಿಯಲ್ಲಿ ಗಟ್ಟಿಯಾಗಿ ಉಸಿರು ಬಿಟ್ಟರೂ ಸಿಡಿದು ಹೋಗುವ ಬಹು ತೆಳುವಾದ ಗಾಜಿನ ಗೊಂಬೆಯಂತಿದ್ದ ಈ ಬಾಲೆ, ಈಗೆ, ಅಪಮಾನಜನ್ಯವಾದ ರೋಷದಲ್ಲಿ 'ಮನಸ್ಸು ಮಾಡಿದರೆ ಈ ಗಳಿಗೆಯಲ್ಲೇ ಜಗತ್ತನ್ನೆಲ್ಲಾ ನುಂಗಬಲ್ಲೆ' ಎನ್ನುವ ಕಾಳಿಯಂತೆ ಕಾಣುತ್ತಿದ್ದಾಳೆ ಒಂದು ಗಳಿಗೆಯಲ್ಲಿ ಎಂಥ ಅದ್ಭುತ ಪರಿವರ್ತನೆ !

ಕಣ್ಣನ್ನು ಅತ್ತಿತ್ತ ಅಲುಗಿಸಲಾಗದವನಂತೆ ವಿಷ್ಣುವರ್ಧನ ಶಾನ್ತಲೆಯ ಮೊಗವನ್ನೇ ನೋಡುತ್ತಿದ್ದ.

ಶಾನ್ತಲೆಯೂ ಕ್ರೋಧ ತುಂಬಿದ ಕಣ್ಣುಗಳಿಂದ ಆತನನ್ನೇ ನೋಡುತ್ತಿದ್ದಳು.

ಶಾನ್ತಲೆಯ ಮಾತನ್ನು ಕೇಳಿ ವಿಷ್ಣುವರ್ಧನನಿಗೆ ಬೆರಗಾಗಿದ್ದರೆ, ಏಚಲಾದೇವಿಯ ಮನಸ್ಸಿಗೆ ಶಾನ್ತಲೆಗಾದಷ್ಟೇ ನೋವಾಗಿತ್ತು. ತನ್ನ ಮಗ, ಕಂಡವರ ಕನ್ಯೆಯನ್ನು ಹೀಗೆ, ಅಕಾರಣವಾಗಿ ಅಪಮಾನಿಸುವುದೇ? ಆ ಭಾವನೆಯಲ್ಲೇ ಕೊಂಚ ಕಹಿಯಾಗಿ ಹೇಳಿದಳು—

'ಎಲ್ಲಿಯ ಮಾತು ಬಿಡು ತಾಯಿ. ಅಂತೂ ಬಿಟ್ಟಿಯಣ್ಣ, ಬಾರಿಬಾರಿಗೂ ನಿನ್ನ ತುಟಿ ಮೀರಿದ ಮಾತಿಗೆ ನಾನು ತಲೆತಗ್ಗಿಸುವುದು ಇನ್ನೂ ತಪ್ಪಲಿಲ್ಲ.'

ತಾಯಿಯ ಮಾತು ಕೇಳಿ ವಿಷ್ಣುವರ್ಧನನಿಗೆ ಮುಖಕ್ಕೆ ಹೊಡೆದಂತಾಯಿತು.

'ಅವ್ವೆ—ನನ್ನನ್ನು ಮನ್ನಿಸಬೇಕು. ನನ್ನ ನಡತೆಯಲ್ಲಿ ತಪ್ಪಿದ್ದರೆ ಹೆಗ್ಗಡೆಯವರ ಕುಮಾರಿಯರೂ ಮನ್ನಿಸಬೇಕು. ಆದರೆ ಅವ್ವೆ—ನಾನು ಅವರಲ್ಲಿ ಒರಟಾಗಿ, ಸಿಟ್ಟಿನಿಂದ ನಡೆದಿದ್ದರೆ ಆದಕ್ಕೆ ಕಾರಣ ಕುಮಾರಿಯವರು, ಒಳಗೆ ನಾವು ಮಾತನುಡುವಾಗ ಸಂದೇಹಾಸ್ಪದವಾದ ರೀತಿಯಲ್ಲಿ ನಮ್ಮ ಮಾತುಗಳನ್ನು ಕೇಳುತ್ತಾ ಹೊರಗೆ ನಿಂತಿದ್ದುದು. ಇಲ್ಲವಾದಲ್ಲಿ ಇಂಥ ಅವಿನಯ ಎಂದೂ ನಮ್ಮಿಂದ ನಡೆಯುತ್ತಿರಲಿಲ್ಲ.'

—ತನ್ನ ನಡತೆಗೆ ಕಾರಣವನ್ನು ವಿವರಿಸಿ ಹೇಳಿದ ವಿಷ್ಣುವರ್ಧನ.

'ಹೌದೇನೇ ತಾಯಿ?'

—ಏಚಲಾದೇವಿ ಶಾನ್ತಲೆಯತ್ತ ತಿರುಗಿ ಕೇಳಿದಳು.

'ಹೂ'

'ಹಾಗೇಕೆ ಮಾಡಿದೆ?'

'ಅವ್ವೆ, ನಿಮಗೆ ಭೋಜನಕ್ಕೆ ಎಲ್ಲವೂ ಅಣಿಯಾಗಿದೆ ತಿಳಿಸಿ ಬಾ ಎಂದು ಹೇಳಿದಳು, ಅದಕ್ಕಾಗಿ ಬಂದೆ. ಒಳಗೆ ನೀವು ಮಾತನಾಡುತ್ತಿದ್ದಿರಿ. ಹೇಳಿ ಕಳುಹಿಸುವುದಕ್ಕೆ ಸನಿಹದಲ್ಲಿ ಪಡಿಯರತಿಯರು ಯಾರೂ ಇರಲಿಲ್ಲ. ನಾನು ನಿಂತಿದ್ದಕ್ಕೆ ಇದು ಕಾರಣ ದೇವಿ. ಆದರೆ ನನ್ನಿಂದಲೂ ಒಂದು ತಪ್ಪಾಗಿದೆ...'

'ಏನು?'

'ಒಳಗಡೆ ಕುಮಾರರಾಡುತ್ತಿದ್ದ ಮಾತನ್ನು ಕೇಳಿಸಿಕೊಂಡುದು. ಆ ತಪ್ಪನ್ನು ತಾವೂ, ಕುಮಾರರೂ ಮನ್ನಿಸಬೇಕು. ಆದರೆ ಈಗಲೂ ನಾನು ನಿಮಗೆ ಭರವಸೆ ಕೊಡುತ್ತೇನೆ, ನಾನು ಬೇಹುಗಾರಳಲ್ಲ.'

'ಆ ಮಾತು ನಮಗೆ ಮನವರಿಕೆಯಾಗಿದೆ. ಯಾವುದೋ ಮಬ್ಬಿನಲ್ಲಿ ನಾವು ಆಡಿದ ತಪ್ಪು ಮಾತನ್ನು ಮತ್ತೆ ಮತ್ತೆ ಆಡಿ ಮುಖಕ್ಕೆ ತಿವಿಯುವುದು ಬೇಡ. ತಪ್ಪಾಗಿದೆ ಎಂದು ಹೇಳಿದ್ದೇವೆ. ಬೇರೇನಾದರೂ ದಂಡ ವಿಧಿಸಬೇಕೆಂಬಾಸೆಯಿದ್ದರೆ ಹೇಳಬಹುದು'

—ಕೊಂಚ ಬಿರುಸಾಗಿ ಹೇಳಿದ ವಿಷ್ಣುವರ್ಧನ.

'ಇಲ್ಲ-ಇಲ್ಲ—ಆ ಭಾವನೆಯಿಂದ ನಾನು ಹೇಳಲಿಲ್ಲ.'

—ವಿಷ್ಣುವರ್ಧನನ ಮಾತಿನಿಂದ ನಸುನೊಂದು ಹೇಳಿದಳು ಶಾನ್ತಲಾ.

'ಅಷ್ಟಾದರೆ ನಮ್ಮ ಪುಣ್ಯ ಅವ್ವೆ—ನಾನಿನ್ನು ಬರಲೆ? ಕುಮಾರಿ—ಮತ್ತೊಮ್ಮೆ ಕೇಳಿಕೊಳ್ಳುತ್ತೇನೆ—ಇಂದು ಯಾವುದೋ ಭ್ರಮೆಯಲ್ಲಿ ನಮ್ಮಿಂದಾದ ಅಚಾತುರ್ಯವನ್ನು ಮರೆತು ಬಿಡಿ. ಮರೆಯುವುದು ಸಾಧ್ಯವಿಲ್ಲವಾದರೆ-ಮನ್ನಿಸಿ'

—ಎಂದು ಹೇಳಿ, ವಿಷ್ಣುವರ್ಧನ ಅಲ್ಲಿಂದ ಹೊರಟ.

ಅಷ್ಟು ದೂರ ಹೋಗಿ, ಚೌಪಳಿಗೆಯ ಕಡೆ ತಿರುಗುವ ಬಾಗಿಲನ್ನು ದಾಟುವ ಮುನ್ನ ಏಕೋ ವಿಷ್ಣವರ್ಧನ ತಿರುಗಿ ನೋಡಿದ.

ಏಚಲಾದೇವಿಯ ಪಕ್ಕದಲ್ಲಿ ನಿಂತ ಶಾನ್ತಲೆಯೂ ಅವನ ಕಡೆಯೇ ನೋಡುತ್ತಿದ್ದಳು—- ಅರಳಿದ ಕಣ್ಣುಗಳಿಂದ.

ಆ ದೃಷ್ಟಿ ಸಂಗಮದಲ್ಲಿ ಮೂಡಿದ ಯಾವುದೋ ಮಧುರ ಭಾವನೆಯಿಂದ, ಶಾನ್ತಲೆಯ ಮೊಗ ಅರುಣರಾಗ ರಂಜಿತವಾದ ಪ್ರಭಾತದ ಆಕಾಶವಾಯಿತು.

೧೧

ಆಕಸ್ಮಿಕವಾಗಿ ಏಚಲಾದೇವಿಯಿಂದ ತಿಳಿದುಬಂದ ವಾರ್ತೆಯನ್ನು ಕೇಳಿ, ಬಳ್ಳಿಗಾಮೆಗೆ ದೇವತಾಕಾರ್ಯಕ್ಕೆಂದು ಬಂದ ಹೊಯ್ಸಳ ಪಾಳಯ ಮದ್ದಾನೆ ಕಲಕಿದ ಶಾಂತ ಸರಸಿಯಂತಾಯಿತು. ಓಲಗದಲ್ಲಿ ನಡೆದ ಘಟನೆಯಿಂದೆದ್ದ ಸುಳಿಗಾಳಿ ಎರಡು ದಿನ ಕಳೆದರೆ ಅಡಗಿಹೋಗಿ ಮತ್ತೆ ಮೊದಲಿನ ಮಧುರ ವಾತಾವರಣ ಸ್ಥಾಪನೆಯಾಗಬಹುದೆಂದು ನಿರೀಕ್ಷಿಸಿದ್ದವರಿಗೆ, ಆ ಸುಳಿಗಾಳಿ ಸಾಮ್ರಾಜ್ಯಶರಧಿಯನ್ನೇ ಕಲಕುವ ಬಿರುಗಾಳಿಯಾದುದನ್ನು ಕಂಡು, ಎಂಥ ವಿಪತ್ತಿನಲ್ಲೂ ವಿಚಲಿತವಾಗದ ಧೀರ ಚಿತ್ತಗಳೂ ಅಲ್ಲಕಲ್ಲೋಲವಾದುವು.

ವೃದ್ಧ ವಿನಯಾದಿತ್ಯ ಪಾದದಡಿಯ ಭೂಮಿಯೇ ಕುಸಿದವನಂತೆ ತಲೆಯ ಮೇಲೆ ಕೈ ಹೊತ್ತು ಕುಳಿತರೆ, ಎರೆಯಂಗದೇವನ ಚಿತ್ತ ಸೂತ್ರ ಕಿತ್ತ ಗಾಳಿಯಪಟದಂತೆ ಹೊಯ್ದಾಡತೊಡಗಿತು.

ತಾವು ಗಳಿಸಿದ ಹೊಯ್ಸಳ ರಾಜ್ಯವಷ್ಟೇ ಅಲ್ಲ, ಸಮಸ್ತ ಚಾಲುಕ್ಯಸಾಮ್ರಾಜ್ಯವೂ ತಮ್ಮದು, ಅದರ ಏರಿಳಿವು ತಮ್ಮ ಏರಿಳಿವು, ಅದರ ಭದ್ರತೆ ತಮ್ಮ ಭದ್ರತೆ, ಚಾಲುಕ್ಯ ಸಿಂಹಾಸನದ ಸೇವೆಯೇ ತಮ್ಮ ಬಾಳಿನ ಪರಮ ಗುರಿ ಎಂದು ನಂಬಿದ್ದ, ಆ ನಂಬಿಕೆಯ ರಥದಲ್ಲೇ ತಮ್ಮ ಬಾಳನ್ನು ನಡೆಸಿ ಸವೆಸಿದ್ದ ಹೊಯ್ಸಳ ಹಿರಿಯರಿಗೆ ಈ ವಾರ್ತೆಯನ್ನು ಕೇಳಿ, ಇದೇ ದಾರಿ, ಇದೇ ಗುರಿ ಎಂದು ನಂಬಿ ನಡೆದ ದಾರಿಯಲ್ಲಿ ಇದ್ದಕ್ಕಿದ್ದಂತೆಯೇ ಗಾಢ ಅಂಧಕಾರ, ಅಣಕದ ನಗೆ ನಗುತ್ತಾ ಇದಿರುನಿಂತಂತಾಯಿತು.

’ಈ ಸೇವೆಯಿಂದ ನಾವೆಂದೂ ಅಖಂಡ ಭೂಮಂಡಲಾಧಿಪತ್ಯವನ್ನು ಬಯಸಲಿಲ್ಲ ಎರೆಯಂಗ. ಚಕ್ರವರ್ತಿಗಳ ಸ್ನೇಹ, ಅವರ ವಿಶ್ವಾಸವೇ ನಮ್ಮ ಪಾಲಿಗೆ

ಸಕಲ ಸಾಮ್ರಾಜ್ಯ ಎಂದು ನಂಬಿಕೊಂಡಿದ್ದೆವು. ನಮ್ಮ ಬಾಳೆಲ್ಲಾ ಆ ಸ್ನೇಹವನ್ನು ಉಳಿಸಿಕೊಳ್ಳುವುದಕ್ಕೆ, ಬೆಳಸಿಕೊಳ್ಳುವುದಕ್ಕೇ ಸವೆಯಿತು. ಆದರೆ ಚಕ್ರವರ್ತಿಗಳು ಅದಾವುದಕ್ಕೂ ಬೆಲೆ ಕೊಡದೆ, ನಮ್ಮ ಬಾಳು ತೃಪ್ತಿಯಿಂದ ಪರಮಪದವನ್ನು ಸೇರಬಯಸುತ್ತಿದ್ದ ಹೊತ್ತಿನಲ್ಲಿ, ಈ ಅಸಹನೀಯ ಅಪಮಾನದ ಕಲಂಕ ಕಿರೀಟವನ್ನು ಹೊರಿಸಿದರಲ್ಲಾ, ಇನ್ನೇನು ಮಾಡಿದರೆ ತಾನೇ ಈ ಅಪಮಾನ ಕಂಟಕ ತೀರಿತು? ಸರೀಕರಾದ ಮಂಡಲಾಧಿಪತಿ, ಸಾಮನ್ತರ ಇದಿರು ನಾವು ಮುಖ ಎತ್ತಿ ಬಾಳದಂತೆ ಮಾಡಿದರಲ್ಲಾ—ಚಕ್ರವರ್ತಿಗಳು. ಅಂಥ ಅಪರಾಧ ನಮ್ಮಿಂದ ಏನಾಗಿತ್ತು? ನಮ್ಮ ಹುಡುಗ ಮಾಡಿದ ತಪ್ಪಿಗೆ, 'ಅವನ ತಲೆಯನ್ನೇ ಕತ್ತರಿಸಿ ತಂದು ನಮ್ಮ ಪಾದದಡಿ ಇಡಿ' ಎಂದು ಚಕ್ರವರ್ತಿಗಳು ಹೇಳಿದ್ದರೆ ನಾವು ಇಲ್ಲ ಎನ್ನುತ್ತಿದ್ದೆವೆ? ಈ ಸಾಮ್ರಾಜ್ಯಕ್ಕಾಗಿ ಕೋಟಿ ಕೋಟಿಜನ ತಾಯಂದಿರ ಮಕ್ಕಳ ತಲೆಯ ಬಲಿಯನ್ನು ಒಪ್ಪಿಸಿದಷ್ಟೇ ಸಂತೋಷದಿಂದ, ಈ ತಲೆಯನ್ನೂ ಕತ್ತರಿಸಿ ಕೊಡುತ್ತಿದ್ದೆನಲ್ಲಾ? ಈಗ ನಮ್ಮ ತಲೆಯನ್ನೇ ಕತ್ತರಿಸಿ ಕೊಟ್ಟರೆ ತಾನೆ ಈ ಅಪಮಾನ ಹೋದೀತೆ?'

ಇದೇ ದುಃಖ, ಇದೇ ವ್ಯಥೆ ವೃದ್ಧ ವಿನಯಾದಿತ್ಯನಿಗೆ.

'ಆಯಿತು ಇಂದಿಗೆ ನಮ್ಮ ಬಾಳು ವಿಫಲವಾಯಿತು'

ಈ ಕೊರಗಿನಲ್ಲಿ ಎಂದೂ ಯಾವ ಪ್ರಚಂಡ ದುಃಖದ ಇದಿರೂ, ಎಂಥ ದುರಂತದಲ್ಲೂ ಕಣ್ಣು ತೇವವಾಗದ ವೃದ್ಧ ವಿನಯಾದಿತ್ಯನ ಕಣ್ಣುಗಳಿಂದ ಕಂಬನಿ ಹರಿಯಿತು.

ಆತನ ಕಣ್ಣುಗಳಿಂದ ಹರಿದ ಕಂಬನಿಯನ್ನು ಕಂಡು ಎರೆಯಂಗದೇವನ ಎದೆಯಲ್ಲಿ ಬೆಂಕಿ ಉರಿಯಿತು.

ಸೋತು ಆಗಲಿಲ್ಲ, ಸತ್ತು ಬರಲ್ಲಿ-ಬದುಕಿದ್ದ ಹಾಗೇ ಅಪಮಾನದ ಸಿಡಿಲು ಜಡಿಯಿತು ಹೊಯ್ಸಳ ಕೀರ್ತಿ ಗೋಪುರಕ್ಕೇ!

ಕೋಟೆ ಬೀಳಲಿಲ್ಲ, ಸೇನೆ ಸಾಯಲಿಲ್ಲ-ಎಲ್ಲ ಇದ್ದೂ ಹೊಯ್ಸಳರ ಕೀರ್ತಿ ರಾಜ್ಯ ಸೂರೆಯಾಗಿ ಹೋಯಿತು !

ದಾಳಿಯಿಲ್ಲ, ಶತ್ರುವಿಲ್ಲ-ಹೊಯ್ಸಳರ ಗೌರವಪತಾಕೆ ಹುಡಿಗೂಡಿಹೋಯಿತು.

ಮನೆಯ ಮಕ್ಕಳನ್ನು ಬಲಿಗೊಟ್ಟು, ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಟ್ಟು, ತಮ್ಮ ರಕ್ತದ ಕಾಲುವೆ ಹರಿಸಿ, ನೂರಾರು ವರ್ಷಗಳ ಕಾಲ ಮನೆ ಮಡದಿಯರನ್ನು ಮರೆತು, ಚಾಲುಕ್ಯ ಸಾಮ್ರಾಜ್ಯವನ್ನು ಕಟ್ಟಿ, ಆವರ ಸಾಮಂತಿಕೆಯನ್ನೇ ಮಹಾ ಗೌರವವೆಂದು ಭಾವಿಸಿ, 'ಕಂಡಿರಾ ನಾವು ಚಾಲುಕ್ಯರ ಮಂಡಲಾಧೀಶ್ವರರು' ಎಂದು ಲೋಕದಿದಿರು ಮೀಸೆ ತಿರುಹಿಸಿದ್ದು—

ಎಲ್ಲವೂ ಈ ಅಸಮಾನ ಫಲಕ್ಕಾಗಿಯೇ?

ನಂಬಿಕೆ ಸ್ನೇಹ, ಸೇವೆ-ಎಲ್ಲದಕ್ಕೂ ಈ ಅಪಮಾನದ ಮಸಣವೇ ಕೊನೆಯೇ?

ತನ್ನನ್ನು ರಕ್ಷಿಸಿದ ಸಾಮನ್ತರ ಮರ್ಯಾದೆಯನ್ನು ರಕ್ಷಿಸುವಷ್ಟೂ ಹಂಗಿಲ್ಲವೇ ಈ ಸಾಮ್ರಾಜ್ಯಕ್ಕೆ?

ತಾನು ನಂಬಿದುದೆಲ್ಲವೂ ತನ್ನ ಕಣ್ಣೆದುರಿನಲ್ಲೇ ವಿಫಲವಾಗಿ, ಬದುಕಿನ ನಂಬಿಕೆಯೇ ಕಡಿದುಹೋದಂತಾಗಿ ಕೊರಗಿದ ಎರೆಯಂಗದೇವ.

ಹೆಮ್ಮರದ ಶಾಶ್ವತ ಆಸರನ್ನೇ ನೆಚ್ಚಿ ಬೆಳೆದ ಬಳ್ಳಿಗೆ, ಆಕಸ್ಮಿಕ ಸಿಡಿಲಾಘಾತದಿಂದ ಆ ಮರವೇ ಮುರಿದು ಬಿದ್ದು ಹೊರಳಿದಂತಾಗಿತ್ತು-ಬಾಳಿನಲ್ಲಿ ಚಿರವೆಂದು ನಂಬಿದ ಚಾಲುಕ್ಯರ ಸ್ನೇಹ ಕಡಿದುಹೋಗಿ.

ರಾಜ್ಯದ ಮಾರುಕಟ್ಟೆಯಲ್ಲಿ ವಿಕ್ರಮಾದಿತ್ಯ, ಹೊಯ್ಸಳರ ಅಮೋಘ ಸೇವೆ, ಅಮೂಲ್ಯ ತ್ಯಾಗಗಳನ್ನು ಗಳಿಗೆಯ ಅಸಮಾಧಾನದ ಕವಡೆಯ ಬೆಲೆಗೆ ಮಾರಿದ್ದ.

ಬೇಕೆಂದಾಗ ಆದರಿಸಿ, ಬೇಡವಾದಾಗ ಬೀದಿಗೆ ಬಿಸುಡುವ ಹುಡುಗರ ಆಟಿಗೆಯ ವಸ್ತುವೇ ಹೊಯ್ಸಳರ ಮರ್ಯಾದೆ? ಅದಕ್ಕೆ ಚಕ್ರವರ್ತಿದೃಷ್ಟಿಯಲ್ಲಿ ಅಷ್ಟೇನೇ ಬೆಲೆ?

ಆ ಚಕ್ರವರ್ತಿ-ಆ ಚಕ್ರವರ್ತಿಗಾಗಿ ತಾನೇನು ಮಾಡಲಿಲ್ಲ?

* * * * * *

ಏನು ಮಾಡಲಿಲ್ಲ?

ದಕ್ಷಿಣದಲ್ಲಿ ಚೋಳರನ್ನು ಮೆಟ್ಟಿ, ಉತ್ತರದಲ್ಲಿ ಧಾರಾನಗರವನ್ನು ಸುಟ್ಟು ಚಕ್ರವರ್ತಿಗಳ ಕೀರ್ತಿಯನ್ನು ದಿಗಂತ ವಿಶ್ರಾಂತವಾಗಿ ನಿಲ್ಲಿಸಲಿಲ್ಲವೇ?

ತಮಗೆ ಸಾಮ್ರಾಜ್ಯ ಲಾಭವಾಗಬೇಕೆಂದು ಮಾಡಿದುದೇ ಈ ದಿಗ್ವಿಜಯ?

ರಾಜ್ಯವಿರಲಿ, ಗೆದ್ದ ರಾಜ್ಯದಂತೆಯೇ ಆ ಗೆಲುವಿನ ಕೀರ್ತಿಯನ್ನೂ ಚಕ್ರವರ್ತಿಗಳೇ ಒಪ್ಪಿಸಿರಲಿಲ್ಲವೇ?

ಅಪಮಾನಜನ್ಯ ದುಃಖದಗ್ಧವಾದ ಎರೆಯಂಗದೇವನ ಚಿತ್ತದಲ್ಲಿ ಬೇಡ ಬೇಡವೆಂದರೂ ನೆನವೊಂದು ಸುಳಿಯಿತು.

*   *   *   *   *   *

ಒಮ್ಮೆ ಎರೆಯಂಗದೇವ, ಜೈತ್ರ ಯಾತ್ರೆಯನ್ನು ತೀರಿಸಿಕೊಂಡು ವಿಜಯ ಶ್ರೀ, ಕೀರ್ತಿಲಕ್ಷ್ಮಿ-ಇಬ್ಬರಿಗೂ ವಲ್ಲಭನಾಗಿ, ರಾಜಧಾನಿಗೆ ಹಿಂದಿರುಗಿದಾಗ, ಒಂದು ದಿನ ಆಸ್ಥಾನ ಕವಿಗಳೊಬ್ಬರು, ಎರೆಯಂಗದೇವನ ಸಮರ ವಿಜಯವನ್ನು ವರ್ಣಿಸುವ ಕವನಗಳನ್ನು ಬರೆದು, ಅವನ್ನು ಆತನಿಗೆ ಓದಿ ಹೇಳಲೆಂದು ತಂದಿದ್ದರು.

ಮನೆವೆಗ್ಗಡೆಗಳಿಂದ ಕವಿ ಬಂದ ಕಾರಣವನ್ನು ಅರಿತ ಎರೆಯಂಗದೇವ, ಕವಿಯನ್ನು ಮರ್ಯಾದಾಪೂರ್ವಕವಾಗಿ ಇದಿರುಗೊಂಡು, ಸ್ವಾಗತಿಸಿ, ಉಚಿತಾಸನದಲ್ಲಿ ಕುಳ್ಳಿರಿಸಿ, ಕವಿಯ ಆಶೀರ್ವಾದವನ್ನು ಸ್ವೀಕರಿಸಿ—

'ತಾವು ನನ್ನ ಕೀರ್ತಿಗೆ ಕವಿತೆಯ ಹೊನ್ನ ಕಳಶವಿಡಲು ಬಂದಿದ್ದೀರೆಂದು ಮನೆವೆಗ್ಗಡೆಗಳು ತಿಳಿಸಿದರು. ಹೇಳಬೇಕು'

—ಎಂದು ಕೇಳಿದ.

'ಹೆಚ್ಚೇನೂ ಬರೆದಿಲ್ಲ. ಎರಡು ಸಣ್ಣ ಕಂದ ಪದ್ಯಗಳನ್ನು ಬರೆದಿದೇನೆ. ತಮ್ಮ ಪರಾಕ್ರಮದಷ್ಟು ವಿಸ್ತಾರವಾದ ಕಾವ್ಯ ರಚಿಸುವ ಶಕ್ತಿಯನ್ನು ನಾನು ಪಡೆದು ಬರಲಿಲ್ಲ'

'ಕವಿಕೃತಿ ಗುಣದಿಂದಲ್ಲದೆ, ಗಾತ್ರದಿಂದ ಲೋಕಪೂಜ್ಯವಾಗುವುದಿಲ್ಲ, ಅದರಿಂದ ತಾವು ಬರೆದದ್ದು ಸ್ವಲ್ಪ ಎಂಬ ಕಾರಣದಿಂದ ಸಂಕೋಚಪಡಬೇಕಾಗಿಲ್ಲ. ನಿಸ್ಸಂಕೋಚವಾಗಿ ಬರೆದದ್ದನ್ನು ಹೇಳಿ, ನಮ್ಮ ಕಿವಿಯ ಕುತೂಹಲವನ್ನು ತಣಿಸಬೇಕು.'

'ಅಪ್ಪಣೆ-ಅವಧರಿಸಬೇಕು'

—ಎಂದು ಕವಿ ತಾನು ಬರೆದ ಮೊದಲ ಪದ್ಯವನ್ನು ಓದಿ ಹೇಳಿದ—

’ಅಣ್ಣಮನೊರೆಗೊಳಿಸಿ ಚೋಳಿಕ

ರಣ್ಣಲೆಯಂ ತಳಿರ ನುಡಿಸಿ ನನ್ನುಗೆಯಂ ಮೂ |

ವಣ್ಣಂ ಬರಿಸಿದನುರ್ವ್ವರೆ

ಬಣ್ಣಿಸಲೆರೆಯಂಗ ನೃಪತಿ ಚಕ್ರಿಯ ಬೆಸದಿ ||

ಕವಿ ಹೇಳಿದುದನ್ನು ಮತ್ತೊಮ್ಮೆ ಓದಿಸಿ ಕೇಳಿ, ಎರೆಯಂಗದೇವ—

’ಸುಂದರವಾಗಿದೆ. ಕಿರಿದಾದರೂ ಕಡೆದ ವಜ್ರದ ಗುಣವಿದೆ. ಮತ್ತೊಂದು ಪದ್ಯವಿದೆ ಎಂದಿರಲ್ಲಾ ಅದನ್ನು ಓದಿ’

—ಆಸ್ಥಾನಕವಿಯನ್ನು ತನ್ನ ನಗೆನೋಟದಿಂದ ಬೆನ್ನುತಟ್ಟಿ ಹೇಳಿದ ಎರೆಯಂಗದೇವ.

’ಲಾಲಿಸಬೇಕು—’

—ಜರಿಯ ಭಾರದಿಂದ ಕೆಳಗೆ ಸರಿಯುತ್ತಿದ್ದ ರೇಶಿಮೆಯ ಅಂಗವಸ್ತ್ರವನ್ನು ಸರಿಪಡಿಸಿಕೊಂಡು ಕವಿ, ಕಂಪಿಸುವ ಕೈ ಬೆರಳುಗಳಲ್ಲಿ ಹಿಡಿದ ಓಲೆಯನ್ನು ನೋಡಿಕೊಂಡು ಮತ್ತೆ ಹಾಡಿದ—

’ಆಳಾಪಮೇನೋ ಹಿಮಕು—

ತ್ಕೀಲದ ಸೇತುವಿನ ನಡುವಣ ನೃಪಚಯಮಂ

ಕೀಳಿಟ್ಟರೆದನೆರಗ ನೃ

ಪಾಲ ಚಾಳುಕ್ಯ ಚಕ್ರವರ್ತಿಯ ಬೆಸದಿಂ||’

’ತುಂಬಾ ಸುಂದರವಾಗಿದೆ ಕವಿಗಳೇ ನಮ್ಮ ಪೌರುಷ ನಿಮ್ಮ ಕವಿತಾಪ್ರತಿಭೆಯ ಪವಾಡಸ್ಪರ್ಶದಿಂದ ಸಾರ್ಥಕವಾಯಿತು’

—ಸಂತುಷ್ಟ ಚಿತ್ತನಾಗಿ ಹೇಳಿದ ಎರೆಯಂಗದೇವ

’ಇಲ್ಲ ಪ್ರಭು, ನನ್ನ ಕಾವ್ಯಕನ್ಯೆ ಇಂದು ರಾಜಾಶೀರ್ವಾದ ಪಡೆದು ಕೃತಾರ್ಥಳಾದಳು’

—ಕವಿಯೂ ಎರೆಯಂಗದೇವನ ಮೆಚ್ಚುಗೆಯಿಂದ ತೃಪ್ತನಾಗಿ ಹೇಳಿದ.

’ಉಂಟೆ? ಕಾವ್ಯಕನ್ಯೆಗೆ ರಾಜಾಶೀರ್ವಾದವೆಂಬುದು ಬಹು ದೊಡ್ಡ ಮಾತು. ಮಾನವನ ಅಲ್ಪ ಸಾಧನೆಗೆ ಶಾರದೆಯ ಹರಕೆಯಿಂದ ಶಾಶ್ವತ ಸ್ಥಿತಿ ಲಭ್ಯವಾಗುತ್ತದೆ. ವಸುಂಧರೆಯ ಪುಣ್ಯಗರ್ಭದಲ್ಲಿ ಜನಿಸಿದ ವೀರರ ಸಂಖ್ಯೆಗೆ ಲೆಕ್ಕವಿಲ್ಲ. ಆದರೆ ಅವರಲ್ಲಿ ಸರಸ್ವತೀ ಕೃಪೆಯಿಂದ ಪುನೀತರಾಗದವರ ಹೆಸರು ಈಗೆಲ್ಲಿ ಉಳಿದಿದೆ ಹೇಳಿ? ಕತ್ತಿಯಿಂದ ಕಲಿ ಕಟ್ಟಿದ ಸಾಮ್ರಾಜ್ಯ ಉಳಿಯುವುದಿಲ್ಲ ಕವಿಗಳೇ. ಆದರೆ ಶಿಲ್ಪಿ ಉಳಿಯಿಂದ ಕೊರೆದ ಶಿಲ್ಪ, ನೂರಾರು ಸಾಮ್ರಾಜ್ಯಗಳ ಅಸ್ತಮಾನಾನಂತರವೂ, ಕಾಲನ ವಿನಾಶ ಶಕ್ತಿಯನ್ನು ಹಿಯ್ಯಾಳಿಸಿ ಬದುಕುತ್ತದೆ. ಕಲಿಯ ಸಾಧನೆ ಹೆಸರಾಗಿ ಉಳಿಯಬೇಕಾದರೂ ಅದಕ್ಕೆ ಕಾವ್ಯಲಕ್ಷ್ಮಿಯ ಹರಕೆ ಬೇಕು. ತಾವು ಇಂದು ನನ್ನ ಅಲ್ಪ ಸಾಧನೆಗೆ, ಈ ಮಹಾ ದೈವಾನುಗ್ರಹವನ್ನು ದೊರಕಿಸಿ ಕೊಟ್ಟಿದೀರ. ಅದಕ್ಕೆ ನಿಮಗೆ ನಾನೇನು ಉಡುಗೊರೆ ಕೊಡಬಲ್ಲೆ—ಹೇಳಿ?’

—ತುಂಬಿದ ಹೃದಯದಿಂದ ಹೇಳಿದ ಎರೆಯಂಗದೇವ

’ಪ್ರಭೋ—ಕವಿತೆಗೆ ಸಹೃದಯರ ಮೆಚ್ಚುಗೆಗಿಂತ ಹಿರಿಯ ಉಡುಗೊರೆ ಮತ್ತಾವುದಿದೆ? ಈ ದೇಹ ಉಳಿಯಲು ಅನ್ನ ಎಷ್ಟು ಅವಶ್ಯವೋ, ಕವಿತೆ ಉಳಿಯಲು

ರಸಿಕ ಜನ ಮನದ ಮೆಚ್ಚುಗೆಯೂ ಅಷ್ಟೇ ಅಗತ್ಯ. ಉಳಿದ ಉಡುಗೊರೆ, ಡೇಹಳ್ಳಿ ಅಲಂಕಾರವಿದ್ದಂತೆ. ಇದ್ದರೆ ಲಾಭವಿಲ್ಲ, ಇಲ್ಲವಾದರೆ ನಷ್ಟವಿಲ್ಲ. ಈ ಪದ್ಯಗಳನ್ನು ಬರೆದಾಗ ತಾವು ಇದನ್ನು ಮೆಚ್ಚಿಕೊಳ್ಳುವಿರೋ ಇಲ್ಲವೋ ಎಂಬ ಭಯ ನನಗಿತ್ತು—'

'ಏಕೆ ನಾನು ಕವಿತೆಯ ಸೌಂದರ್ಯವನ್ನು ಗ್ರಹಿಸಲಾರದ ಆರಸಿಕನೆಂದೇ?'

'ನಾನು ತಮ್ಮ ಪರಾಕ್ರಮವನ್ನು ಪ್ರಶಂಸಿಸಿ ಬರೆದ ಎರಡು ಕಂದಗಳ ಕಡೆಯ ಚರಣದಲ್ಲೂ 'ಚಕ್ರವರ್ತಿಯ ಬೆಸದಿ' ಎನ್ನುವ ಶಬ್ದಗಳಿದ್ದುದನ್ನು ಕಂಡ ನನ್ನ ಮಿತ್ರರೊಬ್ಬರು, 'ಇದೇನು ಒಳ್ಳೆಯ ಪಾಯಸ ಮಾಡಿ ಇಂಗಿನ ಒಗ್ಗರಣೆ ಹಾಕಿ ರುಚಿ ಕೆಡಿಸಿದ್ದೀರಲ್ಲಾ? ಇದು ನಮ್ಮ ದೊರೆಗಳ ಹೊಗಳಿಕೆಯಲ್ಲ, ಪರ್ಯಾಯವಾಗಿ ದೂಷಣೆ. ನಮ್ಮ ಪ್ರಭುಗಳು ಅರಸಾಗಿ ಸಾಧಿಸಿದ ಕೀರ್ತಿ ಎಲ್ಲವೂ ಆಳಿನಂತೆ ಮಾಡಿದ ಕೆಲಸ ಎಂದು ಅರ್ಥವಾಗುವಂತೆ ಮಾಡಿದ್ದೀರ—'ಚಕ್ರವರ್ತಿಯ ಬೆಸದಿ' ಎಂದು, ಕೊನೆಯಲ್ಲಿ ಚೇಳಿನಕೊಂಡಿಯಂಥ ಕೊನೆಯ ಮಾತು ಸೇರಿಸಿ ಇವು ದೊರೆಗಳಾಗಲಿ, ದೊರೆಗಳ ಅಭಿಮಾನಿಗಳಾಗಲಿ ಮೆಚ್ಚಿಕೊಳ್ಳುವಂಥದಲ್ಲ, ಅದನ್ನು ತಿದ್ದಿ' ಎಂದಿದ್ದರು. ಆದರೆ ಕವಿತೆ ವಾಸ್ತವತೆಯ ಆಭಾಸವಾಗಬಾರದು ಎಂಬ ಏಕೈಕ ಉದ್ದೇಶದಿಂದ, ನಾನು ಬರೆದದ್ದನ್ನು ಬರೆದ ಹಾಗೇ ತಂದು ಸನ್ನಿಧಾನದಲ್ಲಿ ಓದಿದೆ. ಅದನ್ನು ತಾವು ಮೆಚ್ಚಿಕೊಂಡಿರಿ. ಅದಕ್ಕಿಂತಲೂ ಹೆಚ್ಚಿನದನ್ನು ಬೇರೇನು ಬೇಡಲಿ.'

—ಆಸ್ಥಾನ ಕವಿ ಅಷ್ಟಕ್ಕೇ ಹೆಚ್ಚು ಮಾತನಾಡಿದೆನೇನೋ ಎಂಬ ಭಯದಿಂದ ಬೆವರುತ್ತ ಹೇಳಿದ.

ಆ ಮಾತನ್ನು ಕೇಳಿ ಎರೆಯಂಗದೇವ ನಕ್ಕು ಬಿಟ್ಟ. ಆದರೆ ಆ ನಗೆಯಲ್ಲಿ ವ್ಯಂಗ್ಯವಿರಲಿಲ್ಲ. ಒಂದು ಗಳಿಗೆ ನಕ್ಕು, ಬಳಿಕ ಹೇಳಿದ—

'ಮನುಷ್ಯ ನಿಮಿತ್ತ ಮಾತ್ರ. ದೈವ ಕೃಪೆಯಿಲ್ಲದೆ ಏನನ್ನೂ ಸಾಧಿಸಲಾರ. ಆದರೂ ಅವನಲ್ಲಿರುವ ಅಹಂಭಾವ ಅದನ್ನು ಒಪ್ಪಿಕೊಳ್ಳಲು ಸಿದ್ಧವಾಗುವುದಿಲ್ಲ. 'ಆದದ್ದು ದೈವ ಕೃಪೆ' ಎನ್ನದೆ, ಅದಕ್ಕೆ ಪ್ರತಿಯಾಗಿ 'ನಾನೇ ಮಾಡಿದೆ, ನಾನೇ ಬೆಟ್ಟ ಕಟ್ಟಿದೆ, ನಾನೇ ಕಡಲು ಕಡಿದೆ' ಎಂದು ಸಾಧಿಸಲೇ ಹೊರಡುತ್ತದೆ. ಸುತ್ತಲವರೂ ತನ್ನ ಬಗ್ಗೆ ಹಾಗೇ ಹೇಳಬೇಕೆಂದು ಬಯಸುತ್ತದೆ. ಅಲ್ಲವೇ?'

'ನಿಜ ಪ್ರಭು.'

'ಆದರೂ ಮಾನವನನ್ನು ಆಡಿಸುವ ಈ 'ಅಹಂ'ನ ಆಟವನ್ನು ದೊಡ್ಡತನ ಎನ್ನುವುದಿಲ್ಲ. ತಿಳಿದವರು ಅಲ್ಪತನ ಎಂದೇ ಹೇಳುತ್ತಾರೆ.?'

'ಅದೂ ದಿಟ.'

'ಹಾಗಿರುವಾಗ ನೀವು ನಿಮ್ಮ ಕವಿತೆಯಲ್ಲಿ ನಮ್ಮ ಸಾಹಸವನ್ನು ಹೊಗಳಿಯೂ ನಮ್ಮಲ್ಲಿ ಆ ಅಲ್ಪತ್ವವನ್ನು ಆರೋಪಿಸಲಿಲ್ಲವೆಂದು ಕೇಳಿ ನಾವು ಸಂತೋಷಿಸಬೇಕೋ ವ್ಯಥೆ ಪಡಬೇಕೋ ಹೇಳಿ? ನಿಮ್ಮ ಕವಿತೆಯಲ್ಲಿ ನೀವು ನಾವು ಮಾಡಿದಂತೆ ಹೇಳಿದ ಕೆಲಸಗಳನ್ನು ನಾವು ಮಾಡಿದ್ದು ಉಂಟು. ಆ ಕೆಲಸವನ್ನು ಮಾಡಿದ್ದು ನಮ್ಮ ಕತ್ತಿಯೇ ಅದರಲ್ಲಿ ಅನುಮಾನವೇ ಇಲ್ಲ. ಆದರೂ ಎದೆಯಲ್ಲಿ ಧೈರ್ಯವಿಲ್ಲದೆ ತೋಳು ಹೇಗೆ ಸಾಹಸಕ್ಕೆ ತುಡುಕುವುದಿಲ್ಲವೋ, ಹಾಗೇ ಚಾಲುಕ್ಯ ಚಕ್ರವರ್ತಿಗಳ ವಿಶ್ವಾಸ ನಮಗಿದೆ, ಅಖಂಡ ಚಾಲುಕ್ಯ ಸಾಮ್ರಾಜ್ಯ, ಹೊತ್ತು ಬಂದಾಗ ನಮ್ಮ ಬೆಂಬಲಕ್ಕಿದೆ ಎಂಬುವ ನಂಬಿಕೆ ನಮಗಿಲ್ಲದಿದ್ದರೆ ಇಷ್ಟು ಕೆಲಸ ನಮ್ಮಿಂದ ಆಗುತ್ತಿತ್ತೆ? ಅದು ತಿಳಿದೂ, ಅವೆಲ್ಲವನ್ನೂ ನಾನೇ, ನನ್ನ ನಂಬಿಕೆಯಿಂದಲೇ ಮಾಡಿದೆ ಎಂದು ನಾನು ಅಂದುಕೊಂಡಿದ್ದರೂ ದೋಷವಾಗುತ್ತಿತ್ತು. ನೀವು ಹಾಗೆ ಬರೆದಿದ್ದರೆ ನಿಮ್ಮ ಕವಿತೆಯೇ ಅತಿಶಯೋಕ್ತಿಯ, ಅತಿ ಪ್ರಶಂಸೆಯ ಲೋಪಕ್ಕೆ ಗುರಿಯಾಗುತ್ತಿತ್ತು. ಹಾಗೆ ಬರೆಯದೆ ನೀವು ನಮ್ಮನ್ನು

ಉಳಿಸಿದಿರಿ. ಅದಕ್ಕಾಗಿ ನಿಮ್ಮಲ್ಲಿ ನಾನು ಬೇಸರ ತಾಳಬೇಕೇ? ಖಂಡಿತವಾಗಿಯೂ ಇಲ್ಲ. ನಮ್ಮ ಮಾತಿಗೆ ಸಾಕ್ಷಿಯಾಗಿ ನಾಳೆಯೇ ಆಸ್ಥಾನ ರುವಾರಿಗಳಿಗೆ ಈ ಪದ್ಯವನ್ನು ಶಾಸನದಲ್ಲಿ ಕೊರೆಯುವಂತೆ ಹೇಳುತ್ತೇವೆ. ಹಾಗೇ ನೀವು ನಿಮ್ಮ ಕವಿ ಮಿತ್ರರಿಗೆ, ನಮ್ಮ ಪರವಾಗಿ ಹೇಳಿ 'ದಯವಿಟ್ಟು ದೊರೆಗಳಲ್ಲಿ ನಿಮಗೆ ಅಭಿಮಾನವಿದ್ದರೆ ಅವರನ್ನು 'ಸ್ತುತಿಪ್ರಿಯರು' ಎಂಬ ಅಪಖ್ಯಾತಿಗೆ ಗುರಿಮಾಡಬೇಡಿ' ಎಂದು'

ಎರೆಯಂಗದೇವ ನಗುನಗುತ್ತಾ ಹೇಳಿದ ಮಾತುಗಳನ್ನು ಕೇಳಿ ಆಸ್ಥಾನ ಕವಿಯ ಕಣ್ಣುಗಳಲ್ಲಿ ನೀರು ತುಂಬಿ, ಗದ್ಗದಕಂಠನಾಗಿ ಹೇಳಿದ—

'ಪ್ರಭೋ ತಮ್ಮಂತಹ ನಿಷ್ಠರ ರಕ್ಷೆ ಇರುವವರೆಗೆ ಚಾಲುಕ್ಯ ಸಾಮ್ರಾಜ್ಯಕ್ಕೆ ಅಳಿಗಾಲವಿಲ್ಲ. ಸಾಮ್ರಾಜ್ಯ ಅಳಿದರೂ, ಕೀರ್ತಿ, ಸಾಮ್ರಾಜ್ಯದ ಹೆಸರನ್ನು ಉಳಿಸುತ್ತದೆ.'

'ನಿಜ ಅಷ್ಟಕ್ಕಿಂತ ಹೆಚ್ಚನ್ನು ನಾವು ಮತ್ತೇನನ್ನೂ ಬಯಸುವುದಿಲ್ಲ.'

ಕವಿಯ ಮೂತನ್ನು ಕೇಳಿ ಮಾರ್ದನಿಯಂತೆ ಮೂಡಿಬಂದ ಮಾತನ್ನು ಎದೆಯಲ್ಲೇ ತಡೆ ಹಿಡಿಯಲಾಗದೆ ಉತ್ತರವಿತ್ತಿದ್ದ ಎರೆಯಂಗದೇವ.

ಅದಕ್ಕೆ ಸಾಕ್ಷಿಯಾಗಿ ಆ ಪದ್ಯಗಳು ತಾಮ್ರ ಪಟ್ಟಿಕೆಗಳಲ್ಲಿ, ಶಿಲಾಶಾಸನದಲ್ಲಿ ಕಣ್ಡರಿತವಾಗಿದ್ದವು.

*     *     *     *     *     *

ಅಂದು ಆಡಿದ ಆ ಮಾತು, ಆ ದಿನದ ನೆನಪು ಇಂದು ಪುನಃ ಎರೆಯಂಗದೇವನ ಚಿತ್ತದಲ್ಲಿ ನುಗ್ಗಿ ಬಂದು ಅಣಕಿಸಿ ಕೇಳಿದವು—

'ಗೆದ್ದ ರಾಜ್ಯ, ಕೆಲಸದ ಕೀರ್ತಿ ಎರಡೂ ಬೇಡ ಚಕ್ರವರ್ತಿಯ ವಿಶ್ವಾಸವೊಂದು ಶಾಶ್ವತವಾಗಿ ಇರಲಿ ಎಂದೆಯಲ್ಲಾ, ಅದು ಈಗ ಎಲ್ಲಿದೆ?'

ಒಂದೇ, ಎರಡೇ-ಇಂಥ ನೂರಾರು ನೆನಪುಗಳು ನುಗ್ಗಿ ಬಂದು, ಎರೆಯಂಗದೇವನಿಗೆ, ಅಷ್ಟು ದಿನಗಳ ಸಾಹಸಮಯ ರೋಮಾಂಚಕಾರೀ ಜೀವನ ಬರಡಾದಂತೆ, ತನ್ನ ಬಾಳೇ ಬಾಳಿನ ಬಹು ಡೊಡ್ಡ ಅಣಕವಾದಂತೆ ತೋರಿ ಹೃದಯಕ್ಕೆ ಅಸಹ್ಯ ವೇದನೆಯಾದಂತತಾಯಿತು.

'ಮಾಡಿದ ಕೆಲಸ ವಿಫಲವಾಯಿತು. ಬದುಕು ಸರೀಕರ ನಡುವೆ ನಗೆಪಾಟಲಾಯಿತು. ಇನ್ನು ಬದುಕುವುದೇಕೆ? ಸ್ನೇಹ, ರಾಜ್ಯ—ಎರಡನ್ನೂ ಕಳೆದುಕೊಂಡು ಅಪಮಾನದ ಹಿರಿ ಹಂದರವಾದ ಈ ಬದುಕನ್ನು ಹೊತ್ತು ಬಾಳುವುದೇಕೆ?'

ಈ ವಿಫಲತೆಯ ಭಾವನೆಯಲ್ಲಿ, ಉಂಡ ಅನ್ನ ವಿಷವಾಗಿ, ಮಲಗಿದ ಮಂಚ ಶರಶಯ್ಯೆಯಾಗಿ ಬಳಲಿದ ಎರೆಯಂಗದೇವ.

ಕಂಬನಿಗರೆವ ವಿನಯಾದಿತ್ಯ-ಕಣ್ಣಿನ ಕಾಂತಿಯಳಿದ ಎರೆಯಂಗದೇವ, ಇವರಿಬ್ಬರನ್ನೂ ಕಂಡು ಉಳಿದವರಿಗೂ ಉಸಿರಿಡುವುದು ಹೊರಲಾಗದ ಹೊರೆಯಾಗಿ ತೋರಿತು.

ಎಲ್ಲರ ಮುಖಗಳೂ ನಿಸ್ತೇಜ, ಎಲ್ಲರ ಕಣ್ಣುಗಳೂ ಕಾಂತಿಹೀನ-ಎಲ್ಲರ ನಡಿಗೆಯೂ ನಿರ್ಜೀವ ಯಾಂತ್ರಿಕ ಚಲನೆ. ವಸಂತ ಯೌವನ ಕಾಂತಿಯಿಂದ ನಳನಳಿಸುತ್ತಿದ್ದ ವನರಮಣಿಗೆ ಇದ್ದಕಿದ್ದಂತೆಯೇ ಘೋರ ಹಿಮಂತದ ಮುಪ್ಪಡರಿ, ನಿಶ್ಚಲ ನೀರವತೆ ನೆಲಸಿದಂತಾಗಿತ್ತು ಹೊಯ್ಸಳರ ಬಿಡಾರ.

ಒಬ್ಬೊಬ್ಬರಿಗೆ ಒಂದೊಂದು ಕೊರಗು, ಒಬ್ಬೊಬ್ಬರಿಗೆ ಒಂದೊಂದು ಚಿಂತೆ—

ಆ ಎಲ್ಲರ, ಎಲ್ಲ ಕೊರಗು, ಎಲ್ಲ ಚಿಂತೆಗಳ ಭಾರವೂ 'ಇದೆಲ್ಲದಕ್ಕೂ ನಾನೇ, ನನ್ನ ನಡತೆಯೇ ಕಾರಣ' ಎಂದುಕೊಂಡ ವಿಷ್ಣುವರ್ಧನನ ಹೃದಯದ ಮೇಲೆ ಬಿದ್ದು ಆತನ ಹೃದಯ ಬಹು ದೊಡ್ಡ ಬಂಡೆಯಡಿಗೆ ಸಿಲುಕಿದ ಹುಲ್ಲೆಸಳಾಗಿತ್ತು.

ಎಲ್ಲರ ಮುಖದಿಂದ ಓಡಿಹೋದ ಈ ನಗೆಯನ್ನು ಮತ್ತೆ, ಹೇಗೆ, ಎಲ್ಲಿಂದ ಗೆದ್ದು ತರುವುದು?

'ನಿನ್ನ ಉದ್ಧಟತನದ ಪರಿಣಾಮವನ್ನು ನೋಡಿದೆಯಾ ಬಿಟ್ಟಿಯಣ್ಣ?'

—ಎಂದ ತಾಯಿಗೇನೊ, ಗಂಡುಮಗನಂತೆ 'ಲೋಕವನ್ನೇ ಗೆದ್ದು ಈ ಅಪಮಾನವನ್ನು ತೊಡೆಯುತ್ತೇನೆ' ಎಂದು ಹೇಳಿದುದಾಗಿತ್ತು.

ಆದರೆ ಮುಪ್ಪಿಗಿಂತಲೂ ಘೋರವಾದ ಶೋಕಕ್ಕೆ ತುತ್ತಾದ ಅಜ್ಜ ವಿನಯಾದಿತ್ಯನಿಗೆ, ಬಾಳಿನ ಕಣ್ಣೇ ಕಮರಿ ಹೋದಂತೆ ತಲೆಯ ಮೇಲಿ ಕೈಹೊತ್ತು ಕುಳಿತ ತಂದೆ ಎರೆಯಂಗದೇವನಿಗೆ ಏನು ಹೇಳುವುದು? ಏನು ಸಮಾಧಾನ, ಯಾವ ಭರವಸೆ? ತಾನು ಏನು ಹೇಳಿದರೂ, ಅವರಿಗೆ ಸಮಾಧಾನವಾಗದೆಂದು ತಿಳಿದಿದ್ದರೂ, 'ಓಲಗದಲ್ಲಿ ನೀನು ಮಾಡಿದುದು ತಪ್ಪಲ್ಲ' ಎಂದು ನೂರು ಬಾರಿಯ ಪ್ರಶ್ನೆಗೆ ನೂರನೆಯ ಬಾರಿ ಹೃದಯ ಉತ್ತರವಿತ್ತಿದ್ದರೂ, 'ಅದರಿಂದಲಾದರೂ ಅವರ ಜೀವಕ್ಕೆ ಅಲ್ಪ ಶಾಂತಿಯಾದರೆ, ಅಷ್ಟಾದರೂ ಆಗಲಿ' ಎಂದುಕೊಂಡು ತನ್ನ ತಂದೆಯ ಬಳಿಗೆ ಹೋಗಿ ಬೇಡಿದ—

'ಅಪ್ಪಾಜಿ, ಇಷ್ಟೆಲ್ಲ ಅಪಮಾನ, ಅನಾಹುತಗಳಿಗೂ ನಾನೇ ಕಾರಣ. ನನ್ನಿಂದ ನಿಮಗೆಷ್ಟು ಬೇಸರವಾಗಿದೆಯೆಂದು ನಾನು ಬಲ್ಲೆ ಅಪ್ಪಾಜಿ. ಮಗನಾಗಿ, ನಿಮಗೆ

ಸಂತೋಷಪಡಿಸಬೇಕಾದ ನಾನೇ ನಿಮ್ಮ ದುಃಖಕ್ಕೆ ಕಾರಣನಾದೆ. ಈಗ ನಾನೇನು ಮಾಡಲಿ ಹೇಳಿ? ಆದದ್ದಾಯಿತು-ಇನ್ನೆಂದೂ ಈ ನಾಲಗೆ ದುಡುಕಲು ಬಿಡುವುದಿಲ್ಲ. ಇಂದು ಮಾಡಿದ ತಪ್ಪಿಗೆ ಬೇಕೆಂದರೆ ನನ್ನ ನಾಲಗೆಯನ್ನು ಕತ್ತರಿಸಿ ನಿಮ್ಮ ಕಾಲ ಮೇಲೆ ಇಡುತ್ತೇನೆ'

'ಆಗಲಿ ಎಂದರೆ ಆದರಿಂದ ನಿನ್ನ ನಾಲಗೆ ಹೋಗುತ್ತದೆಯೇ ಹೊರತು, ಮತ್ತೇನು ಉಪಯೋಗ ಬಿಟ್ಟಿಯಣ್ಣ?'

—ಶುಷ್ಕವಾದ ಧ್ವನಿಯಲ್ಲಿ ಹೇಳಿದ ಎರೆಯಂಗದೇವ.

'ಅದು ಬೇಡವಾದರೆ—ಹೇಳಿ—ನಿಮಗೆ ಸಂತೋಷವಾಗುವುದಾದರೆ, ನಾನೇ ಹೋಗಿ ಚಕ್ರವರ್ತಿಗಳ ಪಾದಕ್ಕೆ ತಲೆಚಾಚಿ ಬೇಡಿ ಬರುತ್ತೇನೆ'

'ಬೇಡುತ್ತೀಯಾ——ಏನು ಬೇಡುತ್ತೀಯ? ಹೊಯ್ಸಳರಿಂದ ಕಿತ್ತುಕೊಂಡ ಅಧಿಕಾರವನ್ನು ಮತ್ತೆ ಅನುಗ್ರಹಿಸಿ ಎಂದೇ? ಈ ರಾಜ್ಯ ಹೋದದ್ದಕ್ಕೆ ನಾನು ವ್ಯಥೆಪಡುತ್ತಿಲ್ಲ ಬಿಟ್ಟಿಯಣ್ಣ. ದೇವರು ಕೊಡದ ರಾಜ್ಯವನ್ನು, ನಮ್ಮ ತೋಳೇ ಗೆಲ್ಲದ ರಾಜ್ಯವನ್ನು ಬೇರೆ ಯಾರು ತಾನೇ ಕೊಡುವುದು ಸಾಧ್ಯ? ರಾಜ್ಯ ಹೋಯಿತು ಎಂದು ನಾನು ದುಃಖಪಡುತ್ತಿಲ್ಲ ಬಿಟ್ಟಿಯಣ್ಣ, ನಮ್ಮ ಮಾನಕ್ಕೆ ಊನವಾಯಿತೆಂದು ನಾನು ದುಃಖ ಪಡುತ್ತಿದ್ದೇನೆ. ಹೋದ ಮಾನ ಕಂಡವರ ಕಾಲಿಗೆ ಬಿದ್ದರೆ ಮತ್ತೆ ಬರುವುದಿಲ್ಲ. ಹೆಣ್ಣಿನ ಸತೀತ್ವವಿದ್ದಂತೆ ಅದು. ಒಮ್ಮೆ ಭ್ರಷ್ಟವಾದ ಬಳಿಕ ಸದಾಭ್ರಷ್ಟವೇ. ಹೋಯಿತು; ಅಲ್ಲಿಗೆ ಮುಗಿದೇ ಹೋಯಿತು.'

ಎರೆಯಂಗದೇವ ಜಡವಾಗಿ ಹೇಳಿದ ಆ ಮಾತುಗಳನ್ನು ಕೇಳಿ ವಿಷ್ಣುವರ್ಧನನಿಗೆ ಏಕೋ, ಹೇಗೋ ತಾವೆಲ್ಲರೂ ಕೊನೆಗಾಣದ ಅಪಾರ ಅಂಧಕಾರದ ಕೆಸರಿನಾಳದಲ್ಲಿ ಕುಸಿಯುತ್ತಿರುವಂತೆ ಭಾಸವಾಗಿ ಭಯವಾಯಿತು.

'ಹಾಗಾದರೆ. ಹಾಗಾದರೆ ಮುಂದೇನು ದಾರಿ ಅಪ್ಪಾಜಿ?'

'ಏನೆಂದೇ ನಾನೂ ಚಿಂತಿಸುತ್ತಿದ್ದೇನೆ ಬಿಟ್ಟಿಯಣ್ಣ. ಈ ಆಕಸ್ಮಿಕ ಅಂಧಕಾರದಲ್ಲಿ ನನ್ನ ಮತಿಯೂ ಮಸಣಿಸಿ ಹೋಗಿದೆ'

'ಅಂದರೆ . ನಾವು ಕಳೆದುಕೊಂಡದ್ದನ್ನು ಮತ್ತೆ ಗಳಿಸುವ ದಾರಿಯೇ ಇಲ್ಲವೇ?'

'ಇರಬೇಕು—ಇದ್ದೇ ತೀರಬೇಕು'

—ತಟಕ್ಕನೆ ಉಕ್ಕಿಬಂದ ಹಟದಲ್ಲಿ ತುಟಿಕಚ್ಚಿ ಹೇಳಿದ ಎರೆಯಂಗದೇವ—

'ಗಳಿಸುವ ದಾರಿ ಇದ್ದೇ ತೀರಬೇಕು. ಈ ಕಲಂಕದ ಕೆಸರಿನಲ್ಲಿಯೇ ಕೊಳೆತು ಹೊಗುವ ಕೊಚ್ಚೆಯ ಹುಳುವಲ್ಲ ಹೊಯ್ಸಳ ವಂಶ. ಹುಟ್ಟಿದ ಒಂದು ಮಗು ಹೋದ ಮಾತ್ರಕ್ಕೇ ತಾಯಿ ಬಂಜೆಯಾಗುವುದಿಲ್ಲ ಬಿಟ್ಟಿಯಣ್ಣ. ಅವರು ಕಳೆದೆವು ಎಂದುಕೊಂಡುದನ್ನೇ, ನಾವು ಉಳಿಸಿಕೊಂಡೆವು ಎಂದು ಲೋಕಕ್ಕೆ ತೋರಿಸಿಕೊಡುವ ದಾರಿ ಏನೆಂದು ನಾನು ಚಿಂತಿಸುತ್ತಿದ್ದೇನೆ. ಸದ್ಯಕ್ಕೆ ನನ್ನ ಚಿಂತೆಗೆ ನನ್ನನ್ನು ಬಿಡು. ನಿನ್ನ ಪಾಡಿಗೆ ನೀನು ನಿಶ್ಚಿಂತನಾಗಿರು'

'ಇಷ್ಟಕ್ಕೆಲ್ಲಾ ನಾನೇ ಕಾರಣನೆಂದು ಅರಿತರಿತೂ ನಾನು ಹೇಗೆ ನಿಶ್ಚಿಂತವಾಗಿರಲಿ ಅಪ್ಪಾಜ?'

—ತನ್ನೆದೆಯ ಬೇಗೆಯಲ್ಲಿ ಬೇಯುತ್ತಾ ಕಳಕಳಿಯಿಂದ ಕೇಳಿದ ವಿಷ್ಣುವರ್ಧನ.

'ನೀನೇ ಕಾರಣ ಎಂದು ನಿನಗೆ ನಂಬಿಕೆಯಾಗಿದೆಯೇ?'

—ವಿಷ್ಣುವರ್ಧನನ ಮಾತನ್ನೇ ನಂಬದವನಂತೆ ಕೇಳಿದ ಎರೆಯಂಗದೇವ.

'ನಾನು, ನನ್ನ ನಾಲಗೆ ಕಾರಣವಲ್ಲದೆ, ಮತ್ತಾರು?'

'ಯಾರೆಂಬುದನ್ನೇ ನಾನೂ ಯೋಚಿಸುತ್ತಿದ್ದೇನೆ ಬಿಟ್ಟಿಯಣ್ಣ. ಹೊಯ್ಸಳರ ಅಪಮಾನಕ್ಕೆ ನೀನೇ ಕಾರಣನೆಂದು ನನಗೆ ನಂಬಿಕೆಯಾಗಿದ್ದಿದ್ದರೆ, ನಿನ್ನ ಕತ್ತನ್ನು ಕತ್ತರಿಸಿಡಲು ಒಂದು ಗಳಿಗೆಯೂ ನಾನು ಹಿಂದುಮುಂದು ನೋಡುತ್ತಿರಲಿಲ್ಲ. ನೀನು ಮಗನಿರಬಹುದು, ಆದರೆ ವಂಶಕ್ಕೆ ಆಪಮಾನಕಾರಕನಾದವನು ಮಗನೆಂಬ ಭ್ರಮೆಗೆ ನಾನೆಂದೂ ಬಲಿಯಾಗುತ್ತಿರಲಿಲ್ಲ.'

—ಯಾವ ಅಳುಕೂ ಇಲ್ಲದೆ ಸತ್ಯವನ್ನೇ ಆಡುವ ಧ್ವನಿಯಲ್ಲಿ ಹೇಳಿದ ಎರೆಯಂಗದೇವ.

'ನಾನು ತಪ್ಪಿತಸ್ಥನಲ್ಲ ಎಂದರೆ ಮತ್ತಾರು ತಪ್ಪಿತಸ್ಥರೆಂದು ನಿಮ್ಮ ಭಾವನೆ ಅಪ್ಪಾಜಿ? ನಾನು ತಪ್ಪಿತಸ್ಥನಲ್ಲವೆಂದು ಹೇಳಿ ಇಂದು ನೀವು ನನಗೆ ನಿಜವಾಗಿಯೂ ಪುನರ್ಜನ್ಮವಿತ್ತಿರಿ. ಹಾಗೇ ಈ ಅಪಮಾನಕ್ಕೆ ಯಾರು ಕಾರಣರೆಂದೂ ಹೇಳಿ, ಅವರ ತಲೆಯನ್ನು ತರಿದು, ನಿಮ್ಮ ಮಗನಾದದ್ದು ಸಾರ್ಥಕವಾಯಿತು ಏನಿಸುತ್ತೇನೆ'

—ತಂದೆ ತಾನು ಕಾರಣನಲ್ಲ ಎಂದು ಹೇಳಿದುದನ್ನು ಕೇಳಿ ವಿಷ್ಣುವರ್ಧನ ಉತ್ಸಾಹದಿಂದ ನುಡಿದ.

'ಅಷ್ಟು ಬೇಗ ಯಾವ ತೀರ್ಮಾನಕ್ಕೂ ಬರಬೇಡ ಬಿಟ್ಟಿಯಣ್ಣ. ಇಂದು ನಮಗಾದ ಆಮಾನಕ್ಕೆ ನೀನು ಕಾರಣನಲ್ಲ ಎಂದು ನಾನು ಹೇಳಲಿಲ್ಲ. ಆದರೆ ಎಷ್ಟುಮಟ್ಟಿಗೆ ಕಾರಣ ಎಂದು ನಿರ್ಧರಿಸಲಾರದವನಾಗಿದ್ದೇನೆ.'

'ಅಂದರೆ'

'ಅಂದರೆ ನೀನು ಕೊಂಬೆ ಮುರಿಯಲು ಕಡೆಗಳಿಗೆಯಲ್ಲಿ ಕಾರಣವಾದ ಹಕ್ಕಿಯೋ, ಅಥವಾ ನೀನೇ ಶಾಖೆಯನ್ನು ಛೇದಿಸಿದ ಕೊಡಲಿಯೋ ಎನ್ನುವುದು ಇನ್ನೂ

ನನ್ನ ಬುದ್ಧಿಗೇ ನಿರ್ಧಾರವಾಗಿ ತಿಳಿದಿಲ್ಲ. ನಾಳೆ ಹಗಲು ಚಕ್ರವರ್ತಿಗಳನ್ನು ಕಂಡು ಬಳಿಕ ನಿರ್ಧರಿಸುತ್ತೇನೆ. ಅದು ಹೇಗಾದರೂ ಆಗಲಿ ಬಿಟ್ಟಿಯಣ್ಣ.- ಸದ್ಯಕ್ಕೆ ಇಷ್ಟಂತೂ ಖಚಿತ: ನಾಳೆಗೆ ನಮ್ಮ ಬಳ್ಳಿಗಾಮೆಯ ನೀರಿನ ಋಣ ತೀರುತ್ತದೆ. ನಮ್ಮವರೆಲ್ಲರಿಗೂ ಪ್ರಯಾಣಕ್ಕೆ ಸಿದ್ಧವಾಗಲು ತಿಳಿಸಿ ನೀನು ಹೋಗಿ ಮಲಗು'

—ಎಂದು ಹೇಳಿ ಎರೆಯಂಗದೇವ ಮಗನೊಂದಿಗೆ ಮಾತು ಮುಗಿಸಿದ.

# ೧೨

ಹಿಮಗಾಲದ ಬೆಳ್ಮುಗಿಲು ತುಂಬಿದ ಮುಗಿಲಿನಲ್ಲಿ, ಕುಡುಗೋಲಿನಾಕಾರದ ಚೌತಿಯ ಚಂದ್ರ ಕಿತ್ತಳೆಯತೊಳೆಯಂತೆ ಮಂದಪ್ರಕಾಶದಿಂದ ಹೊಳೆಯುತ್ತಿದ್ದ. ಹಂಸಸಕ್ಷಿಯ ಕೆದರಿದ ತುಪ್ಪಳದಂತೆ ಅಲ್ಲಲ್ಲಿ ಹರಡಿದ ಬೆಳ್ಳನೆಯ ಗರಿಮೋಡಗಳ ನಡುವೆ ತಾರೆಗಳು ಎಲ್ಲೋ ಅವಿತುಕೊಂಡು ಮೇಘಗಳು ಕಿಕ್ಕಿರಿದ ಬಾನಿನಲ್ಲೂ ಚಂದ್ರ ಏಕಾಂಗಿಯಾಗಿ, ಆ ಒಂಟಿತನವನ್ನು ಸಹಿಸಲಾರದೆಯೋ ಎಂಬಂತೆ, ಪಡುವಣದತ್ತ ಧಾವಿಸುತ್ತಿದ್ದ.

'ನೀನಿನ್ನು ಹೋಗಿ ಮಲಗು' ಎಂದು ಎರೆಯಂಗದೇವ ಹೇಳಿಕಳುಹಿಸಿದ್ದರೂ, ಚಿತ್ತದಲ್ಲಿ ಹೊತ್ತಿದ ಚಿಂತೆಯುರಿಯಲ್ಲಿ ಮಲಗಲು ಮನಸ್ಸಾಗದೆ, ಶಯ್ಯೆಯಲ್ಲಿ ಹೊರಳುತ್ತಾ ಇರುಳು ಕಳೆಯಲಾಗದೆ, ವಿಷ್ಣುವರ್ಧನ ಬಯಲ ತಂಗಾಳಿಯನ್ನಾಶಿಸಿ, ಮನೆಯ ಬಳಿಯ ಉದ್ಯಾನದಲ್ಲಿಯ ಶಿಲಾಪೀಠದಲ್ಲಿ ಕುಳಿತಿದ್ದ, ನಿದ್ದೆ ಹಾರಿಹೋದ ಕಣ್ಣುಗಳಿಂದ ಮುಗಿಲನ್ನು ನೋಡುತ್ತಾ.

ಅವನ ಮನಸ್ಸಿನ ಬೇಗೆಯನ್ನರಿತ್ತು, ಅನುಕಂಪದಿಂದ ಈಕ್ಷಿಸುವ ಕರುಣೆಯ ಕಣ್ಣುಗಳಂತೆ, ಅಲ್ಲೊಂದು ಇಲ್ಲೊಂದು ಕ್ಷೀಣಕಾಂತಿಯ ತಾರೆಗಳು ಮಿನುಗುತ್ತಿದ್ದುವು. ತನ್ನ ಪಯಣದ ಹಾದಿಯಲ್ಲಿ ಇದಿರಾದ ತಾರೆಗಳನ್ನು ನಿಂತು ಮಾತನಾಡಿಸಲೂ ಅವಕಾಶವಿಲ್ಲದವನಂತೆ, ಚಂದ್ರ ಸರಿಯುತ್ತಿದ್ದ-ಅಸ್ತಮಿಸಲು.

ಆ ಚಂದ್ರನನ್ನು ನೋಡನೋಡುತ್ತಾ ವಿಷ್ಣುವರ್ಧನನಿಗೆ ಏಕೋ ಅವನೂ ತಮ್ಮಂತೆಯೇ ಎನಿಸಿತು.

ಚಂದ್ರ-ರಾತ್ರಿಯ ರಾಜ. ಇರುಳಿನ ಮುಗಿಲು ಅವನ ಸಾರ್ವಭೌಮಾಧಿಕಾರಕ್ಕೆ ಒಳಪಟ್ಟ ಸಾಮ್ರಾಜ್ಯ. ಆದರೆ ಇಂದು ಅವನಿಗೆ ಸಂಪೂರ್ಣ ರಾತ್ರಿಯ ಅಧಿಕಾರವೂ ಇಲ್ಲ-ಆ ಮುಗಿಲ ಮೇಲೆ. ಇರುಳು ಮುಗಿವ ಮೊದಲೇ, ತನ್ನ ಆಧಿಕಾರವನ್ನು ಕಿರುತಾರೆಗಳಿಗೊಪ್ಪಿಸಿ ಪಡುವಲದಾಚೆ ತೆರಳಬೇಕು-ಗಂಗವಾಡಿಯ ಆಧಿಪತ್ಯದಿಂದ, ಚಂದ್ರವಂಶಜರಾದ ಹೊಯ್ಸಳರು ತೆರಳಬೇಕಾಗಿ ಬಂದಂತೆ !

ವಿಷ್ಣುವರ್ಧನನ ಹೃದಯದಲ್ಲಿ ಆ ಭಾವನೆ ಏಕೆ ಮೂಡಿತೋ-ಅಂತೂ ಆ ಭಾವನೆ ಮೂಡಿ ಪುಷ್ಯಮಾಸದ ಇರುಳಿನ ಕುಳಿರ್ಗಾಳಿ, ಅವನಲ್ಲಿಯ ಅಶಾಂತಿಯನ್ನು ಹೆಚ್ಚಿಸಿ ಕಿಡಿಗೆದರಿತು.

ಹೋಗಬೇಕೇ-ಹೊಯ್ಸಳ ಸಾಮ್ರಾಜ್ಯ ಚಂದ್ರ ತನ್ನ ಪೂರ್ಣಿಮಾಕಾಂತಿಯಿಂದ ಜಗತ್ತನ್ನು ಬೆಳಗುವ ಮೊದಲೇ ಅಸ್ತಮಾನವಾಗಬೇಕೇ?

ಕ್ಷೀಣ ಪ್ರಕಾಶದ ನಕ್ಷತ್ರಗಳಂಥ ಸಾಮನ್ತರ ಉಪಭೋಗಕ್ಕೆ ಭೂಮಿಯನ್ನು ಒಪ್ಪಿಸಿ, ಅಪಮಾನ ದಿಗಂತದಲ್ಲಿ ಮುಖ ಮರೆಸಿಕೊಳ್ಳಬೇಕೇ?

ಮುಖ ಮರೆಸಿಕೊಳ್ಳಬೇಕು-ಹಾಗೆಂದು ಚಕ್ರವರ್ತಿ ಇಚ್ಛಿಸಿದ್ದ.

ಅದಕ್ಕೆ ಕಾರಣ-ತಾನು!

ಎರೆಯಂಗದೇವನೇನೋ ಇದಕ್ಕೆ ನೀನು ಕಾರಣನಲ್ಲವೆಂಬಂತೆಯೇ ಮಾತನಾಡಿದ್ದ. ಆದರೂ ವಿಷ್ಣುವರ್ಧನನಿಗೆ ಅ ಮಾತು ನಂಬಿಕೆಯಾಗಿರಲಿಲ್ಲ.

ಓಲಗದಲ್ಲಿ ಪ್ರಧಾನಾಮಾತ್ಯರಿಗೆ ಎದುರು ಉತ್ತರಕೊಟ್ಟ ತನ್ನ ನಡತೆಯೊಂದಲ್ಲದೆ, ಚಕ್ರವರ್ತಿಯ ತೀರ್ಮಾನಕ್ಕೆ ಬೇರೇನು ಕಾರಣ?

ಇರಬಹುದು-ಹಿಸುಣರ ಹೇಳಿಕೆಯೂ ಕಾರಣವಿರಬಹುದು, ಪ್ರಧಾನಾಮಾತ್ಯರ ಕುಹಕ ಸಲಹೆಯೂ ಚಕ್ರವರ್ತಿಗೆ ಪ್ರೇರೇಪಣೆಯಾಗಿರಬಹುದು— ಏನಾದರೂ ತನ್ನ ನಡತೆಯ ಕಾರಣವೊಂದಿಲ್ಲದಿದ್ದಲ್ಲಿ, ಈ ಅಪಮಾನದ ಬರಸಿಡಿಲು ಹೊಯ್ಸಳರ ಗೌರವವೃಕ್ಷಕ್ಕೆ ಎರಗುತ್ತಿರಲಿಲ್ಲ.

ಅಲ್ಲವೇ-ತನ್ನ ಉದ್ಧಟತನ ಕಾರಣವಾಗದಿದ್ದಲ್ಲಿ ಇಷ್ಟು ಬೇಗ, ಅದರ ಬೆನ್ನಹಿಂದೆಯೇ ಈ ಪರಿಣಾಮ ಬಂದಡಸುತ್ತಿರಲಿಲ್ಲ.

ಇರಬೇಕು-ನಾನೇ ಇದಕ್ಕೆ ಕಾರಣನಿರಬೇಕು.

ನಾನೇ ಕಾರಣ—-

ಯಾರಿಂದ ಹೊಯ್ಸಳ ರಾಜ್ಯ ವಿಸ್ತಾರವಾಗಬೇಕಾಗಿತ್ತೋ, ಯಾರಿಂದ ಮತ್ತಷ್ಟು ಹೆಚ್ಚಿನ ಅಭಿವೃದ್ಧಿಯ ಬಂಗಾರದ ದಿನಗಳನ್ನು ದೇಶ ನಿರೀಕ್ಷಿಸುತ್ತಿತ್ತೋ, ಯಾರಿಂದ ಹೊಯ್ಸಳ ವಂಶದ ಕೀರ್ತಿ ಬೆಳಗಬೇಕಾಗಿತ್ತೋ-ಅವನಿಂದ ಹೊಯ್ಸಳ ರಾಜ್ಯಕ್ಕೆ ಈ ಅಪಮಾನ ಕಲಂಕ!

ತನ್ನ ತಂದೆ, ಅತನ ತಂದೆ, ಆತನ ತಂದೆಯ ತಂದೆಗಳು ತಮ್ಮ ಮೈಯ ನೆತ್ತರನ್ನೇ ಎರೆದು ಬೆಳಸಿದ ಬಳ್ಳಿ—ಹೊಯ್ಸಳ ರಾಜ್ಯ—

ಕೋಟ್ಯಾಂತರ ಹೊಯ್ಸಳ ಪ್ರಜೆಗಳ ತ್ಯಾಗ ಬಲಿದಾನದ ವೇದಿಕೆಯ ಮೇಲೆ ನಿರ್ಮಿತವಾದ ಕೀರ್ತಿ ಗೋಪುರ—

ಶತಮಾನ ಸಂವತ್ಸರಗಳ ಪ್ರಯತ್ನ ಪೌರುಷಗಳಿಂದ ನಿರ್ಮಿತವಾದ ಮರ್ಯಾದೆಯ ಮಹಾಸೌಧ—

ಇಂದು ತನ್ನಿಂದ, ತನ್ನ ಉದ್ಧಟತನದಿಂದ ಅಪಮಾನದ ಧೂಳಿನಲ್ಲಿ ಕೆಡೆದು ಹೊರಳಲಿದೆ.

ಕೊಡಲಿಯ ಮರದ ಕಾವೇ ಕೊಡಲಿಯ ಬಲವಾಗಿ, ವನದ ಭೀಮತರುವನ್ನು ಕಡಿದುರುಳಿಸುವಂತೆ, ಮನೆಯ ಮಗನೇ ಇಂದು ಮನೆಯ ಅಪಮಾನಕ್ಕೆ, ಕೀರ್ತಿ ಬಳ್ಳಿ ಕುಸಿದು ಬೀಳಲು ಕಾರಣನಾಗಿದ್ದಾನೆ.

ಇದಕ್ಕಾಗಿಯೇ ನನ್ನ ತಂದೆ ನಾನು ಜನಿಸಬೇಕೆಂದು ಅಷ್ಟು ಬಯಸಿದ್ದು? ನನ್ನ ತಾಯಿ ಅಷ್ಟು ವ್ರತೋಪವಾಸ ಮಾಡಿ ಪಡೆದು, ಮೈ ರಕ್ತವನ್ನೇ ಹಾಲಾಗಿ ಎರೆದು ಬೆಳೆಸಿದ್ದು?

'ನಿರ್ಭಾಗ್ಯ ವಿಷ್ಣುವರ್ಧನ ಇಷ್ಟಕ್ಕಾಗಿಯೇನೇ ನೀನು ಹುಟ್ಟಿದ್ದು?'

ಹಗಲಿನ ಹಸಿರು, ಹೂವಿನ ಬಣ್ಣ ಎಲ್ಲವನ್ನೂ ಕಳೆದುಕೊಂಡು, ರಾತ್ರಿಯ ಕತ್ತಲಲ್ಲಿ ಮೈ ಮುದುರಿ ಕುಳಿತ ಕರಾಳ ಪ್ರೇತಗಳಂತೆ ಕಾಣುವ ಗಿಡಮರ ಬಳ್ಳಿಗಳ ನಡುವೆ ಸುಳಿದು ಬಂದೆ ಚಳಿಗಾಳಿಯೇ ಅವನನ್ನು ಅಣಕಿಸಿ ಕೇಳಿದಂತೆ ತೋರಿತು—

'ನಿರ್ಭಾಗ್ಯ ವಿಷ್ಣುವರ್ಧನ—ಇಷ್ಟಕ್ಕಾಗಿಯೇನೇ ನೀನು ಹುಟ್ಟಿದ್ದು?'

ಅಶಾಂತಚಿತ್ತದಲ್ಲಾ ಮಾತು ಕೇಳಿ ಬಂದು, ಹಸುಳೆತನದಲ್ಲಿ ಕುಡಿದ ತಾಯ ಮೊಲೆಹಾಲು ಹೊಟ್ಟೆಯಲ್ಲಿ ತಳಮಳಗೊಂಡು ಕಲಕಿದಂತಾಯಿತು.

'ವಿಫಲ, ವಿಫಲ, ನೀನು ಹುಟ್ಟಿದ್ದು ವಿಫಲ'

ಇರುಳ ತಂಗಾಳಿ ಸುಳಿಸುಳಿದು ಹೇಳಿ, ಅವನ ಮೈಯ ನೆತ್ತರನ್ನು ಹೆಪ್ಪುಗಟ್ಟಿಸಿ ಆಪಾದಿಸಿತು, ನೀಲನಭದ ತಾರೆಗಳು ತಮ್ಮ ಕ್ಷೀಣಕಾಂತಿಯ ಕಿರಣಾಂಗುಲಿಗಳಿಂದ ಅವನ ಮುಖವನ್ನು ತಿವಿದು ಹಂಗಿಸಿದವು.

ನಿಶ್ಶಬ್ದ ನಿಶೆಯಲ್ಲಿ, ತಂಗಾಳಿಯ ಹೆಪ್ಪುಗಟ್ಟಿಸುವ ಸ್ವರದಲ್ಲಿ, ನಕ್ಷತ್ರಗಳು ಮಾಡಿದ ಆಪಾದನೆಯನ್ನು ಕೇಳಿ ವಿಷ್ಣುವರ್ಧನನ ಹೃದಯದಲ್ಲಿ ದುಃಖದ ನೆರೆ ತುಂಬಿತು. ನಕ್ಷತ್ರಗಳನ್ನು ಕೋಡಲು ನಾಚಿದವನಂತೆ ತಲೆ ತಗ್ಗಿಸಿ ಕುಳಿತ.

ತಣ್ಣನೆಯ ಗಾಳಿ ಸೋಕಿದ ಕಣ್ಣುಗಳಲ್ಲಿ ಕಿಚ್ಚು ಹೊತ್ತಿಸಿದಂತಾಗಿ, ಎಂದೂ ಕಂಬನಿಗರೆದು ಅಭ್ಯಾಸವಿಲ್ಲದ ಅವನ ಕಣ್ಣುಗಳು, ತುಂಬಿ ಬಂದ ಉಷ್ಣಾಶ್ರುವಿನ ಭಾರವನ್ನು ಹೊರಲಾರದೆ ಚಡಪಡಿಸಿದವು.

ಚಳಿಗಾಳಿ ಕುಳಿರ್ಬೆರಳಿನಿಂದ ಅವನ ಕರುಳನ್ನೇ ತಿವಿದು ಕೇಳಿತು—

'ಹೇಳು ಈಗೇನು ಮಾಡುತ್ತೀಯ? ನಿನ್ನಿಂದ ವಂಶಕ್ಕೆ ಅಪಮಾನವಾಯಿತಲ್ಲಾ. ಆ ಅಪಮಾನವಾಂಶುವನ್ನು ಹೇಗೆ ತೊಡೆಯುತ್ತೀಯ? ನಿನ್ನ ಹೇಡಿ ಕಂಬನಿಗಳಲ್ಲಿ, ಅಪವಿತ್ರವಾದುದನ್ನು, ಕಲಂಕಿತವಾದುದನ್ನು ಮತ್ತೆ ಪರಿಶುದ್ಧಗೊಳಿಸಬಲ್ಲ ಗಂಗಾಶಕ್ತಿಯಿದೆಯೇ?'

'ಅಳುತ್ತೀಯಾ? ಹೂ, ಅತ್ತು ಬಿಡು. ಆ ಕಂಬಳಿಗಳನ್ನೇಕೆ ವೃಥಾ ತಡೆ ಹಿಡಿಯುತ್ತೀಯ? ಅಯ್ಯೋ ಹೇಡಿ!'

'ಅಳು! ಅಪಮಾನದಿದಿರು—ಅಳು! ಅದು—ಗಂಡಸಲ್ಲ ಕೈಲಾಗದ ಹೆಣ್ಣು ಮಾಡಬೇಕಾದ ಕೆಲಸ.'

—ಕತ್ತಲೆಯನ್ನು ಬಳಿದು, ಅಲ್ಲಲ್ಲಿ ಹಾಕಿದ ರಾಸಿಗಳಂತೆ ಕಾಣುವ ಪೊದೆಗಳ ಎಡೆಯಿಂದ ಯಾವುಯಾವೋ ಧ್ವನಿಗಳು ಪಿಸುದನಿಯಲ್ಲಾಡಿದವು.

'ಅಳು—ಅಪಮಾನದಿದಿರು ಅಳು! ಅದು ಹೆಣ್ಣಿನ ಕೆಲಸ'

—ಎಂದು ಒಂದು ಧ್ವನಿ ನುಡಿದರೆ—

'ಅಪಮಾನವಾದಾಗ ಹೆಣ್ಣಾದರೂ ಅಳುತ್ತಾಳೆಯೇ?'

—ಮತ್ತಾವುದೋ ನೆನಪು ಅವನನ್ನು ಕೇಳಿತು.

ಹೆಣ್ಣು ಅಳುತ್ತಾಳೆಯೇ?

ಇದ್ದಕ್ಕಿದ್ದ ಹಾಗೇ ಸಹಸ್ರ ಜಿಹ್ವೆಯಿಂದ ದಹದಹಿಸುವ ಆಗ್ನಿಯಲ್ಲೇ ಕಡೆದಂಥ ಹೆಣ್ಣುಮೊಗವೊಂದು ಅವನ ನೆನಪಿನಿದಿರು ಮಿಂಚಿತು

'ನೀನು ಬೇಹುಗಾರ್ತಿ ಇರಬೇಕು.'

'ಅಲ್ಲ ನಾನು ಬೇಹುಗಾರ್ತಿಯಲ್ಲ—ಅಂಥ ಹಿಸುಣತನ ಈ ಮನೆಯ ಹೊಸ್ತಿಲನ್ನೂ ಮೆಟ್ಟಲಾರದು.'

—ಮಂಜಿನಮುದ್ದೆ ಜ್ವಾಲಾಮುಖಿಯಂತೆ ಆಸ್ಫೋಟಿಸಿ ನುಡಿಯಿತು. ಭ್ರಮರ ಪಂಜರದಂತಿದ್ದ ಕಣ್ಣುಗಳು, ಸಿಡಿಲಿನ ಮರಿಗಳಾಗಿ ಉರಿದವು, ಅಪಮಾನದ ಪದಾಘಾತದಿಂದ ಕೆರಳಿದ ಸ್ವಾಭಿಮಾನದ ರಕ್ತ ಪತಾಕೆಗಳಂತೆ, ಕಪೋಲಗಳು ರಂಜಿಸಿದವು; ಹುಬ್ಬು ಬಿಗಿದ ಬಿಲ್ಲಾಗಿ, ಉರಿನೋಟದ ಬಾಣ ಹೂಡಿ ನಿಂತವು- ಅಪಮಾನಗಾರನ ವಿಧ್ವಂಸನಕ್ಕೆ ಸಿದ್ಧವಾಗಿ.

'ಅದು ಹೆಣ್ಣು—ನೀನು ಗಂಡು!'

'ಅವಳು ಹೆಗ್ಗಡೆಯ ಮಗಳು—ನೀನು ಮಹಾಮಂಡಲೇಶ್ವರಪುತ್ರ!'

ಅಣಕದ ಬೆರಳಿನಿಂದ ಅವನ ಕರುಳನ್ನು ತಿವಿತಿವಿದು ಹೇಳಿತು ಹೇಮಂತದಿರುಳಿನ ಕುಳಿರ್ಗಾಳಿ

'ಅವಳು ಹೆಣ್ಣು—ನೀನು ಗಂಡು!'

—ಕಿಲಕಿಲ ನಕ್ಕು ಹೇಳಿದವು ಕ್ಷೀಣಕಾಂತಿಯ ನಕ್ಷತ್ರಗಳ ಕಿರಣಜಿಹ್ವೆ,

ಅವಳು ಹೆಣ್ಣು !

ಆ ಹೆಣ್ಣುಮೊಗದ ನೆನಪಿನಿದಿರು, ಉಳಿದೆಲ್ಲ ಭಾವನೆಗಳೂ ಉಡುಗಿ ಹೋಗಿ, ಕ್ಷಾತ್ರನನ್ನು ಮೆರೆದ ಆ ಮೊಗದ ಬಗ್ಗೆ ಅಭಿಮಾನವೊಂದು ತಾನೇತಾನಾಗಿ ಅವನ ಮೈಯನ್ನು ತುಂಬಿತು. ಆ ಅಭಿಮಾನದಲ್ಲಿ ಬೀಗುತ್ತಾ ತನಗೆ ತಾನೇ ಹೇಳಿಕೊಂಡ ವಿಷ್ಣುವರ್ಧನ—

'ಓ, ಎಂಥ ಹೆಣ್ಣು!'

ನೋಡಲು ಲಾವಣ್ಯವತಿ-ಕೆಣಕಿದರೆ ಕಾಳಿಂಗಸರ್ಪ: ಓ ಎಂಥ ಹೆಣ್ಣು!

ಹೆಗ್ಗಡೆಯ ಮಗಳು—ಆದರೇನು—ರಾಜರಾಜೇಶ್ವರನ ಭಾಗ್ಯಮಕುಟದಜ್ಞೂ ನಾಯಕಮಣಿಯಾಗಿ ರಾರಾಜಿಸಿ ಬೆಳಗಬಲ್ಲ ಬಾಲೆ!

ನಿಜ-ಚತುಸ್ಸಮುದ್ರಾಧಿಪತಿಯಾದ ಚಕ್ರವರ್ತಿಯ ಭಾಗ್ಯಭಂಡಾರವನ್ನೂ ಬಡತನದ ಬೀಡಾಗಿ ಕಾಣಿಸುವಂಥ ರೂಪ ಶರಧಿ. ಆ ರೂಪಶರಧಿಯಲ್ಲಿ ಅಲೆಯಲೆಯನ್ನೂ ಮಿಂಚಿನ ಬಲೆಯಾಗಿ ಮಾಡಬಲ್ಲ ಪರಾಕ್ರಮದ ಪ್ರಭಾಲೀಲೆ

ಆಕೆಯ ಹೆಸರು—ಶಾನ್ತಲೆ!

ಆ ಹೆಸರ ನೆನಪು ವಿಷ್ಣುವರ್ಧನನ ಮೈಯ ನರನರವನ್ನೂ ಮಿಡಿದು ಕೋಟಿ ವೀಣಾನಾದತರಂಗಗಳನ್ನು ಮೂಡಿಸಿದವು. ಆ ಲಾವಣ್ಯಲತೆಯ ಎಲೆಎಲೆ ಹೂಮೊಗ್ಗುಗಳಲ್ಲಿ ಹಾಡಿ ಹರಿದುಡಿ ಬಂದಿತು ವಿಷ್ಣುವರ್ಧನ ಚಿತ್ತಭೃಂಗ

ಶಾನ್ತಲೆ.. ಶಾನ್ತಲೆ.. ಶಾನ್ತಲೆ...

ಎಷ್ಟು ಮೃದುವಾದ, ಎಷ್ಟು ಮೋಹಕವಾದ, ಎಷ್ಟು ಮಾದಕವಾದ ಹೆಸರು.

ಎಂಥ ಸೌಂದರ್ಯಕ್ಕೆ ಎಂಥ ಹೆಸರು!

ಆ ಹೆಸರಿನ ಮಧುವನ್ನೇ ಹನಿಹನಿಯಾಗಿ ಸವಿಸವಿದು, ತೃಪ್ತಿಗಾಣದೆ ಮತ್ತೆ ಚಪ್ಪರಿಸಿತು ನೆನಪಿನ ನಾಲಗೆ.

ಹೆಸರ ಮಧುವನ್ನೀಂಟಿ, ಅಮಲೇರಿದ ಚಿತ್ತ ಕಾಣದ ರೂಪಸುಮದ ನೆನಪಿನ ಮೃದುದಲವನ್ನೇ ನೇವರಿಸುತ್ತಿರುವಾಗ ಇದ್ದಕ್ಕಿದ್ದಂತೆಯೇ ಮುಳ್ಳು ಕುಟುಕಿತು—

’ಆ ಸೌಂದರ್ಯಕ್ಕೆ ಒಡೆಯನಾರು? ಯಾರಿಗೆ ಆ ಭವ್ಯ ಭಾಗ್ಯ?’

ಯಾರಿಗೆ? ವಿಧಿ ಯಾರ ಭಾಗ್ಯಲಲಾಟದಲ್ಲೀ ಸ್ವರ್ಣಭವಿಷ್ಯವನ್ನು ಬರೆದಿದಾನೆ?

ಯಾರಿಗೆ?

’ಯಾರಿಗಾದರೂ ಆಗಬಹುದು ಆಗಬಹುದು—ಯಾರಿಗಾದರೂ ಆಗ ಬಹುದಾದದು ನನಗೇ ಆಗಬಾರದೇಕೆ?’

—ತಟಕ್ಕನೆ ತಿರುಗಿಬಿದ್ದು ಕೇಳಿತು ವಿಷ್ಣುವರ್ಧನನ ಹೃದಯ.

ಆಗಬಾರದೇಕೆ?

ಚೌಪಳಿಗೆಯತ್ತಲ ಬಾಗಿಲನ್ನು ದಾಟಲೆಳಸಿ ತಿರುಗಿ ನೋಡಿದಾಗ, ಅವನತ್ತಲೇ ನೋಡುತ್ತಿದ್ದ ಹೊಳಪುಗಣ್ಣುಗಳು ಹೇಳಿದವು—

'ಆಗಬಾರದೇಕೆ?'

'ಆಗಬಾರದೇಕೆ? ಆಗುವುದಾದರೆ ಬಾಳನ್ನೇ ನಿವೇದಿಸಿಬಿಡಬಹುದು ಆ ರೂಪಲಕ್ಷ್ಮಿಯ ಪದತಲಗಳಿಗೆ'

ಅರ್ಪಿಸಬಹುದು—ಈ ಬಾಳು, ಈ ಬಾಳಿನ ಭವಿಷ್ಯವೆಲ್ಲವನ್ನೂ ಅರ್ಪಿಸಬಹುದು. ಇದ್ದುದೆಲ್ಲವನ್ನೂ ಆರ್ಪಿಸಿ 'ಹೆಗ್ಗಡೆಯ ಮಗಳೆ, ನೀನು ನನ್ನ ಮದವಳಿಗೆಯಾಗು' ಎಂದು ಕೇಳಬಹುದು. ಅವಳು ನನ್ನ ಅರ್ಪಣೆಯನ್ನು ಸ್ವೀಕರಿಸಿ ನನ್ನವಳಾಗಬಹುದು. ಆದರೆ ಆ ರೂಪಲಕ್ಷ್ಮಿ ನನ್ನವಳಾದರೆ –

ಅನುಕೂಲ ಗಾಳಿಯಲ್ಲಿ ಏರುವ ಗಾಳಿಯಪಟದಂತೆ ಮೇಲೇರಿತು ವಿಷ್ಣುವರ್ಧನನ ಚಿತ್ತ. ಉಡ್ಡಾಣ ಮಾಡುತ್ತಾ ಮೇಲೆ ಮೇಲೆ ಏರುತ್ತಲೇ ಇತ್ತು—

ಇದಕ್ಕಿದ್ದಹಾಗೇ ಮತ್ತಾವುದೋ ನೆನಪು ನುಗ್ಗಿ ಕೆಳಗೆ ಕುಸಿದು ಬಿತ್ತು.

'ಕ್ಷಾತ್ರದ ರತ್ನಮಕುಟದಿಂದ ಸುಶೋಭಿತಳಾದ ಈ ರೂಪಲಕ್ಷ್ಮಿಗೆ ಏನು ಅರ್ಪಿಸಿ 'ನನ್ನವಳಾಗು' ಎಂದು ಬೇಡುತ್ತೀಯ?'

—ನೆನಪಿನ ಜೇನಹೊಳೆಯಲ್ಲಿ, ಹಾಲಾಹಲದ ತೆರೆ ಹೊಯ್ದು ಕೇಳಿತು...

'ಅರ್ಪಿಸುತ್ತೀಯಾ? ಚಾಲುಕ್ಯಸಾಮ್ರಾಟನ ಪದಾಘಾತದಿಂದ ಕಲಂಕಿತವಾದ ರಾಜಶ್ರೀಯನ್ನೊಪ್ಪಿಸಿ ಬೇಡುತ್ತೀಯಾ?'

'ಆ ಕ್ಷಾತ್ರಶ್ರೀಗೆ ನಿನ್ನ ಹೇಡಿ ಕಂಬನಿಗಳನ್ನು ನೀಡಿ ನನ್ನವಳಾಗು ಎಂದು ಬೇಡುತ್ತೀಯಾ?'

ಕಿಡಿ ಸೂಸುವ ಹೆಣ್ಣು—ಕಂಬನಿಗರೆವ ಗಂಡು-ಓ! ಎಂಥ ಜೋಡಿ.

ತನ್ನ ಬಾಳೇ ವಿಷ್ಣುವರ್ಧನನನ್ನು ಅಣಕಿಸಿ ನಕ್ಕಿತು.

'ಆಗದು—ಅದೆಂದಿಗೂ ಆಗದು. ಹೇಡಿತನಕ್ಕೆಂದೂ ವರಣಮಾಲೆಯನ್ನು ಹಾಕದು ಕ್ಷಾತ್ರವೃತ್ತಿ. ಆ ಲಾವಣ್ಯಕ್ಕೆ ಕೊಡುವುದಕ್ಕಾದರೂ ನಿನ್ನ ಬಳಿ ಏನಿದೆ? ಚಾಲುಕ್ಯರು ಕಿತ್ತುಕೊಂಡ ರಾಜ್ಯವನ್ನೇ? ಅವರ ಸಾಮಂತರೂ ಹಂಗಿಸುವ ನಿನ್ನ ಮಂಡಲಾಧಿಪತ್ಯವನ್ನೇ? ಅಪಮಾನದಗ್ಧ ಸುಂದರಮುಖವನ್ನೇ? ಏನು ಕೊಟ್ಟು ನನ್ನನಳಾಗು ಎಂದು ಬೇಡುತ್ತೀಯಾ?'

ನೆನಪಿನ ಆ ಅಣಕು ನಗುವನ್ನು ಕೇಳಿ ವಿಷ್ಣುವರ್ಧನ ಸಿಡಿದೆದ್ದ.

'ಅಣಕಿಸುತ್ತೀಯಾ? ಇಂದಿಲ್ಲದಿರಬಹುದು. ನಾಳೆ ಜಗತ್ತನ್ನೇ ಗೆದ್ದು ಆ ಲಾವಣ್ಯಲಕ್ಷ್ಮಿಯ ಪದತಲಗಳಲ್ಲಿ ಅರ್ಪಿಸುತ್ತೇನೆ. ನನ್ನ ಪರಾಕ್ರಮದ ದಾವಾಗ್ನಿಯಿಂದ ಸಪ್ತ ಸಾಗರಗಳನ್ನೂ ಬತ್ತಿಸಿ, ಅಲ್ಲಿಯ ಮುತ್ತುಗಳನ್ನು ರಾಸಿ ರಾಸಿಯಾಗಿ ತಂದು ಅವಳ ಉಡಿಯಲ್ಲಿ ಸುರಿಯುತ್ತೇನೆ'

'ಹೌದೇ? ಜಗತ್ತನ್ನೇ ಗೆಲ್ಲುತ್ತೀಯಾ?'

—ಮತ್ತೆ ಅಣಕಿಸಿತು ನೆನಪು.

'ಹೌದು—ಗೆಲ್ಲುತ್ತೇನೆ—ಜಗತ್ತನ್ನು, ಈ ಸೌಂದರ್ಯಶ್ರೀಯನ್ನೂ'

—ಔಡುಗಚ್ಚೆ ಹೇಳಿದ ವಿಷ್ಣುವರ್ಧನ.

'ಹೇಗೆ ಕಂಬನಿಯ ಪ್ರಳಯಪ್ರವಾಹ ಹರಿಸಿ ಜಗತ್ತನ್ನು ಗೆಲ್ಲುತ್ತೀಯಾ?'

—ನಕ್ಷತ್ರಗಳು ಕಿಲಕಿಲನಕ್ಕು ಕೇಳಿದವು.

'ಅಯ್ಯೋ—ನಿರ್ಭಾಗ್ಯ!'

—ನಿಟ್ಟುಸಿರಿಟ್ಟು ಹೇಳಿತು ಕುಳಿರ್ಗಾಳಿ.

'ನನ್ನ ಕಂಬನಿಗೆ ಆ ಬಲವಿಲ್ಲದಿರಬಹುದು. ಆದರೆ ನನ್ನ ಮೈಯಲ್ಲಿರುವುದು ನಿರ್ವೀರ್ಯ ಅಶ್ರುವಿನ ಧಾರೆಯಲ್ಲ, ವೀರ ಪಾರ್ಥಿವ ರಕ್ತ.'

ಹಾಗೆ ಹೇಳಿಕೊಂಡಾಗ, ಅವನ ಹೆಪ್ಪುಗಟ್ಟಿದ ನರನಾಡಿಗಳಲ್ಲಿ ಮತ್ತೆ ಕಾವೇರಿದ ರಕ್ತ ಸಂಚರಿಸಿ, ಬುದ್ಧಿ ದುಃಖದ, ಕ್ಲೈಬ್ಯದ ಕಡಿವಾಣವನ್ನು ಕಿತ್ತೊಗೆದು ಏಕೋ ಬತ್ತಿಹೋದ ಪೌರುಷದಪ್ರವಾಹ ಮತ್ತೆ ತಾನೇತಾನಾಗಿ ಹರಿದು, ಔಡುಗಚ್ಚಿ ವಿಷ್ಣುವರ್ಧನ ತನಗೆ ತಾನೇ ಹೇಳಿಕೊಂಡ—-

'ನನ್ನ ಮೈಯ ಕ್ಷತ್ರಿಯ ರಕ್ತದ ಕೊನೆಯ ಹನಿ, ನನ್ನ ದೇಹದ ಕೊನೆಯ ಉಸಿರ ಎಳೆ, ಎಲ್ಲವೂ ಇದಕ್ಕೇ ವಿನಿಯೋಗವಾದರೂ ಸರಿಯೆ. ಆ ರಕ್ತಗಂಗಾ ಪ್ರವಾಹದಲ್ಲಿ ಅಪಮಾನಕಲಂಕವನ್ನು ತೊಳೆದು ಉಸಿರ ಬಿರುಗಾಳಿಯಲ್ಲಿ ಸಾಮ್ರಾಜ್ಯವನ್ನು ಮುರಿದು ಮೂಲೆಗುಂಪು ಮಾಡಿ, ಸೋತ ಚಕ್ರವರ್ತಿಯ ಕಿರೀಟವನ್ನು ಕಾಣಕೆಯಾಗಿ ಅರ್ಪಿಸಿ, ಗೆಲುತ್ತೇನೆ ಲಾವಣ್ಯಲಕ್ಷ್ಮಿಯನ್ನು

ಇಂದು ನಾನು ಅಪಮಾನಿತ—ನಿಜ

ಆದರೆ ನಾಳೆ—

ಈ ಜಗತ್ತು ನನ್ನದು, ಈ ದಿವ್ಯ ಸೌಂದರ್ಯ ಶರಧಿ ನನ್ನದು.

'ಹಾಗಾಗಬೇಕು. ಹಾಗಾಗಲೇ ಬೇಕು- ಅದೇ ನಾನು ಧೀರ ಕ್ಷತ್ರಿಯ ಸಂತಾನವೆಂಬುದಕ್ಕೆ ಸಾಕ್ಷಿ'

'ಜಗತ್ತನ್ನು ಗೆಲ್ಲಬೇಕು—ಆ ಬಯಕೆಯೇ ಇನ್ನು ನನ್ನ ಬದುಕಿನ ದಾರಿ.'

'ಗೆಲ್ಲಬೇಕು— ಗೆಲುವಿಗೆ ಆ ಲಾವಣ್ಯತಾರೆಯೇ ಗುರಿ.'

ದಾರಿ ಮುಗಿದು, ಗುರಿ ಸಿದ್ಧಿಯಾದಾಗಲೇ ಈ ಬದುಕು ಸಾರ್ಥಕ.

'ಬಿಡುವುದಿಲ್ಲ, ಬಿಡುವುದಿಲ್ಲ, ಏನಾದರೂ ಈ ದಾರ, ಈ ಗುರಿಯನ್ನು ಬಿಡುವುದಿಲ್ಲ'

ಆ ಮಾತನ್ನು ತನಗೇ ಆಡಿಕೊಳ್ಳುತ್ತಾ, ಆಡಿಕೊಳ್ಳುತ್ತಾ ವಿಷ್ಣುವರ್ಧನನಿಗೆ ತನ್ನ ಮೈ ಮುಗಿಲೆತ್ತರ ಬೆಳೆದು ತಲೆಯ ಮೇಲೆ, ಅರ್ಧೇಂದುರಂಜಿತವಾದ ತಾರಾಮಕುಟ ರಾರಾಜಿಸಿದಂತಾಯಿತು ಭಾರವಾದ ಹೃದಯ ಹಗುರಾಯಿತು.

ಕುಳಿತು ಕುಳಿತು ದಣಿದ ಮೈಯನ್ನು ಹಾಗೇ ಶಿಲಾತಲ್ಪದ ಮೇಲೆ ನೀಳವಾಗಿ ಚಾಚಿದ.

ಅದುವರೆಗೂ ಅವನನ್ನು ಏಡಿಸಿ, ಕಾಡಿಸಿ, ರೋಡಿಸಿದ ಇರುಳಗಾಳಿ, ದಣಿದು ಬಂದ ಮಗುವನ್ನು ನೇವರಿಸುವ ತಾಯಿಯಂತೆ ಅವನ ಮೈಯನ್ನು ಕಾವೇರಿದ ಮಿದುಳನ್ನು ನೇವರಿಸಿತು.

ಹಾಗೇ ಮಲಗಿ ಮೈ ಚಾಚಿ ಕಣ್ಣುಗಳನ್ನು ಮುಚ್ಚಿದ.

ಕತ್ತಲೆಯಲ್ಲೂ ಹೊಳಪುಗಣ್ಣುಗಳೆರಡು ಮೃದುವಾದ ನಕ್ಷತ್ರ ಕಾಂತಿಯಿಂದ ಹೊಳೆಯುತ್ತಾ, ಕೋಮಲ ಕಣ್ಣೆವೆಗಳಿಂದ ಅವನ ಕೆನ್ನೆಯನ್ನು ನೇವರಿಸಿದವು.

'ಕಣ್ಣುಗಳೇ—ನಿಮ್ಮ ಹೊಳಪಿಗೆ ಈ ಜಗತ್ತೇ ಕಾಣಿಕೆ'

—ತನಗೆ ತಾನೇ ಬಹು ಮೃದುವಾಗಿ ಹೇಳಿಕೊಂಡ.

ಹಾಗೇ ಹೇಳಿಕೊಳ್ಳುತ್ತಲೇ ಇದ್ದ—ನಿದ್ರೆಯ ಮೃದುಮಾದಕ ಪ್ರವಾಹ ತನ್ನನ್ನು ಗಳಿಗೆಗಳಿಗೆಗೂ ಆವರಿಸುತ್ತಿರುವುದೂ ಎಚ್ಚರವಿಲ್ಲದೆ.

ತಾರೆ ಹೊಳೆಯುತ್ತಿತ್ತು, ತಣ್ಣನೆ ಗಾಳಿ ಸುಳಿಯುತ್ತಿತ್ತು.

## ೧೩

ಹೊರಗೆ ಮುಂಜಾವಿನ ಮಬ್ಬು ಬೆಳಕಿದ್ದರೂ, ಮನೆಯೊಳಗೆ ಮಾತ್ರ ಇನ್ನೂ ಕತ್ತಲು ಸಂಪೂರ್ಣವಾಗಿ ಕರಗಿರಲಿಲ್ಲ. ಮಲಗಬೇಕು ಎನ್ನಿಸುವವರಿಗೆ ಇನ್ನೂ ಅಷ್ಟು ರಾತ್ರಿ ಉಳಿದಿದ್ದರೂ, ಬೆಳಗಿನ ಜಾವಕ್ಕೇ ಎದ್ದು ಸ್ನಾನ ಮುಗಿಸಿ ಮಡಿಯುಟ್ಟು ಮಾಚಿಕಬ್ಬೆ, ಪೂಜಾಮಂದಿರದಲ್ಲಿ, ಹಣತೆಯ ಬೆಳಕಿನಲ್ಲಿ ತನ್ನ ಪತಿಯ ಶಿವಪೂಜೆಗೆ ಬೇಕಾದ ಪರಿಕರಣಗಳನ್ನು ಅಣಿಮಾಡಿಡುತ್ತಿದ್ದಳು.

ತಾಯಿಯೊಂದಿಗೇ ಎದ್ದ ಶಾನ್ತಲೆಯೂ, ಶುಚಿಯಾಗಿ ದೇವರಮಂಟಪದ ಇದಿರು ಬಣ್ಣಬಣ್ಣದ ಹಿಟ್ಟಿನಿಂದ ರಂಗವಲ್ಲಿಯ ಹಸೆಗಳನ್ನು ರಚಿಸುತ್ತಿದ್ದಳು.

ಅಷ್ಟು ಹೊತ್ತು ಕೇಳಿಯೂ ಕೇಳಿಸದಷ್ಟು ಅಸ್ಪಷ್ಟವಾದ, ಮೃದು ಗಂಭೀರ ಸ್ವರದಲ್ಲಾವುದೋ ಪ್ರಾರ್ಥನಾಶ್ಲೋಕಗಳನ್ನು ಹೇಳಿಕೊಳ್ಳುತ್ತಿದ್ದ ಮಾಚಿಕಬ್ಬೆ, ತೆರೆದ ವಾತಾಯನದಿಂದಾಚೆ, ಮುಗಿಲು ಬಿಳುಪಾದುದನ್ನು ಕಂಡು ಮಗಳಿಗೆ—

'ಶಾನ್ತಾ, ಹೊರಗೆ ಬೆಳಕಾಗಿದೆ. ಅವರು ಮಜ್ಜನ ಮುಗಿಸಿಕೊಂಡು ಬರುವ ವೇಳೆಗೆ, ನೀನು ಹೋಗಿ ಅಷ್ಟು ಹೂವು ತಂದಿರಿಸು. ಇನ್ನೂ ಇಬ್ಬನಿ ಬೀಳುತ್ತಿರುವ ಹಾಗೇ ಇದೆ. ಹೆಚ್ಚು ಹೂವು ತರಬೇಕು ಎಂದು ಹಿಮದಲ್ಲಿ ಮೈ ತೋಯಿಸಿಕೊಳ್ಳಬೇಡ, ಬೇಗ ಬಂದುಬಿಡು'

—ಎಂದು ಹೇಳಿದಳು, ಮಂಟವದ ಬಳಿ ಇದ್ದ ಬೆತ್ತದಲ್ಲಿ ಹೆಣೆದ ಹೂಬುಟ್ಟಿಯನ್ನು ಮಗಳತ್ತ ಸರಿಸಿ.

'ಈಗ, ನೀನು ಅಗ್ರೋದಕವನ್ನು ತಂದಿಡುವ ವೇಳೆಗೆ ಬಂದುಬಿಡುತ್ತೇನೆ'

—ಎಂದು ತಾಯಿಗೆ ಉತ್ತರವಿತ್ತು, ಶಾನ್ತಲೆ ಬರೆಯುತ್ತಿದ್ದ ಹಸೆಯನ್ನು ಮುಗಿಸಿ, ಹೂ ಬುಟ್ಟಿ ಹಿಡಿದು ಮನೆಯ ಹಿಂಭಾಗದಲ್ಲಿದ್ದ ಹೂವಿನತೋಟದ ಕಡೆ ನಡೆದಳು.

ಮನೆಬಾಗಿಲನ್ನು ದಾಟುತ್ತಿದ್ದ ಹಾಗೇ ಹತ್ತಾರು ಹಕ್ಕಿಗಳು 'ಬಾ' ಎಂದು ಹಾಡಿ ಕರಿದು ಶಾನ್ತಲೆಯನ್ನು ಉಪವನಕ್ಕೆ ಸ್ವಾಗತಿಸಿದವು. ವಿಕಸಿತ ಕುಸುಮ ಗಂಧಭಾರದಿಂದ ಮಂದವಾಗಿ ಚಲಿಸುವ ಪ್ರಭಾತಪವನ 'ಇಗೋ, ನಿನ್ನೊಂದಿಗೆ ಅಟವಾಡುವುದಕ್ಕೆ ನಾನೂ ಎಚ್ಚೆತ್ತು ಸಿದ್ಧವಾಗಿದ್ದೇನೆ' ಎನ್ನುವಂತೆ ಅವಳ ಮುಖವನ್ನು ಮುತ್ತಿಟ್ಟು, ಮುಂದಲೆಯ ಸಡಿಲವಾದ ಕುರುಳುಗಳೊಂದಿಗೆ ಆಟವಾಡಿತು.

ಕಣ್ಣಿನ ಮೇಲೆ ಆಡುವ ಕುರುಳುಗಳನ್ನು ಸರಿಸಿ ನೋಡಿದಳು ಶಾನ್ತಲೆ—

ಮುಂಜಾವಿನ ಮುಂಬೆಳಕಿನಲ್ಲಿ ಸ್ವರ್ಗವೇ ಭೂಮಿಗಿಳಿದು ಬಂದಿತ್ತು ಉದ್ಯಾನದಲ್ಲಿ!

ಬಗೆಬಗೆಯ ಪರಿಮಳವನ್ನು ತಳೆದುಕೊಂಡು, ಬಣ್ಣ ಬಣ್ಣದ ವಸ್ತ್ರ ಧರಿಸಿ, ಹಸಿರೆಲೆಯ ನಾಟ್ಯರಂಗದಲ್ಲಿ ನರ್ತಿಸುತ್ತಿದ್ದರು—ಕೋಟಿ ಕುಸುಮ ಕನ್ಯೆಯರು. ನೆಲದ ಪಚ್ಚೆಯ ರತ್ನಗಂಬಳಿಯಲ್ಲಿ ಕೋಟಿ ಕೋಟಿ ಹಿಮಮಣಿಗಳ ಮುತ್ತುಗಳು ಥಳಥಳಿಸುತ್ತಿದ್ದುವು. ತಮ್ಮ ಲಾಸ್ಯಲೀಲೆಯಲ್ಲೇ ಮಗ್ನರಾಗಿದ್ದ ಪುಷ್ಪಬಾಲೆಯರನ್ನು 'ಇಗೋ, ಇನ್ನೇನು ಹಗಲಿನ ದೇವರು ಬರುವ ಹೊತ್ತಾಯಿತು ಮರೆತಿರಬೇಡಿ' ಎಂದು ಎಚ್ಚರಿಸುವ ಓಲಗದ ಆಳುಗಳಂತೆ, ಅಲ್ಲೊಂದು ಇಲ್ಲೊಂದು ಬಣ್ಣದ ಚಿಟ್ಟೆಗಳು ಹಾರುತ್ತಿದ್ದವು ರಾಜದರ್ಶನಕ್ಕೆಂದು ಸಜ್ಜಿತವಾದ ನೃತ್ಯಶಾಲೆಯಲ್ಲಿ ಪನ್ನೀರು ತಳೆಯುವ ಊಳಿಗ ಮಾಡುತ್ತಿತ್ತು ತಂಗಾಳಿ. ಹಕ್ಕಿಗಳ ಸ್ವಾಗತಗೀತೆಯ ಸ್ವರಮೇಳವೂ ಆರಂಭವಾಗಿತ್ತು. ಉದ್ಯಾನವಾಸಿಗಳ ನಿರೀಕ್ಷೆಯನ್ನು ಬಹು ಬೇಗ ಸಫಲಗೊಳಿಸಲು

ಬರುವ ರವಿರಥದ ಸಪ್ತಾಶ್ವಗಳ ಖುರಪುಟದಿಂದೆದ್ದ ಕೆಂಧೂಳಿನಂಥ ಕೆಂಪು ಮೂಡಲ ನೀಲಿಯಲ್ಲಿ ಹರಡಿತ್ತು.

ಮನೆಯ ಬೆಚ್ಚನೆಯ ವಾತಾವರಣದಿಂದ, ಉದ್ಯಾನದ ಬಯಲಗಾಳಿಗೆ ಬಂದಾಗ ಏಕೋ ಶಾನ್ತಲೆಗೆ ರೋಮಾಂಚವಾದಂತಾಗಿ ಮೈನವಿರೆದ್ದಿತು.

ಎಂಥ ದಿವ್ಯ ಸುಂದರ ಪ್ರಭಾತವಿದು!

ರಾತ್ರಿಯ ನಿಶ್ಚಿಂತ ನಿದ್ರೆಯಿಂದ ಹಗುರವಾದ ಮೈಯ ಶಾನ್ತಲೆಗೆ, ಅಂದೇಕೋ, ಹಿಮಂತ ಋತುವಿನಲ್ಲೇ ಚೈತ್ರೋದಯವಾದಂತೆ ಭಾಸವಾಗಿ, ಪ್ರಭಾತದರ್ಶನದಿಂದ ಪುಲಕಿತಗಾತ್ರೆಯಾಗಿ, ಎಂದಿನಂತೆ ಕಿರುದನಿಯಲ್ಲಿ ಉದಯರಾಗವನ್ನು ಹಾಡುತ್ತಾ, ಕೈಯಲ್ಲಿ ಹಿಡಿದ ಹೂ ಬುಟ್ಟಿಯನ್ನು ತೂಗಾಡಿಸುತ್ತಾ, ಹೂವನ್ನು ಆಯಲು ಉದ್ಯಾನಕ್ಕೆ ಇಳಿದಳು.

'ಇಗೋ, ನಾನು ಮೊದಲು ಅರಳಿದ್ದು; ಆ ಹೂವು ಸೋಮಾರಿ. ಈಗ ತಾನೆ ಎದ್ದು ಕಣ್ಣು ಅರಳಿಸುತ್ತಿದೆ. ಅದಕ್ಕಿಂತ ಮೊದಲು ನನ್ನನ್ನು ತೆಗೆದುಕೊ' ಎಂಬಂತೆ ಸಾವಿರ ಸುಮಗಳು ಅವಳತ್ತ ನೋಡಿದವು.

ಯಾವುದನ್ನು ಮೊದಲು ಕೀಳುವುದು? ಜೊಂಪೆಜೊಂಪೆಯಾಗಿ ಅರಳಿದ ಜಾಜಿಯನ್ನೇ, ಮುತ್ತೇ ಅರಳಿದಂತೆ ಬಿರಿದ ಮಲ್ಲಿಗೆಯನ್ನೇ, ಕೆಂಪಗೆ ಕಣ್ಣು ಕೋರೈಸುವ ದಾಸವಾಳವನ್ನೇ, ನಸುನೀಲಿಯ ತುಟಿ ಅರಳಿಸಿ ನಗುವ ಗಿರಿಕರ್ಣಿಕೆಯನ್ನೇ, ಪುಟ್ಟಗಿಡದ ಕಾಂಡವೇ, ಅರಳಿ ಸಾಲು ಹೂವಾದಂತೆ ಕಾಣುವ ಕರ್ಣಕುಂಡಲವನ್ನೇ, ಆ ಇರುವಂತಿಗೆಯನ್ನೇ, ಈ ಶೇವಂತಿಗೆಯನ್ನೇ—

ಎಷ್ಟು ಬಗೆಯ, ಎಷ್ಟೊಂದು ಬಣ್ಣದ, ಎಷ್ಟೊಂದು ಹೂವು—ಯಾವುದನ್ನು ಆಯ್ದುಕೊಳ್ಳುವುದು? ಯಾವುದನ್ನು ಬೇಡವೆಂದು ಬಿಡುವುದು?

ಅದೇ, ಇದೇ ಎಂದು ನಿರ್ಧರಿಸಲಾಗದೆ, ಅತ್ತಿತ್ತ ಹೊಳಪುಗಣ್ಣುಗಳಿಂದ ನೋಡುವಾಗ—

'ಯಾರನ್ನು ಬಿಟ್ಟರೂ, ನನ್ನನ್ನು ಬಿಡಬೇಡ. ನಾನು ಹೊತ್ತಿಗೊಂದು ಬಣ್ಣವಾಗುವ ಜಾಣೆಯಲ್ಲವೇ?'

—ಎಂದು ಅವಳತ್ತಲೇ ನೋಡಿ ನಕ್ಕಿತು ಕಲ್ಹಾರ ಪುಷ್ಪ.

'ಇಷ್ಟುದೂರ ನನ್ನಬಳಿ ಬರಬೇಕೆಂದು ಹಿಂಜರಿಯುತ್ತೀಯಾ ? ಹಾಗಾದರೆ ನಾನು ಕಾಲವಲ್ಲದ ಈ ಕಾಲದಲ್ಲೂ ನಿನಗಾಗಿ ಒಂದೆರಡು ಹೂವುಗಳನ್ನು ಅರಳಿಸಿ ಏನು ಸಾರ್ಥಕವಾದಹಾಗಾಯಿತು?'

—ಎಂದು ಅವಳನ್ನು ಹಂಗಿಸಿ ಕೇಳಿತು, ಮರದ ತುದಿಗೊಂಬೆಗಳಲ್ಲಿ ಅಲ್ಲೊಂದು ಇಲ್ಲೊಂದು ಅರಳಿದ ಸಂಪಿಗೆಯ ಹೂವು.

'ಯಾರನ್ನಾದರೂ ಆಯ್ದುಕೊ, ಯಾರನ್ನಾದರೂ ಬಿಡು-ಉಳಿದವರ ಮಾತಿಗೆ ನಾನು ಬರುವುದಿಲ್ಲ. ಆದರೆ-ನಿನಗೆ ಗೊತ್ತಿಲ್ಲವೇ? ಶಿವಪೂಜೆಗೆ ಅಗತ್ಯವಾಗಿ ಬೇಕಾದವಳು ನಾನು, ನನ್ನನ್ನು ಬಿಟ್ಟು ಹೋದರೆ ಆಮೇಲೆ ನೀನೇ ಪಶ್ಚಾತ್ತಾಪ ಪಡಬೇಕಾಗುತ್ತದೆ.'

—ಎಂದು ಗುಂಪುಗುಂಪಾಗಿ, ಕೊಂಬೆಯ ತುದಿಯಲ್ಲಿ ಕುಳಿತು ಹೇಳಿತು ದೇವಗಣಿಗಿಲೆ.

ಇವುಗಳಲ್ಲಿ ಯಾವುದನ್ನು ಆಯ್ದುಕೊಳ್ಳುವುದು, ಯಾವುದನ್ನು ಬಿಡುವುದು?

'ಆಯಿತು-ಎಲ್ಲವೂ ಎರಡೆರಡು ಇರಲಿ'

—ಎಂದರೆ ಕೇಳುತ್ತವೆಯೇ ಈ ಹಟಮಾರಿ ಹೂ ಗಿಡಗಳು!

ಒಂದೊಂದೂ—

'ನೋಡಿಕೋ! ನೀನು ಕೊಯ್ಯಲು ಬರುತ್ತೀಯ ಎಂದೇ, ನೀನು ಹಾಯಾಗಿ ಮಲಗಿದ್ದಾಗ ನಾನು ರಾತ್ರಿ ಎಲ್ಲಾ ನಿದ್ದೆಗೆಟ್ಟು ದುಡಿದು ಇಷ್ಟೊಂದು ಹೂವುಗಳನ್ನು ಅರಳಿಸಿದೇನೆ. ಆದು ಇದು ಎಂದುಕೊಂಡು, ನಾನು ಅರಳಿಸಿದ ಹೂವುಗಳಲ್ಲಿ ಅಷ್ಟಿಷ್ಟನ್ನು ಬಾಡಲು ಬಿಟ್ಟೆಯೋ, ನಾಳೆ ನಿನಗೆ ನನ್ನ ಒಂದು ಹೂವೂ ಇಲ್ಲದಂತೆ ಮಾಡುತ್ತೇನೆ, ಎಚ್ಚರಿಕೆ ಜಾಣೆ!'

—ಎಂದು ಅವಳನ್ನೇ ಹೆದರಿಸುತ್ತವೆ.

ಗಿಡಗಳು ಅವಳ ಬುದ್ಧಿಯಲ್ಲಿ ಅಷ್ಟು ಗೊಂದೆಲವೆಬ್ಬಿಸಿದರೆ, ಅದರೊಂದಿಗೆ ತುಂಟ ತಂಗಾಳಿಯೂ ಸೇರುತ್ತದೆ—ಅವಳನ್ನು ಕಾಡಿಸಲು.

ಕರ್ಣಕುಂಡಲವನ್ನಾಯಲು ಅವಳು ಮೈಬಗ್ಗಿಸಿದಾಗ-

'ಇಷ್ಟೇನೇ ನಿನ್ನ ಜಾಣತನ! ಎಲ್ಲ ಬಿಟ್ಟು ಈ ಸಣ್ಣ ಗಿಡಗಳ ಸ್ನೇಹ ಮಾಡಲು ಹೋಗಿ ಕಷ್ಟಪಡುತ್ತೀಯಲ್ಲಾ. ನನಗೆ ಹೇಳಬಾರದಾಗಿತ್ತೇ, ನಾನಿರುವುದೇ ನಿನಗೆ ಸಹಾಯ ಮಾಡಲಲ್ಲವೇ. ಇಗೋ—ಕಷ್ಟವಿಲ್ಲದಂತೆ ಇದನ್ನು ತೆಗೆದುಕೋ'

—ಎಂದು ಜಾಜಿಯ ಹೂವರಳಿದ ಕೊನೆಯನ್ನು ಅವಳ ಕೈಮಟ್ಟಕ್ಕೆ ಬಗ್ಗಿಸಿ ಕೊಡುತ್ತದೆ ತಂಗಾಳಿ.

'ಸಾಕಪ್ಪಾ—ಈ ಸ್ನೇಹಿತರ ಸಹವಾಸ!'

—ಎಂದು ಹೂವಾಯ್ದು ಸೋತು ಶಾನ್ತಲೆ ನಗುತ್ತಾ ನಿಟ್ಟುಸಿರು ಬಿಟ್ಟಾಗ—

'ನಿನ್ನ ಬುದ್ಧಿ ಇಷ್ಟೇ ಎಂದು ನನಗೆ ಮೊದಲೇ ಗೊತ್ತಿತ್ತು. ದಿನವೂ ಹೂವನ್ನು ಆಯುವ ಜಾಣೆ, ಹೇಗೆ ಆಯುತ್ತೀಯೋ ನೋಡೋಣವೆಂದು ಇಷ್ಟು ಹೊತ್ತು ಸುಮ್ಮನಿದ್ದು ನೋಡಿದೆ, ಇನ್ನು ನಾನೇ ಹಟ ಮಾಡಿದರೆ, ನಿನ್ನ ಕೋಮಲಕಾಯ ವ್ಯಥಾ ದಣಿಯುತ್ತದೆ; ಅದನ್ನು ನಾನು ನೋಡಲಾರೆ, ಬಾ. ಸುಮ್ಮನೆ ಕೈಗೆ ಸಿಕ್ಕಿದ್ದನ್ನೆಲ್ಲಾ, ಕಣ್ಣು ಕಂಡದ್ದನ್ನೆಲ್ಲಾ ಕೀಳಲು ಹೋಗಿ ಶ್ರಮಪಡಬೇಡ. ಯಾವುದು ಹೇಗೆಂಬುದನ್ನು ನಾನು ಬಲ್ಲೆ. ಖಂಡಿತವಾಗಿಯೂ ಹೂವನ್ನು ಆರಿಸುವುದರಲ್ಲಿ ನನ್ನಷ್ಟು ನೀನು ಬುದ್ಧಿವಂತಳಲ್ಲ. ಇಗೋ—ಯಾವುದನ್ನು ಕೀಳಬೇಕೆಂದು ನಾನು ತೋರಿಸುತ್ತೇನೆ. ಸುಮ್ಮನೆ ಸದ್ದುಗದ್ದಲ ಮಾಡದೆ ಬಂದು ಆಯ್ದುಕೋ'

—ಎಂದು ಹೂವಿಂದ ಹೂವಿಗೆ ಹಾರಿ, ಅವಳಿಗೆ ಮಾರ್ಗದರ್ಶನ ಮಾಡಿಸುತ್ತಾ ಅವಳಿದಿರು ಬರುವುದು ಬಣ್ಣದ ಚಿಟ್ಟೆ.

'ಅಹಹ! ನನಗೆ ಗೊತ್ತಿಲ್ಲವೇ-ನೀನು ಸೊಗಸುಗಾರ ಪುಟ್ಟಸಾಮಿ! ಏನೇನೋ ಹೇಳಿ ಹೂವುಗಳ ತಲೆಕೆಡಸಿದಂತೆಯೇ ನನ್ನ ತಲೆಯನ್ನೂ ಕೆಡಸುತ್ತೀಯಾ—ಕಳ್ಳ !'

—ಎಂದು ತನ್ನ ತುಟಿಯನ್ನು ಚುಂಬಿಸಲೆಂಬಂತೆ ಮೊಗದ ಬಳಿ ಹಾರಿದ ಚಿಟ್ಟೆಯನ್ನು, ಕೈ ಬೀಸಿ ದೂರ ಹಾರಿಸಿ ನಗುತ್ತಾ ಮುಂದಿನ ಗಿಡದತ್ತ ನಡೆಯುವಳು ಶಾನ್ತಲೆ.

ಹಾಗೆ ನಗುತ್ತಾ ಅವಳು ಮತ್ತೊಂದು ಗಿಡಿದ ಬಳಿಸಾರಿದಾಗ, ಆ ಗಿಡದ ಹೂವು—

'ನೀನಿನ್ನು ಹೋಗು—ಶಾನ್ತಲೆ ಬಂದಳು. ಅಗೋ—ಅವಳ ಹೆಜ್ಜೆ ಸದ್ದು! ನಮ್ಮಿಬ್ಬರನ್ನೂ ಜೊತೆಯಲ್ಲಿ ನೋಡಿದರೆ, 'ನಾಣ್ಗೇಡಿ' ಎಂದು ಮಾತನಾಡಿಸದೆ ಮುಂದೆ ಹೋಗುತ್ತಾಳೆ. ಹೂ— ಬೇಗ ಹೋಗು'

—ಎಂದು ತನ್ನ ತೋಳಲ್ಲಿದ್ದ ಭ್ರಮರವನ್ನು ಆಚೆಗೆ ಅಟ್ಟಿ—

'ಶಾನ್ತಲೆ—ಇಗೋ ನಾನು ಇಲ್ಲಿದ್ದೇನೆ'

—ಎನ್ನುವುದು 'ಕಂಡಳೇನೋ' ಎಂಬ ನಾಚಿಕೆಯಿಂದ ಎಲೆಯಡಿಯಲ್ಲಿ ಮುಖವನ್ನು ಮರೆಸಿಕೊಂಡು.

'ಇಷ್ಟುಬೇಗ ಇವಳೇಕೆ ಬರಬೇಕಾಗಿತ್ತು—ಈ ಚಳಿಯಲ್ಲಿ ಇನ್ನೊಂದು ಗಳಿಗೆಯಾದ ಮೇಲೆ, ಚೆನ್ನಾಗಿ ಬಿಸಲು ಬಿದ್ದಮೇಲೆ ಬಂದಿದ್ದರೆ ಯಾರಾದರೂ ದಂಡ ವಿಧಿಸುತ್ತಿದ್ದರೇ. ಪುಷ್ಪರಾಣಿಯೊಂದಿಗೆ ನನ್ನ ಸರಸಕ್ಕೆ ಭಂಗ ತಂದಳಲ್ಲಾ'

—ಎಂದು ಸಿಟ್ಟಿನಿಂದ ಗುರುಗುಟ್ಟುತ್ತಾ ಹಾರಿ ಹೋಗುವುದು ಕಪ್ಪು ದುಂಬಿ.

'ಕೆಟ್ಟ ಹುಡುಗ! ನನ್ನ ಮೇಲೇ ಸಿಟ್ಟಾಗುತ್ತೀಯ, ಇರು—ನಾಳೆ ನಿನಗೆ ಸಂಪಿಗೆಯ ದಳದ ಸೆರೆಮನೆಯಲ್ಲಿ ಹಾಕಿಸುತ್ತೇನೆ. ಅಲ್ಲಿ ಒಂದು ರಾತ್ರಿ ಕಳೆದರೇ ನಿನಗೆ ಬುದ್ಧಿ ಬರುವುದು. ಮೊನ್ನೆ ಹೀಗೇ ಮಾಡಿದಾಗ—ಇರುಳೆಲ್ಲಾ ಕಮಲ ಪಂಜರದಲ್ಲಿ ಕೂಡಿಸಿದ್ದು ಇಷ್ಟು ಬೇಗ ಮರೆತು ಹೋಯಿತೇ? ಹೂ—ನಿನ್ನನ್ನೇಕೆ ಅನ್ನಬೇಕು. ನಿನ್ನಂಥವರು ಅಡ್ಡಾಡುವ ಹೂಗೇರಿಯಲ್ಲಿ, ಇವಳನ್ನು ಇರಲು ಬಿಟ್ಟುದು, ನನ್ನದೇ ತಪ್ಪು. ಸಂಜೆಯೇ ಒಳಗೆ ಕರೆದುಕೊಂಡು ಹೋಗಬೇಕಾಗಿತ್ತು.'

—ಎಂದು ಪಶ್ಚಾತ್ತಾಪದ ನಿಟ್ಟುಸಿರು ಬಿಟ್ಟು—

’ಆದದ್ದಾಯಿತು. ಇನ್ನು ನಾಚಿಕೊಂಡೇನು ಫಲ. ಬಾ-ಶಿವನ ಪೂಜೆ ಮಾಡಿ ಧನ್ಯಳಾಗುವೆಯಂತೆ.’

—ಎಂದು ಆ ಹೂವನ್ನು ಎತ್ತಿ ಬುಟ್ಟಿಯಲ್ಲಿಡುವಳು.

ಹೀಗೆ ಒಂದೊಂದು ಹೂವೂ ಅವಳಿಗೆ ಏನೋ ಕಥೆ ಹೇಳುವುದು, ಒಂದೊಂದೂ ಏನೋ ಜಾಣತನದ ಮಾತಾಡಿ ಅವಳನ್ನು ನಗಿಸುವುದು, ಏನೋ ಬೆಡಗು ಬಿನ್ನಾಣ ಮಾಡಿ, ಅವಳು ಬೇಗ ಮುಂದೆ ಹೋಗದಂತೆ, ಒಂದುಗಳಿಗೆ ಅವಳನ್ನು ತನ್ನ ಬಳಿಯೇ ತಡೆದು ನಿಲ್ಲಿಸಿಕೊಳ್ಳುವುದು.

’ಸಾಕುಬಿಡಿ. ನಿಮ್ಮ ಮಾತು ಕೇಳುತ್ತಾ ನಿಂತರೆ ಇಲ್ಲೇ ಸಂಜೆಯಾಗುವುದು. ನೀವು ಹೀಗೆ ಮಾಡುತ್ತೀರೆಂದೇ ಅವ್ವೆ ನನ್ನನ್ನು ನಿಮ್ಮ ಬಳಿ ಕಳಿಸುವುದಕ್ಕೇ ಹಿಂಜರಿಯುತ್ತಾಳೆ. ಸುಮ್ಮನೆ ನನ್ನನ್ನೇಕೆ ಅವ್ವೆಯ ಕೈಲಿ ಬೈಸುತ್ತೀರ. ಮತ್ತೆ ಹೇಗೂ ನಾಳೆ ಬರುತ್ತೇನಲ್ಲ, ಆಗ ಉಳಿದ ಮಾತಾದೋಣ’ ಎಂದು, ತನ್ನ ಅವಸರ ಕಂಡು, ಮುಖ ಚಿಕ್ಕದು ಮಾಡಿಕೊಂಡ ಹೂವುಗಳಿಗೆ ಸಮಾಧಾನ ಹೇಳಿ, ’ನೀನೂ ನಮ್ಮ ನಮ್ಮಲ್ಲೇ ಪಕ್ಷಪಾತ ಮಾಡಿ, ದುಂಬಿಗಳ ಜಾತಿಗೆ ಸೇರುತ್ತೀಯಾ? ಇದು ಸಲ್ಲದು. ಅವನ್ನು ಆಯ್ದುಕೊಂಡೆಯಲ್ಲಾ? ಅವುಗಳದೇನು ದೊಡ್ಡಸ್ತಿಕೆ. ಆ ಬಣ್ಣ ಗಂಧ ನಮಗಿಲ್ಲವೇ?’ ಎಂದು ಮುಖ ಮುದರಿಸಿಕೊಂಡವಕ್ಕೆ ’ನನ್ನಾಣೆ—ನಾಳೆ ಮೊದಲು ನಿಮ್ಮನ್ನು ಆಯ್ದುಕೊಳ್ಳುತ್ತೇನೆ. ದಮ್ಮಯ್ಯ—ನನ್ನನ್ನು ಬಿಡಿ ನಾನು ಎಲ್ಲವನ್ನೂ ಹೊರಲಾರೆ’ ಎಂದು ಬೇಡಿ ಸಂತೈಸುತ್ತಾ, ’ಹೊತ್ತಾಗಿ ಹೋಯಿತು. ಅಪ್ಪಾಜಿ ಸ್ನಾನ ತೀರಿಸಿ ಪೂಜೆಗೆ ಬಂದರೇನೋ?’ ಎಂದು ಗಾಬರಿ ಪಡುತ್ತಾ ಅವಸರವಸರವಾಗಿ ಹೂವಾಯ್ದುಕೊಳ್ಳುತ್ತಾ ಶಾನ್ತಲೆ—

’ಇನ್ನು ಸಾಕು ನಾಲ್ಕು ಪಾರಿಜಾತದ ಹೂವು ತೆಗೆದುಕೊಂಡು ಬಿಡುತ್ತೇನೆ. ಈಗಲೇ ಆಯದಿದ್ದರೆ ಅವು ಬಿಸಿಲು ಬಿದ್ದು ಬಾಡಿಯೇ ಹೋಗುತ್ತವೆ’

—ಎಂದುಕೊಂಡು, ಉದ್ಯಾನದ ಒಂದು ಮೂಲೆಯಲ್ಲಿದ್ದ ಪಾರಿಜಾತ ವೃಕ್ಷದ ಬಳಿ ಬಂದಳು.

’ಅವ್ವೆ ಈಗಲೇ, ತಡವಾಯ್ತೆಂದು ಎಲ್ಲಿ ಬೇಸರಮಾಡುತ್ತಿದ್ದಾಳೋ ಏನೋ’ ಎಂದು ಚಿಂತಿಸುತ್ತಾ, ಅತ್ತಿತ್ತ ಸುತ್ತಲೂ ಅರಳಿದ ಹೂಗಳನ್ನು ನೋಡುತ್ತಾ, ಪಾರಿಜಾತ ಗಿಡದ ಬಳಿ ಬಂದು, ನೆಲದಮೇಲೆ ಚೆಲ್ಲಿದ ನಕ್ಷತ್ರ ರಾಶಿಯಂತಿದ್ದ ಹೂವನ್ನು ಆಯಲೆಂದು ಬಾಗಿದಾಗ ನೋಡಿದಳು—

—ನೋಡಿ ಹಾಗೇ ಕಡೆದ ವಿಗ್ರಹದಂತಾದಳು.

ಪಾರಿಜಾತ ತರುಮೂಲದಲ್ಲಿದ್ದ ಶಿಲಾತಲ್ಪದ ಮೇಲೆ ಯಾರೋ ಮಲಗಿದ್ದಾರೆ!

ಯಾರಿರಬಹುದು? ಸುರಿದ ಮಾಗಿಯ ಇಬ್ಬನಿಯಲ್ಲಿ ಬಯಲುಗಾಳಿಗೆ ಮೈಯೊಡ್ಡಿ, ಹೀಗೆ ಕಲ್ಲಿನ ಮೇಲೆ ಯಾರು ಮಲಗಿರಬಹುದು? ಒಂದು ಪಕ್ಕಕ್ಕೆ ತಿರುಗಿದ ಮುಖ ಕಾಣದಿದ್ದರೂ ಕಾಣುವ ಮೈ ಅಷ್ಟೇ, ಪರಿಚಿತವೆಂದು ಭಾಸವಾಗಿ ಅವಳ ಮೈಯಲ್ಲೇಕೋ ವಿಚಿತ್ರ ಕಂಪನ ಮೂಡಿದಂತಾಗಿ, ದಡದಡಿಸುವ ಎದೆ ’ಓಡಿಹೋಗು’ ಎಂದು ಹೇಳುತ್ತಿದ್ದರೂ, ತಾನೇತಾನಾದ ಕುತೂಹಲವನ್ನು ಹತ್ತಿಕ್ಕಲಾರದೆ ಗಿಡದಡಿಯಲ್ಲಿ ದಟ್ಟವಾಗಿ ಉದುರಿದ ಪಾರಿಜಾತದ ಕೋಮಲ ಕುಸುಮಗಳನ್ನು ತುಳಿಯಲು ಕಾಲು ಹಿಂಜರಿಯುತ್ತಿದ್ದರೂ ಕೇಳದೆ, ತುಳಿದ ಹೂವಿಗೂ ಮೈ ನೋವಾಗದಷ್ಟು ಮೃದುವಾಗಿ ಹೆಜ್ಜೆಯಿಟ್ಟು, ಶಿಲಾಪೀಠದ ಬಳಿ ಸಾರಿ, ಅಷ್ಟು ದೂರ ನಿಂತು ಹಾಗೇ ಬಾಗಿ ನೋಡಿದಳು

ಅವರೇ! ಯಾರಿರಬಹುದೆಂದು ಅಷ್ಟು ದೂರದಿಂದಲೇ ಅವಳು ಊಹಿಸಿದ್ದಳೋ—ಅವರೇ ಕುಮಾರ ವಿಷ್ಣುವರ್ಧನ!

ಇದ್ದಕ್ಕಿದ್ದಹಾಗೇ ಇಚ್ಛೆಗೆ ವಿರೋಧವಾಗಿ ಕಟ್ಟಿ ಹಾಕಿದ ತುಂಟ ಕುದುರೆಯಂತೆ ಹಿಗ್ಗಾ ಮುಗ್ಗಾ ಎಳೆಯುವ ಉಸಿರನ್ನು, ಒಂದು ಸಮಸ್ಥಿತಿಗೆ ತರಲೆತ್ನಿಸಿ, ಆಗ, ವೇಗವಾಗಿ ಉಸಿರು ಸೂಸುತ್ತಾ ನಿಂತು ನೋಡಿದಳು—

ಅವಳ ಎದೆ ಎಷ್ಟು ವೇಗವಾಗಿ ತುಯ್ಯುತ್ತಿತ್ತೋ, ಮಲಗಿದಾತನ ಎದೆ ಅಷ್ಟೇ ಶಾಂಶವಾಗಿ, ಗಾಳಿಗಾಡುವ ಉಯ್ಯಾಲೆಯಂತೆ ಮಂದವಾಗಿ ಏರಿಳಿಯುತ್ತಿತ್ತು.

ಗಾಳಿಗೆ ಕೆದಂದ ತಲೆಗೂದಲುಗಳ ಮೇಲೆ ಇಬ್ಬನಿಯ ಹನಿಗಳು ಬಿದ್ದು ಹೊಳೆಯುತ್ತಿದ್ದವು. ಆ ಹನಿಗಳ ನಡುವೆ ಅಲ್ಲೊಂದು ಇಲ್ಲೊಂದು ಪಾರಿಜಾತಪುಷ್ಪ ಮಲಗಿದ ದೇಹದ ಮೇಲೂ ಸಾಕಷ್ಟು ಹೂಗಳು ಉದುರಿ, ಆ ಮೈಗೆ ಹೂವಿನ ಹಚ್ಚಡವನ್ನು ಹೊದಿಸಿದಂತಿತ್ತು. ಒಂದು ಪಾರ್ಶ್ವಕ್ಕೆ ತಿರುಗಿದ ಆ ಮುಖದ, ತುಂಬು ಗಪೋಲದ ಮೇಲೂ ಒಂದೆರಡು ಹೂವುಗಳಿದ್ದವು.

ಆ ಮುಖ—ಎಷ್ಟು ಸುಂದರ!

ಆ ಮಾತು ಅವಳ ಮನಸಿಗೆ ಅನಿಸಿದಾಗ, ಹಿಂದಿನದಿನ ಅದೇ ಮುಖವನ್ನು ನೋಡಿದ ನೆನಪು ಅವಳ ಚಿತ್ತದಲ್ಲಿ ಮರುಕಳಿಸಿತು.

ಆಗ ತಾನು ಬೇಹುಗಾರ್ತಿ ಎಂದು ಭಾವಿಸಿ, ಸಿಟ್ಟಾಗಿ, ಅವಳತ್ತ ದುರುಗುಟ್ಟಿ ನೋಡಿದ ಮುಖ—ಕಗ್ಗಲೂ ನಡುಗಿ ನೀರಾಗುವಷ್ಟು ಧೀರಕಠೋರವಾಗಿತ್ತು. ಬಿಗಿದ ಹುಬ್ಬುಗಳು, ಬಿಗಿ ಹಿಡಿದ ತುಟಿಗಳು, ತಾನೇ ಕಠಾರಿಯೆಂಬಂತೆ ಮುಂದೊತ್ತಿದ ಗಡ್ಡ

ಜ್ವಾಲಾರಸವನ್ನು ಕಾರುವ ಕಣ್ಣುಗಳು—ಆ ಮುಖವನ್ನು ನೋಡಿ ಭೀತಳಾಗಿ ನಡುಗಿದ್ದಳು ಶಾನ್ತಲೆ.

ಅದೇ ಮುಖ—ಆಗ ಅವಳನ್ನು ಹೆದರಿಸಿ ನಡುಗಿಸಿದ ಮುಖ—ಈಗ, ನಿದ್ರೆಯಲ್ಲಿ ಎಷ್ಟು ಕೋಮಲವಾಗಿ, ಎಷ್ಟು ಮೋಹಕವಾಗಿ ಕಾಣಿಸುತ್ತಿದೆ.

ಅದನ್ನು ನೋಡಿ ಈಗ ಅವಳಿಗೆ ಓಡಿ ಹೋಗಬೇಕೆನಿಸಲಿಲ್ಲ. ಬಳಿಸಾರಿ, ಆ ಹಣೆ ಕೆನ್ನೆಗಳ ಮೇಲೆ ಬಿದ್ದ ಇಬ್ಬನಿಯ ಹನಿಗಳನ್ನು ಮೆತ್ತಗೆ ಒರೆಸಬೇಕು ಎನಿಸಿತು.

ಹಾಗೇ—ಆ ಇಬ್ಬನಿಯ ಹನಿಗಳನ್ನು ಕಂಡು—

'ಈ ಮಾಗಿ ಚಳಿಯಲ್ಲಿ, ಮೈ ಕೊರೆವ ಇಬ್ಬನಿಯಲ್ಲಿ ಹೀಗೇಕೆ ಬಯಲಿನಲ್ಲಿ ಮಲಗಿದಾರೆ. ಒಂದು ವೇಳೆ ಏನೋ ಯೋಚಿಸುತ್ತಾ, ಮೈ ಮರೆತು ನಿದ್ರೆ ಬಂದರೆ, ಉಳಿದವರು ಯಾರಾದರೂ ಬಂದು, ಎಬ್ಬಿಸಿ ಒಳಗೆ ಕರೆದುಕೊಂಡು ಹೋಗಿ ಮಲಗಿಸಬಾರದೇ? ಎಲ್ಲಿ ಮಲಗಿದರೋ, ಹೇಗೆ ಮಲಗಿದರೋ ಎಂದು ವಿಚಾರಿಸಿ ನೋಡದಷ್ಟೂ ಮೈ ಮರೆವೆ ಇವರ ಜನಕ್ಕೆ?'

—ಎನಿಸಿ ಹಾಗೇ ಅವನನ್ನು ಎಚ್ಚರವಾಗದಂತೆ ಮೆತ್ತಗೆ ಎತ್ತಿಕೊಂಡು ಹೋಗಿ ಬೆಚ್ಚನೆಯ ಹಾಸಿಗೆಯಲ್ಲಿ ಮಲಗಿಸಬೇಕು ಎನಿಸಿತು.

'ಆ ಜನಕ್ಕೆ ಮೈ ಮರೆವಾದರೆ, ಇವರಿಗಾದರೂ ಇಂಥ ಬಯಲಿನಲ್ಲಿ ಮಲಗಬಾರದೆಂಬ ಬುದ್ಧಿ ಇರಬಾರದೇ? ಮೊದಲೇ ಮಾಗಿಯ ಚಳಿ, ಅದರ ಮೇಲೆ ಈ ತೋಟದಲ್ಲಿ ಹುಳುಹುಪ್ಪಡಿಗಳ ಕಾಟ ಬೇರೆ. ಅವ್ವೆ ತನಗೆ ಹಗಲಿನಲ್ಲೇ ಹೇಳುತ್ತಿದ್ದಳು—ಆ ಜಾಜಿಯ ಪೊದೆಯ ಬಳಿ ಹೋಗುವಾಗ ಎಚ್ಚರವಾಗಿರು, ಅಲ್ಲೊಂದು ಸರ್ಪದ ಸಂಚಾರವಿದೆ ಎಂದು. ಇಷ್ಟು ವಯಸ್ಸಾಗಿದೆ. ಅಷ್ಟೂ ತಿಳಿಯಬಾರದೆ?'

—ಆ ಭಾವನೆ ಅವಳಲ್ಲಿ ಮೂಡಿದಾಗ, ಅಲ್ಲಿ ಮಲಗಿದ ವಿಷ್ಣುವರ್ಧನ ಅವಳ ಕಣ್ಣಿಗೆ ತನ್ನ ಎಚ್ಚರಿಕೆಯನ್ನು ಪರರು ಮಾಡಬೇಕಾದ ಎಳೆಯ ಮಗುವಿನಂತೇ ತೋರಿದ.

'ಇಷ್ಟು ಬೆಳೆದರೂ ಇನ್ನೂ ಮಗುವೆ?'

ಶಾನ್ತಲೆಯ ಮನದಲ್ಲಿ ಮಾತುಗಳಾಡಿ, ತುಟಿಗಳ ಮೇಲೆ ಮಂದಹಾಸ ಮೂಡಿತು. ಏಕೋ ಎದೆ ತುಂಬಿ ಬಂದು, ಮೈ ಭಾರವಾದಂತೆ ಭಾಸವಾಯಿತು.

ತನ್ನೊಳಗೆ ನಸುನಗುತ್ತಲೇ, ವಿಷ್ಣುವರ್ಧನನ ನಿದ್ರಾ ಮುದ್ರಿತ ಮುಗ್ಧ ಮುಖವನ್ನು ನೋಡಿದಳು. ಏಕೋ—ಆ ಮುಖವನ್ನು ಎಷ್ಟು ನೋಡಿದರೂ ಮನಸಿಗೆ ತೃಪ್ತಿಯಾಗಲಿಲ್ಲ.

ಹಾಗೇ ಆ ಮುಖವನ್ನು ನೋಡುತ್ತಿರುವಾಗ, ಮುಚ್ಚಿದ ದೀರ್ಘವಾದ ಕಣ್ಣೆವೆಗಳ ಕಣ್ಣನ್ನು ನೋಡಿದಾಗ—

ಹಿಂದಿನ ದಿನ, ಹೋಗುತ್ತಾ ತನ್ನತ್ತ ತಿರುಗಿ ನೋಡಿದ ಅದೇ ಕಣ್ಣುಗಳ ನೆನಪಾಯಿತು. ಅಷ್ಟು ಸುಂದರವಾದ ಕಣ್ಣುಗಳು ಅವು.

ಆ ಕಣ್ಣುಗಳ ನೆನಪಾಗಿ, ಅವಳ ಮೈಯೊಳಗೆ ಯಾವುದೋ ರಾಗರಸದ ಮಧುರ ಪ್ರವಾಹ ಹರಿದು, ಆ ಕಣ್ಣುಗಳು ಈಗ, ಮತ್ತೊಮ್ಮೆ ತೆರೆದು ನೋಡಬಾರದೆ ಎನಿಸಿತು.

ಅವು ತಾನಾಗಿಯೇ ತೆರೆದು ನೋಡದಿದ್ದರೆ ನಾನೇ ಏಕೆ ಅದನ್ನು ತೆರೆಸಬಾರದು—

ಆ ಯೋಚನೆಗೇ ಹೆದರಿ ಅವಳ ಮೈ ನಡುಗಿತು.

'ಊಹೂ...ಊಹೂ. ಅವು ಆಕಸ್ಮಿಕವಾಗಿ ತೆರೆದು ನನ್ನನ್ನೀಗ ನೋಡಿದರೂ ಹಾಗೇ ಕರಗಿ ಹೋಗುತ್ತೇನೆ'

—ಎನಿಸಿ, ತನ್ನ ಉಸಿರಿನ ಸದ್ದು ಎಲ್ಲಿ ಅವನನ್ನು ಎಚ್ಚರಿಸುವುದೋ, ಅವನು ಎಚ್ಚರವಾಗಿ, ಆ ಮುಖ ನೋಡುವ ಭಾಗ್ಯವೂ ಭಗ್ನವಾಗಿ ಹೋಗುವುದೋ ಎನಿಸಿ ಹಾಗೇ ಒಂದು ಹೆಜ್ಜೆ ಹಿಂದೆ ಸರಿದು ನಿಂತು, ನೋಡಿದಳು.

ವಿಷ್ಣುವರ್ಧನ ಮಲಗಿಯೇ ಇದ್ದ. ಶಾನ್ತಲೆ ನೋಡುತ್ತಲೇ ಇದ್ದಳು.

ಮುಂಜಾವಿನ ಸುಳಿಗಾಳಿಗೆ, ಅವನ ಮೈ ಮೇಲೆ ಚಪ್ಪರದಂತೆ ಹರಡಿದ ಪಾರಿಜಾತದ ಕೊಂಬೆಗಳು ತೂಗಿ, ನಾಲ್ಕಾರು ಹೂವುಗಳು ಅವನ ಮೈ ಮೇಲೆ ಬಿದ್ದವು.

ಆ ಹೂವುಗಳನ್ನು ನೋಡಿದಳು ಶಾನ್ತಲೆ.

ಏಕೋ ಇದ್ದಕಿದ್ದ ಹಾಗೆ ಅನಿಸಿತು—

'ನಾನೇ ಆ ಪಾರಿಜಾತದ ಹೂವಾಗಿದ್ದರೆ?'

ಹಾಗನಿಸುತ್ತಲೇ ಅವಳ ಮುಖ, ಆ ಪಾರಿಜಾತದ ಹೂವಿನ ಕಾವಿನಷ್ಟೇ ಕೆಂಪೇರಿ ಏಕೋ ಅಲ್ಲಿಂದ ಓಡಿಹೋಗಬೇಕು ಏನಿಸಿತು.

ಆದರೇಕೋ ಅವಳ ಕಾಲುಗಳಿಗೆ ಅಲ್ಲಿಂದ ಕದಲಲು ಮನಸ್ಸಾಗಲಿಲ್ಲ. ಕಣ್ಣುಗಳ ನೋಡುವ ಬಯಕೆಯೂ ತೀರದೆಲೆ ಅವಿಚಲಿತನೇತ್ರೆಯಾಗಿ ಕಾಲ, ದೇಶಗಳ ಸ್ಮೃತಿಯಳಿದು ನೋಡುತ್ತಲೇ ಇದ್ದಳು.

ಎಷ್ಟು ಹೊತ್ತು ಹಾಗೆ ಮೈಮರೆತು ನೋಡುತ್ತಿದ್ದಳೋ ಏನೋ, ಇದ್ದಕ್ಕಿದ್ದ ಹಾಗೇ—

'ಬಿಟ್ಟಿ..ಬಿಟ್ಟಿಯಣ್ಣಾ'

—ಎಂಬ ಕೂಗನ್ನು, ಕೇಳಿ, ಹತ್ತಿರದಲ್ಲೇ ಹಾರುವ ಕವಣೆ ಕಲ್ಲಿನ ಸುಯ್ಯುಗುಟ್ಟುವ ಸದ್ದನ್ನು ಕೇಳಿದ ಹಕ್ಕಿಯಂತೆ ಬೆಚ್ಚಿಬಿದ್ದು, ಸದ್ದು ಬಂದ ಕಡೆ ತಿರುಗಿ ನೋಡಿದಳು—

ವಿಷ್ಣುವರ್ಧನನ ಅಣ್ಣ ಬಲ್ಲಾಳ, ಬಾಗಿಲ ಬಳಿ ನಿಂತು ತಮ್ಮನನ್ನು ಕೂಗುತ್ತಿದ್ದ

ತದೇಕಚಿತ್ತಳಾಗಿ, ಶಿಲಾತಲ್ಪದ ಮೇಲೆ ಮಲಗಿದ ವಿಷ್ಣುವರ್ಧನನನ್ನೇ ನೋಡುತ್ತಿದ್ದ ಶಾನ್ತಲೆಯನ್ನು ಆತನೂ ನೋಡಿದನೋ ಏನೋ. ಅದಕ್ಕಾಗಿಯೇ ಒಮ್ಮೆ ವಿಷ್ಣುವರ್ಧನನ ಹೆಸರು ಹಿಡಿದು ಕೂಗಿದ ಬಲ್ಲಾಳ, ಮತ್ತೊಮ್ಮೆ ಕರೆಯದೆ, ಶಾನ್ತಲೆಯನ್ನೇ ನೋಡುತ್ತಾ ನಿಂತಿದ್ದ.

ಬಲ್ಲಾಳನನ್ನು ನೋಡುತ್ತಿದ್ದ ಹಾಗೇ ಶಾನ್ತಲೆಗೇಕೋ ತಲೆಸುತ್ತಿ ಬಂದಂತಾಯಿತು. ಅಲ್ಲಿ ನಿಲ್ಲಲಾಗದೆ, ಕಡೆಯ ಬಾರಿಗೆ, ಆಗ ತಾನೇ ಹೊಂಬಿಸಿಲು ಮುತ್ತಿಡುತ್ತಿದ್ದ ವಿಷ್ಣುವರ್ಧನನ ಮುಖವನ್ನು ನೋಡಿ, ಜಿಂಕೆಯಂತೆ ಅಲ್ಲಿಂದ ಓಡಿದಳು. ಅವಳ ಕೈಯಲ್ಲಿದ್ದ ಹೂ ಬುಟ್ಟಿಯಲ್ಲಿ ತುಂಬಿದ ಹೂವು, ಓಟದ ವೇಗದಲ್ಲಿ ತುಳುಕಿ, ಅವಳು ಓಡಿದ ದಾರಿಯುದ್ದಕ್ಕೂ ಹೂವು ಚೆಲ್ಲಿದವು.

ಅವಳು ಓಡಿದುದನ್ನೇ ನೋಡುತ್ತಿದ್ದ ಬಲ್ಲಾಳನಿಗೆ, ಕಣ್ಣೆದುರಿನಲ್ಲಿ ಮೋಹಕ ಮಿಂಚೊಂದು, ಹೂ ಚೆಲ್ಲುತ್ತಾ ಓಡಿದಂತೆ ತೋರಿತು.

* * * * * *

'ಹೆಗ್ಗಡೆಯವರ ಮಗಳಲ್ಲವೇ ಆ ಹುಡುಗಿ. ಅಲ್ಲಿ ಯಾರು ಮಲಗಿರುವುದು? ಯಾರನ್ನು ನೋಡುತ್ತಾ ನಿಂತಿದ್ದಳು. ನನ್ನನ್ನು ಕಾಣುತ್ತಿದ್ದಹಾಗೇ ಹಾಗೇಕೆ ಓಡಿದಳು'

—ಎಂದು ಅಚ್ಚರಿಪಡುತ್ತಲೇ, ಪಾರಿಜಾತ ವೃಕ್ಷದಡಿಯ ಶಿಲಾಪೀಠದ ಮೇಲೆ ಬಂದು, ಅಲ್ಲಿ ಮೈಮರೆತು ಮಲಗಿದ ವಿಷ್ಣುವರ್ಧನನನ್ನು ನೋಡಿದ.

ಶಿಲಾಪೀಠದ ಮೇಲೆ, ಸರಿಯಾದ ಹೊದಿಕೆಯೂ ಇಲ್ಲದೆ ದೇಸಿಗನಂತೆ ಮಲಗಿದ ಸೋದರನನ್ನು ಕಂಡು, ಬಲ್ಲಾಳನಿಗೆ ಕರುಳು ಕಿವುಚಿದಂತಾಯಿತು.

ವಿಷ್ಣುವರ್ಧನ ಅಲ್ಲಿ ಮಲಗಿರುವುದನ್ನು ನೋಡುತ್ತಿದ್ದ ಹಾಗೆಯೇ ಬಲ್ಲಾಳನಿಗೆ, ಆತ ಅಲ್ಲೇಕೆ ಮಲಗಿರುವನೆಂಬುದು ಅರಿವಾಯಿತು.

ಓಲಗದಲ್ಲಿ ನಡೆದ ಘಟನೆ, ತರುವಾಯ ಏಚಲಾದೇವಿಯಿಂದ ತಿಳಿದು ಬಂದ ವಾರ್ತೆ, ತನ್ನ ತಂದೆ ತಾತಂದಿರ ಮೇಲೆ ಅದರಿಂದಾದ ಪರಿಣಾಮ—ಎಲ್ಲವೂ ಬಲ್ಲಾಳನಿಗೆ ತಿಳಿದಿತ್ತು. ಹಾಗೇ ವಿಷ್ಣುವರ್ಧನನ ಸ್ವಭಾವವೂ.

ವಿಷ್ಣುವರ್ಧನ ಸ್ವಾಭಿಮಾನದ ಜೀವಂತ ಮೂರ್ತಿ ಎನ್ನುವುದು ಬಲ್ಲಾಳನಿಗೇ ಏನು, ಆ ಮನೆಯಲ್ಲಿ ಎಲ್ಲರಿಗೂ ತಿಳಿದಿತ್ತು. ಆ ಮಗನಲ್ಲೇ ಪಂಚಪ್ರಾಣವಿಟ್ಟುಕೊಂಡ ಎರೆಯಂಗದೇವನಿಗಂತೂ, ಉಳಿದೆಲ್ಲರಿಗಿಂತಲೂ ಚೆನ್ನಾಗಿ ತಿಳಿದಿತ್ತು. ಎಂತಲೇ, ತಾನು ಏನೋ ಬೇಸರದಲ್ಲಿ 'ನಿನ್ನ ಪಾಡಿಗೆ ನೀನು ಮಲಗಿಕೋ ಹೋಗು' ಎಂದು ಹೇಳಿದ ಬಳಿಕ, ವಿಷ್ಣುವರ್ಧನ ಆ ಮಾತನ್ನೇ ಮನಸ್ಸಿಗೆ ಹಚ್ಚಿಕೊಂಡು ಎಲ್ಲಿ ಕೊರಗುತ್ತಾನೋ ಎಂದು ಚಿಂತಿಸಿ, ಹಿರಿಯ ಮಗನಾದ ಬಲ್ಲಾಳನಿಗೆ—

'ಬಿಟ್ಟಿಯಣ್ಣನಿಗೆ, ನಿನ್ನಲ್ಲಿ ಬಹು ಪ್ರೀತಿ ಬಲ್ಲಾಳ. ನೀನು ಏನು ಹೇಳಿದರೂ ಕೇಳುತ್ತಾನೆ. ನಾನು ಎಷ್ಟು ಹೇಳಿದರೂ ಈ ವಿಷಯದಲ್ಲಿ ಅವನಿಗೆ ಸಮಾಧಾನವಾಗುವುದಿಲ್ಲ. ನೀನೇ ಸ್ವಲ್ಪ ಸಮಾಧಾನ ಹೇಳು. ಆದದ್ದಾಯಿತು, ಈಗ ಮುಂದೇನು ಮಾಡಬೇಕೆಂದು ಚಿಂತಿಸಬೇಕೇ ಹೊರತು, ಯಾರೂ ಕೊರಗಿ ಫಲವಿಲ್ಲ. ಅದನ್ನು ನೀನವನಿಗೆ ಹೇಳು.'

—ಎಂದಾಗ, ಬಲ್ಲಾಳ—

’ಆಗಲಿ ಅಪ್ಪಾಜಿ’

—ಎಂದು ತನ್ನ ತಂದೆಗೆ ಮಾತು ಕೊಟ್ಟಿದ್ದ.

ಅದರಂತೆಯೇ, ರಾತ್ರಿ ವಿಷ್ಣುವರ್ಧನ ತನ್ನ ಬಳಿ ಮಲಗಲು ಬಂದಾಗ, ಆ ವಿಷಯದಲ್ಲಿ ಅವನೊಂದಿಗೆ ಮಾತನಾಡಬೇಕೆಂದು ಕಾದಿದ್ದ. ಆದರೆ ವಿಷ್ಣುವರ್ಧನ ಎಷ್ಟು ಹೊತ್ತಾದರೂ ಮಲಗಲು ಬಂದಿರಲಿಲ್ಲ. ಆಗ ಬರಬಹುದು ಈಗ ಬರಬಹುದು ಎಂಬ ನಿರೀಕ್ಷೆಯಲ್ಲಿ, ವಿಷ್ಣುವರ್ಧನ ಬರದಿದ್ದರೂ, ಅವನ ಬರವನ್ನೇ ಕಾದು ದಣಿದ ಬಲ್ಲಾಳನಿಗೆ ಮಾತ್ರ ನಿದ್ರೆ ಬಂದಿತು.

ಬೆಳಗಿನ ಝಾವಕ್ಕೆ ಬಲ್ಲಾಳನಿಗೆ ಎಚ್ಚರಿಕೆಯಾದಾಗ, ಆ ಮಾತು ನೆನಪಾಗಿ ’ರಾತ್ರಿ ಎಷ್ಟು ಹೊತ್ತಿಗೆ ಬಂದು ಮಲಗಿದನೋ ಏನೋ’ ಎಂದು ನೋಡಿದಾಗ, ಹಾಸಿಗೆಯಲ್ಲಿ ವಿಷ್ಣುವರ್ಧನ ಕಾಣಲಿಲ್ಲ. ರಾತ್ರಿ ಅವನಿಗೆಂದು ಆಳು ಸಿದ್ಧಪಡಿಸಿಟ್ಟು ಹೋದ ಹಾಸಿಗೆ, ಹಾಸಿದಂತೆಯೇ ಇತ್ತು. ಹಾಸಿಗೆಯ ಬಳಿಯ ಹಾಲಿನ ಬಟ್ಟಲೂ, ಹಾಗೇ ಮೋರೆ ಒಣಗಿಸಿಕೊಂಡು ಕುಳಿತಿತ್ತು.

’ರಾತ್ರಿ ಇವನೇಕೆ ಇಲ್ಲಿಗೆ ಬಂದು ಮಲಗಲಿಲ್ಲ, ಎಲ್ಲಿಗೆ ಹೋದ? ಎಲ್ಲಿ ಮಲಗಿದ?’

—ಎಂದು ತಮ್ಮನನ್ನು ಹುಡುಕಿಕೊಂಡು ಬಲ್ಲಾಳ ಬಿಡಾರದಲ್ಲೆಲ್ಲಾ ಅಡ್ಡಾಡಿದ. ಆದರೆ ಎಲ್ಲೂ ವಿಷ್ಣುವರ್ಧನನ ಸುಳಿವು ಕಾಣಲಿಲ್ಲ.

'ರಾತ್ರಿ ತೋಟದಲ್ಲೇನಾದರೂ ಯೋಚನೆ ಮಾಡುತ್ತಾ ಕುಳಿತಿದ್ದು ಅಲ್ಲೇ ಮೈ ಮರೆತು ಮಲಗಿದನೇನೋ ತಲೆಗೇನಾದರೂ ಹುಚ್ಚು ಹತ್ತಿದರೆ ಅವನ ಮೈ ಮೇಲೆ ಪ್ರಜ್ಞೆಯೇ ಇರುವುದಿಲ್ಲ'

—ಎಂದುಕೊಂಡೇ ತಮ್ಮನನ್ನು ಹುಡುಕಿಕೊಂಡು ಮನೆಯ ಹಿಂದಿನ ತೋಟದ ಕಡೆಗೆ ಬಂದಿದ್ದ ಬಲ್ಲಾಳ. ಹಾಗೆ ಬಂದು, ಬಾಗಿಲ ಬಳಿ ನಿಂದು, ತೋಟವನ್ನೆಲ್ಲಾ ನೋಡುತ್ತಾ ಕೂಗಿದಾಗಲೇ, ಅವನ ಕಣ್ಣಿಗೆ ಪಾರಿಜಾತದ ಗಿಡದ ಬಳಿ, ವಿಗ್ರಹದಂತೆ ನಿಂತ ಹೆಗ್ಗಡೆಯವರ ಮಗಳು ನಿಂತದ್ದು ಕಾಣಿಸಿತು. ನಿಂತಕಡೆಯೇ ನಿಂತು ಆಕೆ ಏನು ಮಾಡುತ್ತಿದಾಳೆ ಎಂದು ನೋಡಿದಾಗಲೇ ಅವನಿಗೂ ಶಿಲಾಪೀಠದ ಮೇಲೆ ಮಲಗಿದ ಸೋದರ ಕಂಡದ್ದು. ತನ್ನ ಸೋದರನ ಬಳ ನಿಂತು ಆ ಹುಡುಗಿ ಏನು ನೋಡುತ್ತಿದ್ದಾಳೋ, ಏನು ಮಾಡುತ್ತಿದ್ದಾಳೋ ಎಂಬ ಕುತೂಹಲ ಮೂಡಿ, ಒಮ್ಮೆ ತಮ್ಮನ ಹೆಸರು ಹಿಡಿದು ಕೂಗಿದ ಬಲ್ಲಾಳ, ಮತ್ತೊಮ್ಮೆ ಕೂಗದೆ ನಿಂತ.

ಆದರೆ ಅವನು ಒಮ್ಮೆ ಕೂಗಿದ ಕೂಗೇ ಕೇಳಿ, ಆ ಹುಡುಗಿ ಮಿಂಚಿನಂತೆ ಓಡಿ ಹೋದಳು. ಶಾನ್ತಲಾ ಅಷ್ಟು ವೇಗವಾಗಿ ಓಡಿದಾಗಲೂ ಬಲ್ಲಾಳನಿಗೆ ಆಕೆಯ ಮುಖ ಕಾಣದೆ ಹೋಗಲಿಲ್ಲ. ಹಾಗೆ ಆ ಮುಖವನ್ನು ನೋಡಿದಾಗ ಬಲ್ಲಾಳನಿಗನಿಸಿತು—

'ನನ್ನನ್ನು ನೋಡಿ ಆಕೆ ಓಡಿ ಹೋಗಲಿಲ್ಲ ನಾನು ನೋಡಿದುದನ್ನು ನೋಡಿ ಓಡಿಹೋದಳು.'

ಒಮ್ಮೆ ಅವನ ಶಯ್ಯಾಗೃಹದಲ್ಲೇ ಕದ್ದು ಹಾಲು ಕುಡಿಯುತ್ತಿದ್ದ ಮಾರ್ಜಾಲವೊಂದು, ಇವನ ಕಣ್ಣು ತನ್ನ ಕಡೆ ತಿರುಗಿದುದನ್ನು ಕಂಡು ಓಡಿ ಹೋಗಿತ್ತು. 'ಈ ಹುಡುಗಿ ಓಡಿದುದೂ ಹಾಗೆಯೇ. ಅದೇಕೆ ಹಾಗೆ?' ಎಂದು ತನಗೆ ತಾನೇ ಪ್ರಶ್ನೆ

ಮಾಡಿಕೊಳ್ಳುತ್ತಾ ಬಲ್ಲಾಳ ಶಿಲಾಪೀಠದ ಬಳಿ ಬಂದು, ಬೆಳಗಿನ ಜಾವದ ಹಿಮದಲ್ಲಿ ತೆಯ್ದೂ ಅದರ ಅರಿವಿಲ್ಲದೆ ಮಲಗಿದ್ದ ವಿಷ್ಣುವರ್ಧನನನ್ನು ನೋಡಿದ.

ಅಲ್ಲಿ ಆತ ಮಲಗಿದುದೇ, ಇರುಳೆಲ್ಲಾ ವಿಷ್ಣುವರ್ಧನನ ಮನದಲ್ಲಿ ಎಷ್ಟು ಹೋರಾಟವಾಗಿರಬೇಕೆಂಬುದನ್ನು ಬಲ್ಲಾಳನಿಗೆ ಹೇಳಿತು. ಅದನ್ನು ನೆನೆದು ದುಃಖ, ಅಭಿಮಾನ ಎರಡೂ ನಾಮುಂದು ತಾಮುಂದು ಎಂದು ನುಗ್ಗಿ ಬಂದು, ಬಲ್ಲಾಳ ತಾನು ಹೊದ್ದ ವಸ್ತ್ರದಲ್ಲೇ ವಿಷ್ಣುವರ್ಧನನ ಮುಖ ಮೇಲೆ ಬಿದ್ದ ಹಿಮವನ್ನು ಒರಸಿ—

'ಬಿಟ್ಟೀ ...ಬಿಟ್ಟಿಯಣ್ಣಾ'

—ಎಂದು ಅವನನ್ನು ಮೃದುವಾಗಿ ಅಲ್ಲಾಡಿಸಿ ಎಚ್ಚರಿಸಿದ.

ಬಲ್ಲಾಳ ಹಾಗೆ ಮೂರು ನಾಲ್ಕು ಬಾರಿ ಕರೆದು, ಅಲ್ಲಾಡಿಸಿದ ಬಳಿಕ ವಿಷ್ಣುವರ್ಧನನಿಗೆ ಎಚ್ಚರಿಕೆಯಾಗಿ, ಮೈ ಮುರಿದು ಕಣ್ಣುಜ್ಜಿಕೊಂಡು, ತನ್ನ ಬಳಿ ಕುಳಿತ ಬಲ್ಲಾಳನನ್ನು ನೋಡಿ—

'ಏನು ಅಣ್ಣಾಜಿ?'

—ಎಂದ, ಇನ್ನೂ ನಿದ್ರೆ ತುಂಬಿದ ಧ್ವನಿಯಲ್ಲಿ.

'ಏನೇ—ಚೆನ್ನಾಯಿತು ಬಿಡು. ನಮಗೆ ಒಳ್ಳೇ ಮರ್ಯಾದೆ ತರುವ ಕೆಲಸವನ್ನೇ ಮಾಡಿದೆ.'

'ಆ— ಏನಾಯಿತು?'

'ಮತ್ತೆ ಅದನ್ನೇ ಕೇಳುತ್ತೀಯಲ್ಲಾ—ನೀನೆಲ್ಲಿ ಮಲಗಿದ್ದೀಯೋ ಸ್ವಲ್ಪ ಕಣ್ಣು ಬಿಟ್ಟು ನೋಡು.'

ಬಲ್ಲಾಳನ ಮಾತು ಕೇಳಿ, ವಿಷ್ಣುವರ್ಧನ—

'ಎಲ್ಲಿ ಮಲಗಿದೇನೆ?'

—ಎಂದು ಮತ್ತೊಮ್ಮೆ ಕಣ್ಣುಜ್ಜಿಕೊಂಡು, ಸುತ್ತಲೂ ನೋಡಿ ತಾನು ತೋಟದಲ್ಲೇ ಮಲಗಿರುವುದು ನೆನಪಾಗಿ—

'ಓ! ಇಲ್ಲೇ ಮಲಗಿಬಿಟ್ಟದ್ದೇನೇ. ಏನೋ ಯೋಚಿಸುತ್ತಾ ಕುಳಿತಿದ್ದೆ. ನಿದ್ರೆ ಬಂದದ್ದೇ ತಿಳಿಯಲಿಲ್ಲ.'

—ಎಂದ ತನ್ನ ಮೈ ಮರೆವಿಗೆ ನಾಚುತ್ತಾ.

'ನಿನಗೆ ನಿದ್ರೆಯೂ ಬಂತು—ನಮಗೆ ಮರ್ಯಾದೆಯೂ ಬಂತು?'

—ಬಲ್ಲಾಳ ನಗುತ್ತಾ ಹೇಳಿದ

'ಹಾಗಂದರೇನು ಅಣ್ಣಾಜಿ?'

—ಬಲ್ಲಾಳನ ಮಾತಿನ ಅರ್ಥವೇ ತಿಳಿಯದೆ ಕೇಳಿದ ವಿಷ್ಣುವರ್ಧನ

'ಹೂ, ಮರ್ಯಾದೆಯಲ್ಲದೆ ಮತ್ತೇನಿದೆ? ನಿನಗೆ ಮಲಗಲು ಹಾಸಿಗೆ ಇರಲಿಲ್ಲವೇ? ಮನೆಯಿರಲಿಲ್ಲವೇ? ಅಲ್ಲಿ ಯಾರಾದರೂ ಮಲಗಬೇಡ ಎಂದು ಹೇಳಿದರೇ?'

'ಇಲ್ಲ.'

'ಸಾಕು ಬಿಡೋ ಬಿಟ್ಟಿ— ಏನು ಗಿಳಿಯಂತೆ ಮಾತಾಡುತ್ತೀಯ. ಇಲ್ಲವಂತೆ— ಏನಿಲ್ಲ?'

'ನನಗಿಲ್ಲಿ ಮಲಗಿರುವುದೇ ನೆನಪಿಲ್ಲ ಎಂದು ಹೇಳಲಿಲ್ಲವೇ ಅಣ್ಣಾಜಿ?'

'ಇರಬಹುದು—ಅದು ನಿನಗೆಗೊತ್ತು. ಆದರೆ ನೋಡಿದವರು ನಮಗೆ ಏನನ್ನುತ್ತಾರೆ?'

'ಏನನ್ನುತ್ತಾರೆ?'

—ಬಲ್ಲಾಳನ ಮಾತಿನ ಜಾಡೇ ತಿಳಿಯದೆ ಕೇಳಿದ ವಿಷ್ಣುವರ್ಧನ.

'ಮತ್ತೇನು—'ಈ ಹುಡುಗ ಏನೋ ತಪ್ಪು ಮಾಡಿದ. ಅದಕ್ಕೆ ಮನೆಯವರು ಸಿಟ್ಟಾಗಿ ಹೊರಗಟ್ಟಿದರು. ಅದಕ್ಕೇ ಪಾಪ! ಈ ಹುಡುಗ ಹೀಗೆ, ಚಳಿಯಲ್ಲಿ ಕಲ್ಲಿನ ಮೇಲೆ ಮಲಗಿದಾನೆ. ಹೀಗೆ ಮಾಡಿದವರು ಎಂಥ ಕಟುಕರು ಎಂದು ನಮ್ಮನ್ನು ಅನ್ನುತ್ತಾರೆ. ಮೈ ಮರೆವು ಅಂದರೆ ತೀರಾ ಇಂಥ ಮೈ ಮರವೇ?'

—ತಮ್ಮನ ಮೇಲೆ ಸಿಟ್ಟು ಬಂದಂತೆಯೇ ಕೇಳಿದ ಬಲ್ಲಾಳ.

'ಅಷ್ಟೇನೇ?'

—ಬಲ್ಲಾಳನ ಮಾತು ಕೇಳಿ ವಿಷ್ಣುವರ್ಧನ ನಗುತ್ತಾ ಕೇಳಿದ.

'ಇಲ್ಲಿ ಮಲಗಿದೆ ಅಂತ ನನ್ನ ಮೇಲೆ ಕನಿಕರದ ಅಸಮಧಾನ ಅಲ್ಲವೇ ಅಣ್ಣಾಜಿ? ಅದು ಹೇಳುವುದು ಬಿಟ್ಟು ಸುಮ್ಮನೆ ಏನೋ ಕಥೆ ಕಟ್ಟುತ್ತೀರಲ್ಲಾ. ಮೈ ಮರೆವು ಎಂದು ಹೇಳಿದೆನಲ್ಲಾ, ಇನ್ನು ಬೇಕಾದರೆ ತಪ್ಪಾಯಿತು ಎಂದೂ ಹೇಳುತ್ತೇನೆ. ಆಯಿತೇ? ನೀವು ಬೇಕಾದರೆ ಕೆನ್ನೆಗೆ ಎರಡೇಟು ಹಾಕಿ, ಅವ್ವೆಗೆ ಮಾತ್ರ ಇದು ಹೇಳಬೇಡಿ'

'ಅವ್ವೆಗೆ ಹೇಳುವುದಿರಲಿ—ನಿನ್ನನ್ನು ಈ ದೇಸಿಗ ಸ್ಥಿತಿಯಲ್ಲಿ ನೋಡಿದವರಿಗೆ, ಏನು ಹೇಳಲಿ?'

’ನೋಡಿದ್ದು ನೀವೇ ಅಲ್ಲವೇ ಅಣ್ಣಾಜಿ? ಅದಕ್ಕೇಕೆ ಚಿಂತೆ?’

’ನಾನೊಬ್ಬನೇನೇ?’

’ಅಲ್ಲವಾದರೆ— ಮತ್ತಾರು ನೋಡಿದರು? ನನಗೆ ಗೊತ್ತು—ರಾತ್ರಿ ನಾನು ಮಲಗಲು ಬರಲಿಲ್ಲವೆಂದು ನಿಮಗೆ ಯೋಚನೆಯಾಯಿತು. ಹುಡುಕಿಕೊಂಡು ಬಂದಿರಿ. ಬೇರೆಯವರಿಗೇನು ಗೊತ್ತು?’

’ಮತ್ತದೇ ಮೂರ್ಖ ಮಾತು. ಹೆಗ್ಗಡೆಯವರ ಮಗಳು ನೀನಿಲ್ಲಿ ಮಲಗಿದ್ದನ್ನು ನೋಡಿದರಲ್ಲಾ—-ಅವರು ನಿಮ್ಮ ಸೋದರ, ಅರಸು ಕುಮಾರ ಕಲ್ಲ ಮೇಲೇಕೆ ಮಲಗಿದ್ದ ಎಂದು ಕೇಳಿದರೆ ಅದಕ್ಕೆ ನಾನೇನು ಉತ್ತರ ಹೇಳಲಿ?’

’ಯಾರು?’

—ಮಲಗಿದ್ದವನು ದಿಗ್ಗನೆ ಎದ್ದು ಕುಳಿತು ಕೇಳಿದ ವಿಷ್ಣುವರ್ಧನ.

’ಶೀತಕ್ಕೆ ಕಿವಿ ಮುಚ್ಚಿಕೊಂಡಿದೆಯೇನು— ಗಟ್ಟಿಯಾಗೇ ಹೇಳಿದೆನಲ್ಲಾ— ಹೆಗ್ಗಡೆಯವರ ಮಗಳೂ ನಿನ್ನನ್ನು ಈ ದಿವ್ಯಸ್ಥಿತಿಯಲ್ಲಿ ನೋಡಿದರು ಎಂದು.’

—ಬಲ್ಲಾಳ ನಗುತ್ತಾ ಹೇಳಿದ.

’ಹೌದೇ?’

—ಕೇಳಿದ ಕಿವಿಗಳನ್ನೇ ನಂಬದವನಂತೆ ಕೇಳಿದ ವಿಷ್ಣುವರ್ಧನ

’ಹೂ. ಆಕೆಯನ್ನೇ ಕರಿಸಿ ಕೇಳಿಸಲೇನು? ಹೂ ಕೊಯ್ಯುವುದಕ್ಕೆ ಬಂದಾಕೆಗೆ, ನಿನ್ನನ್ನು ನೋಡಿ ಭೂತ ಕಂಡಂತಾಗಿರಬೇಕು. ಅದಕ್ಕೇ ಬೆಕ್ಕಸಬೆರಗಾಗಿ ನೋಡುತ್ತಾ

ನಿಂತಿದ್ದವರು, ನನ್ನನ್ನು ಕಂಡು ಓಡಿ ಹೋದರು. ಈಗ ಹೇಳು—ನಿನ್ನ ಈ ಮೈ ಮರೆವಿಗೆ ಏನು ಮಾಡಬೇಕು?'

—ಮತ್ತೂ ನಗುತ್ತಲೇ ಕೇಳಿದ ಬಲ್ಲಾಳ.

ಆದರೆ ವಿಷ್ಣುವರ್ಧನ ಆ ಪ್ರಶ್ನೆಗೆ ಉತ್ತರ ಕೊಡುವ ಸ್ಥಿತಿಯಲ್ಲೇ ಇರಲಿಲ್ಲ.

ತಾನಲ್ಲಿ ಮಲಗಿದ್ದ—ಹಾಗೆ ಮಲಗಿದ ತನ್ನನ್ನು ನೋಡುತ್ತಾ ನಿಂತಿದ್ದಳು ಶಾನ್ತಲಾ!

ಬಲ್ಲಾಳ ಹೇಳಿದ ಮಾತು, ಅವನ ಚಿತ್ತವನ್ನು ಯಾವ ಯಾವುದೋ ಬೆಳಕಿನ ಲೋಕದಲ್ಲಿ ಸುತ್ತಿಸುತ್ತಿತ್ತು.

ತನ್ನ ಪ್ರಶ್ನೆಗೆ ವಿಷ್ಣುವರ್ಧನ ಉತ್ತರ ಕೊಡದೆ ಸುಮ್ಮನೆ ಕುಳಿತುದನ್ನು ಕಂಡು ಬಲ್ಲಾಳ ಮತ್ತಷ್ಟು ಗಟ್ಟಿಯಾಗಿ ನಗುತ್ತಾ ಕೇಳಿದ—

'ಅಥವಾ—ನಮಗೆಲ್ಲಾ ಏನೋ ನೆಪ ಹೇಳಿ, ಆ ಚೆಲುವೆ ಹೀಗಾದರೂ ನಿನ್ನ ಮುಖ ನೋಡಲಿ ಎಂದು ಮಲಗಿದ್ದೆಯೋ?'

ಬಲ್ಲಾಳನಾಡಿದ ಆ ಮಾತನ್ನು ಕೇಳಿ ವಿಷ್ಣುವರ್ಧನನ ಮುಖ ಇದ್ದಕ್ಕಿದ್ದ ಹಾಗೇ ತಪ್ತ ತಾಮ್ರದಂತಾಯಿತು. ಆ ಪ್ರಶ್ನೆ ಕೇಳಿದ ಬಲ್ಲಾಳನ ಮುಖವನ್ನು ನೋಡಲಾಗದೆ ಎತ್ತಲೋ ನೋಡುತ್ತಾ, ಆಕಸ್ಮಿಕವಾಗಿ ಕೈಗೆ ಸಿಕ್ಕ ಪಾರಿಜಾತದ ಮೃದು ದಳವನ್ನು ನೇವರಿಸುತ್ತಾ, ಏನೋ ಕನಸು ಕಾಣುತ್ತಿರುವವನಂತೆ ತನಗೆ ತಾನೇ ಹೇಳಿಕೊಳ್ಳುವವನಂತೆ ಹೇಳಿದ ವಿಷ್ಣುವರ್ಧನ—

’ಚೆಲುವೆ. ಹೆಗ್ಗಡೆಯವರ ಮಗಳು ಮೂರು ಲೋಕದಲ್ಲಿ ಮತ್ತೆಲ್ಲೂ ಕಾಣದಂತ ಚೆಲುವೆ’

ಆ ಮಾತನ್ನು ಕೇಳಿ ಬಲ್ಲಾಳ ಅವಾಕ್ಕಾಗಿ, ಬೆಳಗಿನ ಹೊಂಬೆಳಕಿನಲ್ಲಿ ಮಿರುಗಿಟ್ಟಂತೆ ಹೊಳೆವ ತಮ್ಮನ ಮುಖವನ್ನೇ ದಿಟ್ಟಿಸಿ ನೋಡಿದ.

ಬಲ್ಲಾಳ ದಿಟ್ಟಿಸಿ ನೋಡುತ್ತಲೇ ಇದ್ದ ವಿಷ್ಣುವರ್ಧನ ಕನಸು ತುಂಬಿದ ಕಣ್ಣುಗಳಿಂದ ತನ್ನನ್ನೇ ನೋಡುತ್ತಾ ಪಾರಿಜಾತದ ದಳವನ್ನು ನೇವರಿಸುತ್ತಲೇ ಇದ್ದ.

*          *          *          *          *          *

ದಿಟ್ಟಿಸಿ ನೋಡಿದಳು—

ಹೂ ತರಲು ಹೋದವಳು ಎಷ್ಟೋ ತಡವಾಗಿ, ಕೊಯ್ದ ಹೂವೆಲ್ಲವೂ ಬುಟ್ಟಿಯಿಂದ ತುಳುಕಿ ನೆಲಕ್ಕೆ ಚೆಲ್ಲುತ್ತಿರುವುದನ್ನೂ ನೋಡದೆ, ಬಿರುಗಾಳಿ ಬೆನ್ನಟ್ಟಿದವಳಂತೆ ಓಡುತ್ತಾ, ಏದುತ್ತಾ ಮನೆಯೊಳಗೆ ಬಂದ ಮಗಳನ್ನು ನೋಡಿ ಮಾಚಿಕಬ್ಬೆಯೂ ಚಕಿತಳಾಗಿ, ಶಾನ್ತಲೆಯ ಮುಖವನ್ನು ದಿಟ್ಟಿಸಿ ನೋಡಿದಳು.

ಶಾನ್ತಲೆಯ ಮುಖ ಕುಂಕುಮ ಬಳಿದಂತಿತ್ತು. ಹಣೆ ಬೆವರಿದ್ದರೂ ಕಣ್ಣುಗಳು ಫಳ ಫಳ ಹೊಳೆಯುತ್ತಿದ್ದವು.

’ಇಷ್ಟೇಕೆ ತಡವಾಯಿತು? ಹೀಗೇಕೆ ಓಡುತ್ತಾ ಬಂದೆ?’

’ಏನೂ ಇಲ್ಲ ಅವ್ವೆ?’

—ಏದುತ್ತಲೇ ಹೇಳಿದಳು ಶಾನ್ತಲೆ.

'ಏನೂ ಇಲ್ಲವಂತೆ. ಕಮ್ಮಾರನ ತಿದಿಯಂತೆ ಏದುತ್ತಿದೀಯ? ಹೂವೆಲ್ಲಾ ನೆಲದ ಪಾಲಾದುದೂ ಕಾಣುತ್ತಿಲ್ಲ—ಆದರೂ ಏನೂ ಇಲ್ಲವಂತೆ.'

—ಎಂದು ತಾನೇ ಏನೋ ಜ್ಞಾಪಿಸಿಕೊಂಡು ಕೇಳಿದಳು ಮಾಚಿಕಬ್ಬೆ.

'ಆ ಜಾಜಿಯ ಪೊದೆಯ ಹತ್ತಿರ ಹಾವೇನಾದರೂ ಕಾಣಿಸಿತೇ?'

ತಾಯಿಯ ಪ್ರಶ್ನೆಗೆ ಏನು ಉತ್ತರ ಹೇಳಬೇಕೆಂದು ತೋಚದೆ, ಹೊಯ್ದಾಡುತ್ತಿದ್ದ ಶಾನ್ತಲೆಗೆ ಆಕೆಯೇ ಉತ್ತರ ಸೂಚಿಸಿದಂತಾಗಿ—

'ಹೂ.'

—ಎಂದಳು.

'ಹೌದೇ? ಇಲ್ಲೇ ಹತ್ತು ಬುಟ್ಟಿ ಹೂವು ಸಿಗುತ್ತದೆ. ಎಷ್ಟು ಹೇಳಿದರೂ ಕೇಳದೆ ತೋಟದಲ್ಲೆಲ್ಲಾ ಅಲೆಯುತ್ತೀಯ, ಛೀ ಕೆಟ್ಟವಳೇ.'

—ತನ್ನ ಭಯದಲ್ಲಿ ತಟಕ್ಕನೆ ಸಿಟ್ಟಾಗಿ ಕೇಳಿದಳು. ಮರುಗಳಿಗೆಯೇ ಮತ್ತೆ ಭಯದಿಂದ—

'ಎಂಥ ಹಾವು? ಎಲ್ಲಾದರೂ ಮುಟ್ಟಿತೇ?'

'ಮುಟ್ಟಲಿಲ್ಲ.'

'ಮತ್ತೆ? ಎಂಥ ಹಾವು—ನೋಡಿದೆ?'

'ಊಹೂ—ಸರಿದ ಸದ್ದಾಯಿತು. ಗಾಬರಿಯಾಗಿ ಓಡಿಬಂದೆ.'

'ಅಷ್ಟೇತಾನೇ. ಸದ್ಯ—ದೇವರದಯೆ ಚೆನ್ನಾಗಿತ್ತು. ಇನ್ನು ನೀನು ಆ ಪೊದೆಯ ಕಡೆ ಕಾಲಿಡಬೇಡ.'

—ಎಂದು, ಭಯ ನಿವಾರಣೆಯಾದ ನಿಟ್ಟುಸಿರಿಟ್ಟು, ಮಗಳಿಗೆ ಕಟ್ಟುಮಾಡಿದ ಮಾಚಿಕಬ್ಬೆ—

'ಅಂತೂ ನಿನ್ನಿಂದ ಅವರ ಪೂಜೆಗೆ ತಡವಾಯಿತು. ಅಲ್ಲಿ ಹೋಗಿ ಪೂಜೆಗೆ ಅಷ್ಟು ಬಿಡಿಹೂವಿಟ್ಟು ಬಾ. ಇಬ್ಬರೂ ಸೇರಿಕೊಂಡು ಬೇಗ ಮಂಗಳಾರತಿಯ ಹೊತ್ತಿಗೆ ಬಂದು ಹಾರ ಕಟ್ಟಿಕೊಡೋಣ.'

—ಎಂದಳು

ತಾಯ ಮಾತಿನಂತೆಯೇ ಶಾನ್ತಲೆ, ಅಷ್ಟು ಬಿಡಿ ಹೂವುಗಳನ್ನು ತೆಗೆದುಕೊಂಡು ಹೋಗಿ, ಪೂಜೆಗೆ ಕುಳಿತ ಮಾರಸಿಂಗಮಯ್ಯನ ಬಳಿಯಲ್ಲಿದ್ದ ಹರಿವಾಣದಲ್ಲಿಟ್ಟು ಬಂದು, ಆ ವೇಳೆಗೆ ಮಾಚಿಕಬ್ಬೆ ಸೀಳಿಟ್ಟಿದ್ದ ಬಾಳೆಯ ನಾರಿನ ತೆಳುವಾದ ಎಳೆಯನ್ನು ತೆಗೆದುಕೊಂಡು ಹೂ ಕಟ್ಟುತ್ತಾ ಕುಳಿತಳು. ಅಷ್ಟು ಹೊತ್ತು ತಾಯಿ ಮಕ್ಕಳಿಬ್ಬರೂ ಮಾತನಾಡದೆ ಹೂ ಕಟ್ಟುತ್ತಿದ್ದರು. ಮಾಚಿಕಬ್ಬೆಗೆ ಬೇಗ ಮಾಲೆ ಕಟ್ಟುವ ಅವಸರ. ಶಾನ್ತಲೆಗೆ ಎಲ್ಲಿಯದೋ ಚಿಂತೆ, ಗಳಿಗೆಗೊಮ್ಮೆ ನೆನಪಿನ ಗಾಳಿ ಸುಳಿದು ಅವಳ ಮೈ ನವಿರೇಳುತಿತ್ತು. ಗಳಿಗೆಗೊಮ್ಮೆ ಅವಳ ದಂತದ ಕೆನ್ನೆ ಕೆಂಪೇರುತ್ತಿತ್ತು. ಕಣ್ಣು ಏನೋ ಕಾಣುತ್ತಿತ್ತು.

'ಅವ್ವೆ-ಮಾಗಿಯ ಹಿಮ ಮೈಗೆ ಕೆಟ್ಟದಲ್ಲವೇ?'

—ತಟಕ್ಕನೆ ಕೇಳಿದಳು ಶಾನ್ತಲೆ.

'ಏನಂದೆ?'

—ತಾನಾವುದೋ ಚಿಂತೆಯಲ್ಲಿದ್ದ ಮಾಚಿಕಬ್ಬೆ ಮಗಳ ಪ್ರಶ್ನೆಯೇ ತಿಳಿಯದೆ ಕೇಳಿದಳು

'ಏನಿಲ್ಲ ಅವ್ವೆ — ಮಾಗಿಯ ಹಿಮ ಮೈಗೆ ಕೆಟ್ಟದಲ್ಲವೇ?'

'ಹೂ.'

'ಆ ಹಿಮದಲ್ಲಿ ನೆನೆದರೆ ಏನಾಗುತ್ತದೆ ಅವ್ವೆ?'

'ಏನಾದರೂ ಆಗಬಹುದು—ಶೀತವಾಗಬಹುದು, ನೆಗಡಿಯಾಗಬಹುದು, ಕೆಮ್ಮೆ ಬರಬಹುದು, ಹೆಚ್ಚಾದರಿ ಮತ್ತೇನಾದರೂ ಆಗಬಹುದು.'

'ರಾತ್ರಿಯಲ್ಲಾ ಆ ಹಿಮದಲ್ಲೇ ನೆನದರೇನಾಗುತ್ತದೆ ಅವ್ವೆ?'

—ವಿಚಿತ್ರ ಕಾತರತೆಯಿಂದ ಕೇಳಿದಳು ಶಾನ್ತಲೆ.

'ಬುದ್ಧಿ ಇದ್ದವರು ಹಾಗೇಕೆ ನೆನೆಯುತ್ತಾರೆ. ಬಿಡು—ಈಗೇಕೆ ಆ ಮಾತು?'

'ಸುಮ್ಮನೆ ಕೇಳಿದೆ ಅಷ್ಟೆ—ಒಂದುವೇಳೆ, ಹಾಗೆ ಯಾರಾದರೂ ನೆನೆದರೆ ಏನಾಗುತ್ತದೆ?'

'ಹಾಗಾದರೆ— ಏನೂ ಆಗಬಹುದು. ಶೀತ ಹೆಚ್ಚಾದರೇ ಅದೇ ನಂಜಾಗಿ ಜ್ವರ ಬರಬಹುದು.'

'ಅದು ಬಹಳ ಕೆಟ್ಟದೇ?'

—ಏನೋ ಚಿಂತೆ ತುಂಬಿದ ಧ್ವನಿಯಲ್ಲಿ ಕೇಳಿದಳು ಶಾನ್ತಲೆ.

'ಕೆಟ್ಟದೇನು? ಎಷ್ಟೋ ಜನ ಅಂಥ ನಂಜು ಜ್ವರದಿಂದ ಸತ್ತದ್ದೂ ಉಂಟು'

'ಆ—ಹೌದೇ, ಅವ್ವೆ?'

—ದಿಗ್ಗನೆ ಬೆಚ್ಚಿ ಬಿದ್ದು ಕಂಪಿಸುವ ಧ್ವನಿಯಲ್ಲಿ ಕೇಳಿದಳು ಶಾನ್ತಲೆ.

ಶಾನ್ತಲೆ ಆ ಪ್ರಶ್ನೆಯನ್ನು ಕೇಳಿದ ರೀತಿಯನ್ನು ಕೇಳಿ ಮಾಚಿಕಬ್ಬೆಗೂ ಏಕೋ ಭಯವಾಗಿ ಮಗಳ ಮುಖವನ್ನೆ ದಿಟ್ಟಿಸಿ ನೋಡಿದಳು. ಶಾನ್ತಲೆಯ ಮುಖ ಹಿಮದಲ್ಲಿ ಬಾಡಿದ ಮಲ್ಲಿಗೆಯಷ್ಟು ಬಿಳಿದಾಗಿ, ಕಣ್ಣುಗಳೆರಡೂ ಹೆದರಿದ ಹಕ್ಕಿಗಳಾಗಿದ್ದವು. ಅದನ್ನು ನೋಡಿ ಮಾಚಿಕಬ್ಬೆಗೆ ತನ್ನ ಮಗಳು ಮನದೊಳಗೆ ಏನೋ ಬೈತಿಟ್ಟುಕೊಂಡು ಮಾತಾಡುತ್ತಿದ್ದಾಳೆ ಎನಿಸಿ, ಚಿಂತೆಯಾಗಿ—

'ಅದೇಕೆ ಈ ಮಾತು ಬಂತು ಶಾನ್ತಲೆ? ಅದೇನು ಮನಸ್ಸಿನಲ್ಲಿಟ್ಟು ಕೊಂಡಿದೀಯಾ?'

—ಎಂದು ಕೇಳಿದಳು.

'ಏನೂ ಎಲ್ಲ.ಅವ್ವೆ.'

'ನನ್ನ ಹತ್ತಿರಲೂ ಸುಳ್ಳಾಡಬೇಕೆ? ಶಾನ್ತಿ ಅದೇನು ಹೇಳು ಯಾರು ಹಿಮದಲ್ಲಿ ಮಲಗಿದ್ದವರು?'

—ಚುರುಕಾಗಿ ಕೇಳಿದಳು ಮಾಚಿಕಬ್ಬೆ

'ಯಾ....ಯಾ…ರೂ...ಇ..ಇ..ಇ ಲ್ಲ'

'ಮತ್ತದೇ ಸುಳ್ಳು? ಅದೂ ನನ್ನ ಹತ್ತಿರ—'

—'ನೀನಾಡುವ ಸುಳ್ಳು ನನ್ನನ್ನು ಕೊಲ್ಲುವ ಕಠಾರಿ' ಎಂಬಂತೆ ಹೇಳಿದಳು ಮಾಚಿಕಬ್ಬೆ, ಮಗಳ ಮುಖವನ್ನೇ ತೀಕ್ಷ್ಣವಾಗಿ ನೋಡುತ್ತಾ.

ಏಕೋ ಶಾನ್ತಲೆಗೆ ಆ ಮುಖವನ್ನು ನೋಡವುದಾಗಲಿಲ್ಲ. ತಲೆಯಲ್ಲಿ ಬಿರುಗಾಳಿ, ಎದೆಯಲ್ಲಿ ದುಃಖದ ಕಡಲು—ಎರಡರ ಭಾರವನ್ನು ಭರಿಸಲಾಗದೆ ಕಣ್ಣುಗಳು ಕಂಬನಿಗರೆದವು. ಮಾತನಾಡದೆ, ಸುಮ್ಮನೆ ಆರ್ತಳಾಗಿ ತಾಯಮೊಗ ನೋಡಿದಳು.

’ಶಾನ್ತೀ. ಶಾನ್ತೀ...ಇವೊತ್ತು ಬೆಳಗ್ಗೆ ನಿನಗೇನಾಯಿತು? ನನ್ನಾಣಿ ಹೇಳು! ಆ ಪ್ರಶ್ನೆ ಏಕೆ ಕೇಳಿದೆ. ಹಿಮದಲ್ಲಿ ಯಾರು ಮಲಗಿದ್ದರು.’

—ಮಗಳ ಅರ್ಥವಾಗದ ದುಃಖವನ್ನು ಕಂಡು ಮಾಚಿಕಬ್ಬೆ ತಾನೂ ವಿಹ್ವಳಾಗಿ ಕೇಳಿದಳು.

’ಅವರು ...ಅವರು’

—ಆಣೆಯಿಟ್ಟು ಕೇಳಿದ ತಾಯ ಪ್ರಶ್ನೆಗೆ ಉತ್ತರ ಹೇಳದಿರಲಾಗದೆ ನೆಲಕ್ಕೆ ಮೊಗಮಾಡಿ ಹೇಳಿದಳು ಶಾನ್ತಲೆ.

’ಅವರು ಅಂದರೆ ಯಾರು? ಅದೇನು ಬಿಡಿಸಿ ಹೇಳು ಶಾನ್ತಲಾ?’

—ನೆಲಕ್ಕೆ ಬಾಗಿದ ಮಗಳ ಮೊಗವನ್ನು ಎತ್ತಿ ಹಿಡಿದು ಕೇಳಿದಳು ಮಾಚಿಕಬ್ಬೆ.

’ಅವರು. ..ಏಚಲಾದೇವಿಯ . ಮಕ್ಕಳು.’

’ಯಾರು—ಬಲ್ಲಾಳಕುಮಾರರೇ?’

’ಊಹೂ.’

’ಮತ್ತೆ—?’

ಆ ಪ್ರಶ್ನೆಗೆ ಶಾನ್ತಲಾ ಕೂಡಲೆ ಉತ್ತರ ಕೊಡಲಿಲ್ಲ, ಮಾಚಿಕಬ್ಬೆಯೇ ಮುಂದುವರಿಸಿ ಕೇಳಿದಳು—

'ಮತ್ತೆ—ವಿಷ್ಣುವರ್ಧನ ಕುಮಾರರೇ?'

ಆ ಹೆಸರು ಹೇಳುತ್ತಿದ್ದ ಹಾಗೇ ಶಾನ್ತಲೆಯ ಮುಖ ಹಾಲಿನಲ್ಲಿ ಕುಂಕುಮ ಕೇಸರಿ ಕದಡಿದಂತಾಯಿತು. ಮಂಕಾದ ಕಣ್ಣಿನಲ್ಲೂ ಕಾಂತಿಛಾಯೆ ಮಿಂಚಿತ್ತು.

'ಅಷ್ಟು ಹೇಳುವುದಕ್ಕೆ ಇಷ್ಟೆಲ್ಲ ದ್ರಾವಿಡ ಪ್ರಾಣಾಯಾಮವೇಕೆ? 'ಅವರು ನೆನೆದರು. ಅದಕ್ಕೇನು ಮಾಡಬೇಕೆಂದು ನಿನ್ನವ್ವೆಯಯನ್ನು ಕೇಳಿ ಹೇಳು' ಎಂದು ಏಚಲಾದೇವಿಯರು ಹೇಳಿದರೇ?'

'ಊಹೂ.'

'ಮತ್ತೆ ಕುಮಾರರೇ ಕೇಳಿದರೇ?'

... ... ...

'ಏಚಲಾದೇವಿಯವರು ಹೇಳಲಿಲ್ಲ, ಕುಮಾರರು ಕೇಳಲಿಲ್ಲ, ಅವರು ನೆನೆದದನ್ನು ನೀನೇ ನೋಡಿದೆಯಾ?'

—ತನ್ನ ಪ್ರಶ್ನೆಗೆ ಮಗಳು ಏನೂ ನೇರವಾದ ಉತ್ತರ ಕೊಡದೆ, ಸುತ್ತು ಬಳಸು ಮಾಡುತ್ತಿರುವುದನ್ನು ಕಂಡು ಮಾಚಿಕಬ್ಬೆ ಅಸಹನೆಯಿಂದ ಕೇಳಿದಳು. ಆ ಮಾತಿಗೂ ಶಾನ್ತಲೆ ಉತ್ತರ ಕೊಡಲಿಲ್ಲ. ಅದರಿಂದ ಅಸಹನೆ ಮತ್ತಷ್ಟು ಹೆಚ್ಚಿ—

'ಕೇಳಿದ ಪ್ರಶ್ನೆಗೆ ಉತ್ತರ ಕೊಡದಂಥದು, ಇವತ್ತು ನಿನಗೇನಾಗಿದೆ ಶಾನ್ತಿ?'

—ಏಕೋ ಬಾಗಿದ ಮಗಳ ಮುಖವನ್ನು ತಟಕ್ಕನೆ ಮೇಲೆತ್ತಿ ಕೇಳಿದಳು ಮಾಚಿಕಬ್ಬೆ.

ಶಾನ್ತಲೆಯ ಕಣ್ಣುಗಳಲ್ಲಿ ನೀರಾಡುತ್ತಿತ್ತು. ಆಕೆಯ ಮುಖ ಬಿಸಿಲು ಬಿದ್ದ ಪಲಾಶ ಪುಷ್ಪದಂತೆ ಕೆಂಪೇರಿ ಹೊಳೆಯುತ್ತಿತ್ತು. ತನ್ನನ್ನೇ ದಿಟ್ಟಿಸಿ ನೋಡುವ ತಾಯ ಮುಖವನ್ನು ನೋಡಲಾಗದೆ—

'ಅವ್ವೇ'

—ಎಂದು ಕಾತರಳಾಗಿ ಹೇಳಿ, ಹಾಗೇ ತಾಯ ತೊಡೆಯಲ್ಲಿ ತನ್ನ ಮುಖ ಮರೆಸಿದಳು.

ಇದ್ದಕ್ಕಿದ್ದ ಹಾಗೇ ಮಾಚಿಕಬ್ಬೆಯ ಕಣ್ಣೆದಿರಿನಲ್ಲಿ ಹತ್ತಾರು ವಿದ್ಯುಲ್ಲತೆಗಳು ಮಿಂಚಿದಂತಾಯಿತು.

೧೪

ತನ್ನ ಮಗನಂತೆಯೇ ಎರೆಯಂಗದೇವನೂ ಇರುಳನ್ನು ನಿದ್ರೆಯಿಲ್ಲದೆ ಕಳೆದಿದ್ದ. ಚಿಂತೆ ತುಂಬಿದ, ನಿದ್ರೆಗೆಟ್ಟು ಗಡಸಾದ ಅವನ ಮುಖ ಮಳೆ ಬಂದು ಊರನ್ನೇ ಕೊಚ್ಚುವುದೋ ಅಥವಾ ಎರಡು ಸಿಡಿಲನ್ನು ಉಗಿದು ಕರಗಿ ಹೋಗುವುದೋ— ಅಂತೂ ಇದರಿಂದ ಏನೋ ಆಗುವುದು ಖಂಡಿತ ಎನಿಸುವ ಮೋಡ ಕಟ್ಟಿದ ಆಕಾಶದಂತಿತ್ತು.

ಎದ್ದವನೇ, ಸ್ನಾನಕ್ಕೆ ಹೊರಡುವ ಮೊದಲೇ ತನ್ನ ಮಡದಿಗೆ—

'ಏಚಲಾ ನಾನೀಗ ಸ್ನಾನ ತೀರಿಸಿಕೊಂಡು, ಹೋಗಿ, ಚಕ್ರವರ್ತಿಗಳನ್ನು ಕಂಡು ಬರುತ್ತೇನೆ, ರಾತ್ರಿಯೇ ನಾನು ಬಿಟ್ಟಿಯಣ್ಣನಿಗೆ ಹೇಳಿದ್ದೆ— ಈ ದಿನ ನಾವು ಇಲ್ಲಿಂದ ಹೊರಡಬೇಕು. ಎಲ್ಲರಿಗೂ ಸಿದ್ಧವಾಗಿರಲು ಹೇಳು ಎಂದು. ನೀನೂ ಅಷ್ಟೆ— ಯಾರಿಗೇನು ಉಡುಗೊರೆ ಕೊಡುವುದಿದೆಯೋ, ಏನು ಮಾತು ಹೇಳುವುದಿದೆಯೋ, ಕೇಳುವುದಿದೆಯೋ ಎಲ್ಲಾ ಮುಗಿಸಿ ಪ್ರಯಾಣಕ್ಕೆ ಸಿದ್ಧವಾಗಿರು'

ಪತಿ ಹೇಳಿದುದನ್ನು ಕೇಳಿ ಏಚಲಾದೇವಿ ಚಕಿತಳಾದಳು.

'ಏನು ಈ ದಿನವೇ ಹೊರಡಬೇಕೇ?'

'ಇನ್ನು ಈ ಬಳ್ಳಿಗಾಮೆಯಲ್ಲಿ ಇರಬೇಕೆನ್ನುತ್ತೀಯಾ? ಅದಾಗುವುದಿಲ್ಲ'

—ಎಂದು ಕರ್ಕಶವಾಗಿ ಹೇಳಿ, ಸ್ನಾನದ ಮನೆಯತ್ತ ನಡೆದ.

ಸ್ನಾನ ಮಾಡುವಾಗಲೂ ಆತನ ಮನಸು, ಅಲ್ಲಕಲ್ಲೋಲವಾಗಿತ್ತು. ಸ್ನಾನ ಗೃಹದ ದಾಸಿ, ಅರೆದಿಟ್ಟ ಚಂದನ—ಆಮಲಕದ ಚೂರ್ಣವನ್ನು ಮೈಗೆ ಲೇಪಿಸಿಕೊಳ್ಳದೆ, ಅವಸರದಲ್ಲಿ ಪೂಜೆ ಮಾಡುವವನು, ಅಭಿಷೇಕ ಮುಗಿಸುವ ಹಾಗೆ ಸ್ನಾನಮುಗಿಸಿ, ಧರಿಸಲೆಂದು ಆಳು ತೆಗೆದಿಟ್ಟ ಆಡಂಭರದ ವಸ್ತ್ರಗಳನ್ನೆಲ್ಲಾ ದೂರ ಬಿಸುಟು, ತೀರಾ ಸರಳವೆನ್ನುವ ಉಡುಪು ಧರಿಸಿ, ಆಳಿನೊಂದಿಗೆ ರಥಕ್ಕೆ ಸಿದ್ಧವಾಗಲು ಹೇಳಿ ಕಳಿಸಿ, ತಂದೆಯ ಬಳಿಗೆ ಬಂದು ನಮಸ್ಕರಿಸಿದ.

'ಚಕ್ರವರ್ತಿಗಳನ್ನು ನೋಡ ಹೋಗುತ್ತೀಯಾ ಎರೆಯಂಗ?'

ನಮಸ್ಕರಿಸಿದ ಮಗನನ್ನು ಹರಸಿ ಕೇಳಿದ ವಿನಯಾದಿತ್ಯ

'ಹೂ'

'ಸರಿಯೆ. ಏನು ಮಾತಾದರೂ, ನೀನು ಮಾತನಾಡುತ್ತಿರುವುದು ಚಕ್ರವರ್ತಿಗಳ ಇದುರಿನಲ್ಲಿ ಎನ್ನುವುದನ್ನು ಮರೆಯಬೇಡ ಎರೆಯಂಗ.'

—ಆ ಮಾತನ್ನು ಹೇಳಬಾರದು ಎನಿಸಿದರೂ, ಅದನ್ನು ಹೇಳದಿರಲಾಗದೆ ಹೇಳಿದ ವಿನಯಾದಿತ್ಯ.

'ಉಂಟೆ—ಅಂಥ ಮರವೆಲ್ಲಾ ಚಕ್ರವರ್ತಿಗಳಿಗೇ ಮೀಸಲು'

—ಎಂದಷ್ಟೇ ನುಡಿದು, ಎರೆಯಂಗ, ತನ್ನ ಕಾಲನ್ನು ಸೋಕಿದ ನೆಲವನ್ನು ಶಿಕ್ಷಿಸುವನಂತೆ ನಡೆಯುತ್ತಾ ಹೋಗಿ, ಮನೆಯ ಮುಂದೆ ಸಿದ್ಧವಾಗಿ ನಿಂತ ರಥವನ್ನೇರಿದ.

ಮಗ ಕಣ್ಣಿನಿದಿರಿನಿಂದ ಮರೆಯಾದರೂ ವಿನಯಾದಿತ್ಯ ಆಕಡೆಯೇ ನೋಡುತ್ತಿದ್ದ. ಒಂದಿರುಳಿನಲ್ಲಿ ಆತನಿಗೆ ಹತ್ತಾರು ವರ್ಷಗಳ ಮುಪ್ಪು ಹೆಚ್ಚಿದಂತಾಗಿ, ಮುಖದ ಮೇಲಿನ ಚರ್ಮ ನಿರಿಗೆಯಾಗಿ ನಿಲ್ಲದೆ ಇಳಿಬಿದ್ದಿತು. ತನಗೆ ಕಣ್ಣರೆಪ್ಪೆಯನ್ನು ಎತ್ತಿಹಿಡಿಯುವಷ್ಟೂ ಶಕ್ತಿ ಇಲ್ಲವೇನೋ ಎಂಬಂತೆ, ಅರೆತೆರೆದ ಕಣ್ಣುಗಳಿಂದ ನೋಡುತ್ತಲಿದ್ದ.

ಹೊರಗೆ ರಥ ಚಕ್ರಗಳು ಚಲಸಿದ 'ಗಡ ಗಡ' ಸದ್ದಾಗಿ, ಸದ್ದೂ ದೂರವಾಗಿ ಮಾಯವಾಯಿತು.

ಇದ್ದಕ್ಕಿದ್ದ ಹಾಗೇಕೋ ಕುಳಿರ್ಗಾಳಿ ಬೀಸಿದಂತಾಗಿ, ವಿನಯಾದಿತ್ಯ ಮೈಮೇಲೆ ಹೊದ್ದ ವಸ್ತ್ರವನ್ನು ಮತ್ತಷ್ಟು ಬಿಗಿಯಾಗಿ ಎಳೆದುಕೊಂಡು, ನಿಟ್ಟುಸಿರುಬಿಟ್ಟು ತನಗೆ ತಾನೇ ಹೇಳಿಕೊಂಡ—

'ಬೆಳಕು ಬೆಳಕಾಗಿಯೇ ಇರಲಿ; ಸುಡುವ ಉರಿಯಾಗದಿರಲಿ.'

* * * * * *

ಆ ದಿನ ಪುಷ್ಪ ಶುದ್ಧ ಪಂಚಮಿ. ಅಂದೇ ಹತ್ತು ಹನ್ನೆರಡು ದಿನಗಳಿಂದ ನಡೆದ ಹೋಮ-ಹವನಗಳ ಕಾರ್ಯಗಳೆಲ್ಲವೂ ಮುಗಿದು, ಸರ್ವದೇವನಿಂದ ನಿರ್ಮಿತವಾದ ಮಂದಿರದಲ್ಲಿ ದೇವತಾಪ್ರತಿಮೆಯ ಕಾರ್ಯ. ಆ ವೇಳೆಯ ವೇಳೆಗೆ ಮಂದಿರದಲ್ಲಿರಬೇಕೆಂಬ ಉದ್ದೇಶದಿಂದ ವಿಕ್ರಮಾದಿತ್ಯನೂ, ದಿನಕ್ಕಿಂತಲೂ ಮುಂಚಿತವಾಗಿಯೇ ಎದ್ದು, ತನ್ನ ನಿತ್ಯ ವಿಧಿಗಳನ್ನು ತೀರಿಸಿ, ಉಡಿಗೆ ಧರಿಸಿ, ಅಂಥಃಪುರದ ದಾಸಿಯರು ಹೊರಡಲು ಸಿದ್ಧರಾಗುವುದನ್ನೇ ಕಾದು ಕುಳಿತಿದ್ದ.

ಶಿಬಿರದ ಬಾಗಿಲ ಬಳಿ ಸಿದ್ಧವಾಗಿ ನಿಂತ ರಾಜರಥಗಳನ್ನು ನೋಡಿ, ಎರೆಯಂಗದೇವನಿಗೂ ಆ ಮಾತು ನೆನಪಾಯಿತು. 'ಇದೂ ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತು' ಎಂದುಕೊಂಡೇ ಬಿಡಾರದ ಹೆಗ್ಗಡೆಗಳಿಗೆ, ಚಕ್ರವರ್ತಿಗಳಿಗೆ ತಾನು ಬಂದಿರುವ ಸುದ್ದಿಯನ್ನು ಅರಿಕೆ ಮಾಡಲು ತಿಳಿಸಿದ.

'ಸನ್ನಿಧಾನಕ್ಕೆ ಈಗ ವೇಳೆ ಇದೆಯೋ ಇಲ್ಲವೊ...'

—ಎಂದು ಆ ಸುದ್ದಿಯನ್ನು ತಿಳಿಸಲೂ ಹಿಂಜರಿದ ಹೆಗ್ಗಡೆ.

'ಸುದ್ದಿಯನ್ನು ಪ್ರಭುಗಳ ಕಿವಿಗೆ ಹಾಕಿ. ಮುಂದಿನದು ಅವರ ಚಿತ್ತ.'

—ಎಂದಷ್ಟೇ ಹೇಳಿದ ಎರೆಯಂಗದೇವ—-

'ಆಯಿತು, ಪ್ರಭುಚಿತ್ತ ಹೇಗೆಂದು ತಿಳಿದು ಬರುತ್ತೇನೆ'

—ಎಂದು ಹೇಳಿ, ಹೆಗ್ಗಡೆ, ಚಕ್ರವರ್ತಿಗಳ ಶಿಬಿರದೊಳಗೆ ನಡೆದು, ಎರಯಂಗದೇವ ಬಂದಿರುವುದನ್ನು ತಿಳಿಸಿದ. ಅದನ್ನು ಕೇಳಿ ವಿಕ್ರಮಾದಿತ್ಯ—

'ಯಾರನ್ನು ಕಾಣಲೂ ಈಗ ವೇಳೆಯೆಲ್ಲಿದೆ? ಆಯಿತು-ಹೆಚ್ಚು ಹೊತ್ತಿಲ್ಲವೆಂಬ ಸೂಕ್ಷ್ಮ ತಿಳಿಸಿ ಒಳಗೆ ಕಳುಹಿಸಿ'

—ಎಂದ, ಹೊರಡುವ ಹೊತ್ತಿನಲ್ಲಿ ಎರೆಯಂಗದೇವ ಕಾಣಲು ಬಂದುದನ್ನು ಕೇಳಿ ಕೊಂಚ ಇರಿಸು ಮುರಿಸಾಗಿ.

ಹೆಗ್ಗಡೆಗಳು ಹೇಳಿದುದನ್ನು ಕೇಳಿಯೇ ಏಕೋ ವಿಕ್ರಮಾದಿತ್ಯನಿಗೆ, ಒಂದು ಗಳಿಗೆಯ ಹಿಂದೆ ಹೊಳಪಾಗಿ ಕಂಡ ಹಗಲು ಮಂಕಾದಂತೆ ತೋರಿತು. ಮೈಯನ್ನು

ತುಂಬಿದ ಬೆಳಗಿನ ಉಲ್ಲಾಸವೂ ಅಷ್ಟು ಕಡಮೆಯಾಗಿ, ಹಗುರವಾಗಿದ್ದ ಮೈ ಕೊಂಚ ಜಡವಾದಂತೆ ತೋರಿತು.

'ಏಕಿರಬಹುದು? ಇಷ್ಟು ಅವಸರವಾಗಿ ನೋಡಲು ಏಕೆ ಬಂದಿರಬಹುದು'

—ಎಂದು ವಿಕ್ರಮಾದಿತ್ಯ ಚಿಂತಿಸುತ್ತಿರುವಾಗಲೇ, ಎರೆಯಂಗದೇವ ಹೆಗ್ಗಡೆಯವರನ್ನು ಮುಂದಿಟ್ಟುಕೊಂಡು ಒಳಗೆ ಬಂದು ನಮಸ್ಕರಿಸಿದ.

'ಬರಬೇಕು. ಬಿಡಾರದಲ್ಲೆಲ್ಲರೂ ಕುಶಲವೇ? ಕುಳಿತುಕೊಳ್ಳಿ'

—ಎಂದ ಎರೆಯಂಗದೇವನ ವಂದನೆಯನ್ನು ಸ್ವೀಕರಿಸಿ ವಿಕ್ರಮಾದಿತ್ಯ ತಾನೇ ಕೇಳಿದ, ಹೆಗ್ಗಡೆ ಅಲ್ಲಿಂದ ಹೋದ ಬಳಿಕ.

ಆದರೆ ಎರೆಯಂಗದೇವ ಆ ಮಾತಿಗೆ ಉತ್ತರವನ್ನು ಕೊಡಲಿಲ್ಲ. ದೊರೆಯ ಮಾತಿನಂತೆ ಕುಳಿತುಕೊಳ್ಳಲೂ ಇಲ್ಲ. ಸುಮ್ಮನೆ ನಿಂತು ವಿಕ್ರಮಾದಿತ್ಯನ ಮುಖವನ್ನೇ ನೋಡುತ್ತಿದ್ದ.

ತನ್ನ ಕಡೆ ಯಾವ ಭಾವವೂ ಇಲ್ಲದೆ ಕೇವಲ ಪ್ರಶ್ನೆಯೊಂದನ್ನೇ ತುಂಬಿಕೊಡುವ ಚಕ್ರವರ್ತಿಗಳ ನಯನಗಳನ್ನು ನೋಡಿದ—

ಅದೇ ಕಣ್ಣುಗಳು ತನ್ನಲ್ಲಿ ಪ್ರೀತಿ ಸೂಸಿದುದು, ಅಭಿಮಾನ ಬೀರಿದುದು, ಚಿಂತೆಯನ್ನು ಹಂಚಿಕೊಟ್ಟುದು, ಮೆಚ್ಚುಗೆಯಿಂದ ಮಿಂಚಿದುದು-ಆ ಎರಡು ಕಣ್ಣುಗಳ ನೂರಾರು ಕಣ್ಣುಗಳಾಗಿ ಕಂಡು—

'ಆಯಿತು-ಇನ್ನು ಆ ಕಣ್ಣುಗಳನ್ನು ನೋಡುವ ಪುಣ್ಯವೂ ತಪ್ಪಿಹೋಯಿತು'

—ಎನಿಸಿ, ಎರೆಯಂಗದೇವನ ಕಣ್ಣುಗಳು ದುಃಖಭಾರವಾದುವು.

ಒಂದು ಮಾತನಾಡದೆ, ತನ್ನತ್ತಲೇ ವಿಚಿತ್ರವಾಗಿ ನೋಡುತ್ತ ನಿಂತ ಎರೆಯಂಗದೇವನ ಕಣ್ಣುಗಳಲ್ಲಿ ಮೂಡಿದ ಯಾತನೆ, ದೂರದ ಬೆಂಕಿಯ ಜಳದಂತೆ ವಿಕ್ರಮಾದಿತ್ಯನಿಗೂ ಸೋಕಿ, ಆತನಿಗೂ ಏಕೋ ಕಸವಿಸಿಯಾದಂತಾಯಿತು.

'ಏನು ವಿಷಯ ಹೇಳಿ, ಕುಳಿತುಕೊಳ್ಳಿ.'

—ಎಂದು ಮೃದುವಾಗಿ ಕೇಳಿದ.

'ಕುಳಿತು ಮಾತಾಡುವಷ್ಟು ವೇಳೆ ಪ್ರಭುಗಳಿಗಿಲ್ಲವೆಂದು ಬಲ್ಲೆ, ಎಲ್ಲೋ ಹೊರಡಲಿದ್ದವರನ್ನು ತಡೆದುದನ್ನು ಮನ್ನಿಸಬೇಕು.'

ವಿಕ್ರಮಾದಿತ್ಯನ ಮಾತು ಕೇಳಿ, ತನ್ನನ್ನು ಕಸಿದಿದ್ದ ಯಾವುದೋ ಮೋಡಿ ಮುರಿದು ಹೇಳಿದ ಎರೆಯಂಗದೇವ.

'ಈ ದಿನ ದೇವತಾಪ್ರತಿಷ್ಠೆಯಲ್ಲವೇ? ಅಲ್ಲಿಗೇ ಹೊರಟಿದ್ದೆವು. ಇದೇನು ಇಷ್ಟು ಅವಸರವಾಗಿ ಬಂದದ್ದು ?—ಪೀಠ ಸ್ವೀಕರಿಸಿ.'

—ಎರೆಯಂಗದೇವ ಇನ್ನೂ ನಿಂತೇ ಇದ್ದುದನ್ನು ನೋಡಿ ಹೇಳಿದ ವಿಕ್ರಮಾದಿತ್ಯ.

'ಹೆಚ್ಚೇನೂ ಮಾತಿಲ್ಲ-ಅಪ್ಪಣೆಯಾಗಬೇಕು.'

—ಗಾರಾದ ಧ್ವನಿಯಲ್ಲಿ ಕೇಳಿದ ಎರೆಯಂಗದೇವ.

'ಅಪ್ಪಣೆ ?—ಏಕೆ ?'

—ಚಕಿತನಾಗಿ ಕೇಳಿದ ವಿಕ್ರಮಾದಿತ್ಯ.

'ದೋರಸಮುದ್ರಕ್ಕೆ ಹಿಂದಿರುಗುವುದಕ್ಕೆ.'

ಆ ಮಾತನ್ನು ಕೇಳಿ ವಿಕ್ರಮಾದಿತ್ಯನಿಗೆ ಮತ್ತಷ್ಟು ಆಶ್ಚರ್ಯವಾಯಿತು.

'ಹಾಗಂದರೇನು —ಯಾವಾಗ ಹೊರಡುವುದು?'

'ಇಂದೇ?'

'ಇಂದೇ? ಏಕೆ? ರಾಜಧಾನಿಯಿಂದೇನಾದರೂ ಕಳವಳದ ವಾರ್ತೆ ಬಂದಿತೆ? ಈದಿನ ಪ್ರತಿಷ್ಠಾ ಕಾರ್ಯಕ್ಕೂ ನಿಲ್ಲುವುದಿಲ್ಲವೇ ? ನಾವೂ ಇನ್ನೆರಡುದಿನ ಇಲ್ಲಿರುತ್ತೇವೆ ನೀವೂ ಅಲ್ಲಿಯವರೆಗೆ ಇಲ್ಲಿರುತ್ತೀರ ಎಂದುಕೊಂಡಿದ್ದೆವು'

—ತಾನು ಚಕ್ರವರ್ತಿ. ಒಂದು ಮಾತಿಗೆ ಒಂದು ಮಾತಿಗಿಂತ ಹೆಚ್ಚಾಗಿ ಆಡಬಾರದು ಎಂಬ ಬಿಗುಮಾನವನ್ನು, ಏಕೋ ಹೆಚ್ಚಿದ ಕಳವಳದಲ್ಲಿ ಮರೆತು ಕೇಳಿದ ವಿಕ್ರಮಾದಿತ್ಯ.

'ಇರಬೇಕಾದವರು ಇರುತ್ತಾರೆ. ನಮಗೆ ಅಪ್ಪಣೆಯಾಗಬೇಕು.'

'ಇದೇನು ಮಾತು?'

ಕಣ್ಣಿಗೆ ಕಾಣುವಷ್ಟು ಉದ್ರಿಕ್ತನಾಗಿ ಕೇಳಿದ ವಿಕ್ರಮಾದಿತ್ಯ.

'ತಮಗೀಗ ಹೆಚ್ಚು ಮಾತಿಗೆ ವೇಳೆಯಿಲ್ಲ. ಆದರೂ ಇಷ್ಟನ್ನೂ ಬಿತ್ತರಿಸಿಕೊಳ್ಳಲು ಅವಕಾಶ ಕೊಡಬೇಕು—ಹೊಯ್ಸಳರು ತಮ್ಮ ಮಿತ್ರರಲ್ಲ ಎಂಬ ಭಾವನೆ ಪ್ರಭುಗಳಿಗೆ ಬಂದಿರುವಂತಿದೆ. ಅದು ನಮ್ಮ ದೌರ್ಭಾಗ್ಯ. ಆದರೆ ನಮ್ಮಲ್ಲಿ ಇಷ್ಟು ಮಾತ್ರ ನಂಬಿಕೆ ಇಡಬೇಕು. ನಾವು ಪ್ರಭುಗಳ ಮಿತ್ರರಲ್ಲದಿರಬಹುದು, ಆದರೆ ಎಂದೂ

ಶತ್ರುಗಳಾಗಿರಲಿಲ್ಲ. ಮುಂದೂ ಶತ್ರುಗಳಾಗುವುದಿಲ್ಲ. ಆ ಮಾತಿಗೆ ಗುರುತಾಗಿ ಇದನ್ನು ಒಪ್ಪಿಸಿಕೊಳ್ಳಬೇಕು.'

—ಎಂದು ನುಡಿದು ಎರೆಯಂಗದೇವ, ತನ್ನ ಸೊಂಟಕ್ಕೆ ಕಟ್ಟಿಕೊಂಡಿದ್ದ ಕತ್ತಿಯನ್ನು ಪಟ್ಟಿ ಸಹಿತ ಬಿಚ್ಚಿ, ವಿಕ್ರಮಾದಿತ್ಯನ ಮುಂದಿಟ್ಟ.

ಎರೆಯಂಗದೇವ ತನ್ನ ಮುಂದಿಟ್ಟ, ಮುತ್ತು, ರತ್ನ, ಕೆಂಪುಗಳು ಕೆತ್ತಿ ಲಕಲಕಿಸುವ ಒರೆಯಲ್ಲಡಗಿದ ಖಡ್ಗವನ್ನು ನೋಡಿ, ವಿಕ್ರಮಾದಿತ್ಯನಿಗೆ ಸಿಡಿಲು ಬಡಿದಂತಾಯಿತು.

ಆ ಖಡ್ಗ—

ವಿಕ್ರಮಾದಿತ್ಯನಿಗೆ ಚೆನ್ನಾಗಿ ನೆನಪಿತ್ತು.

ಅದು ತನ್ನದೇ ಖಡ್ಗ!

ತನಗಾಗಿ ಎರೆಯಂಗದೇವ ಧಾರಾನಗೆರವನ್ನು ಗೆದುಕೊಟ್ಟೆಂದು, ತಾನೇ ಅದನ್ನು, ತನ್ನ ಸೊಂಟದಿಂದ ಬಿಚ್ಚಿ, ಕೈಯಾರ ಎರೆಯಂಗದೇವನ ಸೊಂಟಕ್ಕೆ ಬಿಗಿದಿದ್ದ.

ಆ ಕೂರಸಿಯ, ರತ್ನ ಖಚಿತವಾಗಿ ಧಳ ಧಳಿಸುವ ಒರೆಯೇ ವಿಕ್ರಮಾದಿತ್ಯನಿಗೆ ಹೇಳಿತು—

'ನೀನು ರಹಸ್ಯವಾಗಿರಲಿ ಎಂದುದು, ರಹಸ್ಯವಾಗಿ ಉಳಿದಿಲ್ಲ.'

ಆ ಮಾತು ಅನಿಸುತ್ತಿದ್ದಂತೆಯೇ ವಿಕ್ರಮಾದಿತ್ಯನ ಮುಖ ಕಪ್ಪಿಟ್ಟು ಹೋಯಿತು. ಸ್ಪಷ್ಟವಾಗಿ, ತರ್ಕಬದ್ಧವಾಗಿ ಮಾತನಾಡುವ ಶಕ್ತಿಯೂ ಏಕೋ ಉಡುಗಿ ಹೋದಂತಾಗಿ ತಡವರಿಸುತ್ತಾ ಹೇಳಿದ—

’ನೀವು ನಮ್ಮ ವಿಷಯದಲ್ಲಿ ತಪ್ಪು ತಿಳಿದುಕೊಂಡಿರುವಂತಿದೆ... ಯಾವುದೋ ದೃಷ್ಟಿಯಿಂದ ಮಾಡಿದ ಕೆಲಸವನ್ನು...’

’ಪ್ರಭುಗಳು ನನ್ನೊಂದು ಪ್ರಶ್ನೆಗೆ ಉತ್ತರ ಹೇಳುವ ಕೃಪೆ ಮಾಡಬೇಕು’

ಚಕ್ರವರ್ತಿ ತನ್ನ ಮಾತು ಮುಗಿಸುವ ಮೊದಲೇ ಕೇಳಿದ ಎರೆಯಂಗದೇವ.

’ಏನು?’

—ತಪ್ಪು ಮಾಡಿದ ಹುಡುಗನಂತೆ ಅಳುಕುತ್ತಾ ಕೇಳಿದ ವಿಕ್ರಮಾದಿತ್ಯ

’ನಾವು ಕೇಳಿದುದು ಸತ್ಯವೇ?’

—ಹರಿತವಾದ ಕೂರಸಿಯ ಝಳಪಿನಂತಿತ್ತು ಆ ಪ್ರಶ್ನೆ.

’ಊಹೂ. ಅದು ಸುಳ್ಳು’

—ಎಂದು ಹೇಳಬೇಕೆನಿಸಿದರೂ ಹಾಗೆ ಹೇಳಲಾಗದೆ ವಿಕ್ರಮಾದಿತ್ಯ—

’ಯಾವುದು?’

—ಎಂದು ಕೇಳಿದ.

’ಗಂಗವಾಡಿಗೆ ಹೊಸಬರು ಅರಸರಾಗುತ್ತಾರೆಂಬುದು.’

ಎರೆಯಂಗದೇವ ನೇರವಾಗಿ ಕೇಳಿದ ಪ್ರಶ್ನೆಗೆ, ಅಷ್ಟೇ ನೇರವಾಗಿ ಉತ್ತರ ಕೊಡದಿರಲು ಸಾಧ್ಯವೇ ಇಲ್ಲದೆ ವಿಕ್ರಮಾದಿತ್ಯ ಹೇಳಿದ—

’ಆಲೋಚನೆ ಇದ್ದುದೇನೋ ಸರಿ ಆದರೆ ಹಾಗೆಂದು ರಾಯಸವೇನೂ ಆಗಿಲ್ಲ...ಸಧ್ಯಕ್ಕೆ ಹಾಗನಸಿತು... ಅಗತ್ಯವಾದರೆ. ಆ. ಯೋಚನೆಯನ್ನು ಬಿಡಲೂಬಹುದು...’

’ಅಗತ್ಯವಿಲ್ಲ ಈ ಮಾತು ಪ್ರಭುಗಳ ಮನಸ್ಸಿನಲ್ಲಿ ಬಂದಿತೋ, ಆಥವಾ ಬೇರೆಯವರ ಮನಸ್ಸಿನಲ್ಲಿ ಬಂದಿತೋ ಎಂಬ ಚಿಂತೆ ಇತ್ತು. ಅದೀಗ ಪರಿಹಾರವಾದಂತಾಯಿತು. ಅಪ್ಪಣೆ ಕೊಡಬೇಕು.’

’ನೀವಿದಕ್ಕೆ ಇಲ್ಲದಷ್ಟು ಅರ್ಥ ಕಲ್ಪಿಸಬಾರದು. ನಿಮ್ಮಲ್ಲಿ ನಮಗೆ ಸ್ನೇಹವಿಲ್ಲವೆಂದಲ್ಲ...’

’ನಾವು ಪದವಿಗಾಗಿ ಪ್ರಭುಗಳ ಸ್ನೇಹ ಬಯಸಿದವರಲ್ಲ. ಅದಕ್ಕಾಗಿ ಸ್ನೇಹ ಕಳೆದುಕೊಳ್ಳುವವರೂ ಅಲ್ಲ-ಪ್ರಭು. ನಮಗೆ ಬೇಕಾದದ್ದೂ, ಸ್ನೇಹವೇ. ಆದುದರಿಂದಲೇ ಪ್ರಭುಗಳಿಗೆ ಇನ್ನು ರಾಯಸ ಕಳಿಸುವ ಶ್ರಮವೇಕಾಗಬೇಕು, ಎಂದು ನಾನೇ ಒಪ್ಪಿಸಿ ಹೋಗಲು ಬಂದೆ—ಇಗೋ—ಒಪ್ಪಿಸಿಕೊಳ್ಳಬೇಕು. ಅಪ್ಪಣೆಯಾದರೆ ನಾನಿನ್ನು ಬರುತ್ತೇನೆ.’

—ಎಂದು ಶುಷ್ಕವಾದ ಧ್ವನಿಯಲ್ಲಿ ಹೇಳಿ, ಎರೆಯಂಗದೇವ, ಚಕ್ರವರ್ತಿಯ ಅಪ್ಪಣೆಗೂ ಕಾಯದೆ, ನಮಸ್ಕರಿಸಿ ತೆರಳಿದ.

’ಎರೆಯಂಗ!’

—ತಟಕ್ಕನೆ ಎದ್ದು ನಿಂತು ಕೂಗಿದ ವಿಕ್ರಮಾದಿತ್ಯ.

ಆದರೆ ಎರೆಯಂಗದೇವನಿಗೆ ಅದು ಕೇಳಿಸಿತೋ ಇಲ್ಲವೋ. ಆತ ತಿರುಗಿ ನೋಡದೆ ಹೊರಟು ಹೋದ.

ವಿಕ್ರಮಾದಿತ್ಯ ಒಂದು ಗಳಿಗೆ ಹಾಗೇ ನಿಂತಿದ್ದ—

ಆತನ ಕಾಲ ಬುಡದಲ್ಲಿ ಎರೆಯಂಗದೇವ ಇರಿಸಿಹೋದ ರತ್ನಖಚಿತವಾದ ಖಡ್ಗ, ವಿಕ್ರಮಾದಿತ್ಯನನ್ನು ಅಣಿಕಿಸುವಂತೆ ಹೊಳೆಯುತ್ತಿತ್ತು.

ವಿಕ್ರಮಾದಿತ್ಯ—ನಿಂತೇ ಇದ್ದ— ಒಂದು ಗಳಿಗೆ. ಬಳಿಕ ನಿಲ್ಲಲು ಆಗದಂತೆ, ನಿಧಾನವಾಗಿ ಆಸನದ ಮೇಲೆ ಕುಸಿದ ಅವನ ಹೃದಯ ಹೇಳುತ್ತಿತ್ತು—

'ಆಯಿತು—ಇನ್ನೆಂದೂ ಆತ ಬರುವುದಿಲ್ಲ, ಕರೆಯ ಬೇಡ.'

ಥಟಕ್ಕನೆ ಚಕ್ರವರ್ತಿಯ ನೇತ್ರಗಳಿಂದಲೂ ಎರಡು ಹನಿ ನೀರು ತುಳುಕಿದವು.

* * * * * *

'ಏಚಲಾದೇವಿ ಬಂದಿದಾರೆ.'

ದಾಸಿ ಹೇಳಿದ ಸುದ್ದಿಯನ್ನು ಕೇಳಿ, ಮಾಚಿಕಬ್ಬೆಗೆ ಮಿಂಚು ಸೋಕಿದಂತಾಯಿತು.

ಏಕಿರಬಹುದು? ಏನು ಅವಸರದ ಕೆಲಸ? ಏನಾದರೂ ಕೆಲಸವಿದ್ದರೂ 'ಬಿಡುವಿದ್ದರೆ ಬರಬೇಕು' ಎಂದು ಹೇಳಿ ಕಳಿಸದೆ ಮಂಡಲಾಧೀಶ್ವರನ ಮಹಿಷಿ ' ತಾನೇ ಬಂದುದೇಕೆ? ಹಗಲಿನ ಪೂಜೆಯನ್ನು ಮುಗಿಸುತ್ತಿದ್ದ ಮಾಚಿಕಬ್ಬೆಯ ಚಿತ್ತ ಆ ವಾರ್ತೆಯನ್ನು ಕೇಳಿ ಅಲ್ಲಕಲ್ಲೋಲವಾಯಿತು.

ತನ್ನ ಮಗಳ ಅಂದಿನ ವಿಚಿತ್ರ ವರ್ತನೆಗೆ ಏನೋ ಕಾರಣವನ್ನು ಊಹಿಸಿಕೊಂಡೇ, ಮಾಚಿಕಬ್ಬೆಯ ಚಿತ್ತ ಮೊದಲೇ ಅಶಾಂತವಾಗಿತ್ತು. ಎಷ್ಟೆಷ್ಟು ಪ್ರಯತ್ನಿಸಿದರೂ ಧ್ಯಾನದಲ್ಲಿ ನಿಲ್ಲದ ಮನಸ್ಸನ್ನು, ಪ್ರಯತ್ನ ಪಟ್ಟು ಅದು ಸಾಧ್ಯವಾಗದೆ

’ಹೇಗಾದರಾಗಲಿ, ಇದು ಮುಗಿದರೆ ಸರಿ’ ಎಂದುಕೊಂಡೇ ಪೂಜೆ ಮುಗಿಸುತ್ತಿರುವಾಗಲೇ, ಏಚಲಾದೇವಿ ಬಂದ ವಾರ್ತೆ ಕೇಳಿ, ಪೂಜೆ ಅಲ್ಲಿಗೇ ನಿಂತು ಹೋಯಿತು.

’ಶಾನ್ತಾ— ದೇವಿಯರು ಬಂದಿದಾರಂತೆ. ಹೋಗಿ ಕೂಡಿಸಿ ’ಪೂಜೆ ಮುಗಿಸಿ ಬರುತ್ತಾಳೆಂದು ಹೇಳಿ ಮಾತನಾಡಿಸುತ್ತಿರು.’

—ಎಂದು ಹೇಳಿ, ಮನೆಗೆ ಬಂದ ಏಚಲಾದೇವಿಯನ್ನು ಕಾಣಲು ಮಗಳನ್ನು ಕಳುಹಿಸಿ, ತಾನೂ ಅವಸರದಲ್ಲಿ ಪೂಜೆ ಮುಗಿಸಿ, ಏಚಲಾದೇವಿಯನ್ನು ಕಾಣಬಂದಳು.

’ತಡವಾಯಿತು—-ಮನ್ನಿಸಬೇಕು’

—ಎಂದು ಕ್ಷಮೆ ಕೇಳುತ್ತಲೇ ಬಂದ ಮಾಚಿಕಬ್ಬೆ, ಈ ಕಣ್ಣೀರಿಡುವ ಶಾನ್ತಲೆಯನ್ನು ತಬ್ಬಿ ಕುಳಿತು, ತಾನೂ ಕಣ್ಣೀರಿಡುತ್ತಿರುವ ಏಚಲಾದೇವಿಯನ್ನು ಕಂಡು ಸಿಡಿಲು ಬಡಿದಂತಾದಳು. ಮುಂದೇನು ಕೇಳುವುದಕ್ಕೂ ಆಕೆಯ ಬಾಯಿಂದ ಮಾತೇ ಹೊರಡಲಿಲ್ಲ. ಹಾಗೇ ನಿಂತುಬಿಟ್ಟಳು. ಮಾತಾಡಲಾಗದಂತೆ ದುಃಖ ಏಚಲಾದೇವಿಯ ಬಾಯನ್ನು ಬಿಗಿದಿತ್ತು ಕಣ್ಣೀರು ತುಂಬಿ, ಮತ್ತಷ್ಟು ಅಗಲವಾಗಿ ಕಾಣುವ ಕಣ್ಣುಗಳಿಂದ ಆಕೆಯೂ ಮಾಚಿಕಬ್ಬೆಯನ್ನು ನೋಡಿದಳು.

ಅವರಿಬ್ಬರೂ ಸುಮ್ಮನಿದ್ದುದನ್ನು ಕಂಡ ಶಾನ್ತಲೆಯೇ ದುಃಖದಲ್ಲಿ ಬಿಕ್ಕುತ್ತಾ ಹೇಳಿದಳು—

’ಅವ್ವೆ.. ಅವ್ವೆ.. ದೇವಿಯವರು...ಈ ದಿನವೇ...ಹೊರಡುತ್ತಾರಂತೆ.’

’ಹೌದೇ... ಹೌದೇ.’

—ಮಗಳ ಮಾತನ್ನು ಕೇಳಿ, ಕರುಳಿನಲ್ಲಿ ಚೂರಿಯಾಡಿಸಿದಂತಾಗಿ, ಆ ವ್ಯಥೆಯಲ್ಲಿ ವಿಹ್ವಲಳಾಗಿ ಕೇಳಿದಳು ಮಾಚಿಕಬ್ಬೆ.

'ಹೂ.'

'ಅದೇನು—ಇದ್ದಕ್ಕಿದ್ದ ಹಾಗೇ ಈ ನಿರ್ಧಾರ?'

'ಏನು ಮಾಡುವುದು? ದೈವ ಸಂಕಲ್ಪ ಹಾಗಿತ್ತು'

—ಸೆರಗಿನ ತುದಿಯಿಂದ ಕಣ್ಣನ್ನು ಒರಸಿಕೊಂಡು ಹೇಳಿದಳು ಏಚಲಾದೇವಿ.

'ಇನ್ನೂ...ಇನ್ನೂ....ಈಗ ಬಂದಹಾಗಿದೆ... ಈಗಲೇ ಹೊರಟುಬಿಡುತ್ತೀರಾ? ಇನ್ನೊಂದು ದಿನವಾದರೂ. ಇದ್ದರಾಗುತ್ತಿತ್ತು.'

'ವಿಧಿ ಅಷ್ಟಕ್ಕೆ ಅವಕಾಶ ಕೊಡಲಿಲ್ಲ. ಇರಬೇಕು ಎಂದವರನ್ನು ಇರಬೇಡ ಎಂದು ಕಡ್ಡಾಯವಾಗಿ ಹೊರಡಿಸಿತು'

—ಹೊರಡಲೇಬೇಕಾದುದು ಅನಿವಾರ್ಯ ಎಂಬಂತೆ ಹೇಳಿದಳು ಏಚಲಾದೇವಿ.

ಆಕೆ ಹೇಳಿದ ಮಾತನ್ನು ಕೇಳಿ ಮಾಚಿಕಬ್ಬೆಗೆ ಹೃದಯವನ್ನೇ ಹೋಳುಹೋಳಾಗಿ ಕತ್ತರಿಸಿದಂತಾಯಿತು. ಅವರು ಹೊರಡಲೇಬೇಕಾಗಿ ಬಂದ ಕಾರಣ ಆಕೆಗೂ ಅರ್ಥವಾಗಿತ್ತು. ಆದುದರಿಂದಲೇ 'ಇರಿ' ಎಂದು ಹೇಳುವುದಕ್ಕೂ ಮಾಚಿಕಬ್ಬೆಗೆ ಬಾಯಿ ಬರಲಿಲ್ಲ. ಏಕೋ ಇದ್ದಕ್ಕಿದ್ದ ಹಾಗೇ ಆಕೆಯ ನಾಲಗೆ ನಂಜಾಗಿ ಹೇಳಿದಳು—

'ಹಾಳು ದೇವರಿಗೆ ಕಣ್ಣಿಲ್ಲ!'

'ದೇವರೇನು ಮಾಡುತ್ತಾನೆ ಮಾಚಿಕಬ್ಬೆ. ನಮ್ಮ ಅದೃಷ್ಟ. ಹೀಗಾಗ ಬೇಕು ಎಂತ ಇತ್ತು. ಆಯಿತು'

—ಎಂದು ನಿಟ್ಟುಸಿರು ಬಿಟ್ಟು ಹೇಳಿ—

'ಅವರು ಯಾವ ಗಳಿಗೆಯಲ್ಲಿ ಬಂದು ಹೊರಡಬೇಕು ಎನ್ನುತ್ತಾರೋ ಏನೋ, ಎಲ್ಲವೂ ಅವಸರದಲ್ಲಿ ಅಣಿಯಾಗಬೇಕಾಗಿದೆ. ಯಾವುದಕ್ಕೂ ಬಿಡುವಾಗುತ್ತದೆಯೋ ಇಲ್ಲವೋ ಎಂದು ಈಗಲೇ ಹೇಳಿ ಹೋಗೋಣವೆಂದು ಬಂದೆ.'

—ಎಂದು ಏಚಲಾದೇವಿ, ಅಷ್ಟು ದೂರದಲ್ಲಿ ಹರಿವಾಣ ಹಿಡಿದು ನಿಂತ ದಾಸಿಗೆ, ಹತ್ತಿರ ಬರಲು ಸನ್ನೆ ಮಾಡಿದಳು.

ದಾಸಿ ಹತ್ತಿರ ಬಂದು, ಹರಿವಾಣವನ್ನು ಮುಂದೆ ಚಾಚಿದಳು. ಹರಿವಾಣದಲ್ಲಿದ್ದ ಕುಂಕುಮದ ಭರಣಿಯನ್ನು ತಾನೇ ಕೈಗೆ ತೆಗೆದುಕೊಂಡು ಏಚಲಾದೇವಿ: ಮಾಚಿಕಬ್ಬೆ, ಶಾನ್ತಲೆಯರಿಬ್ಬರ ಹಣೆಗೂ ತಾನೇ ಕುಂಕುಮವಿಟ್ಟು, ಮೊದಲು ಶಾನ್ತಲೆಗೆಂದು ತಂದ ಉಡುಗೊರೆಯ ತಳಿಗೆಯನ್ನು ಕೊಟ್ಟು, 'ಹೋಗಿ ಉಟ್ಟು ಬಾ ತಾಯಿ, ಹೇಗೆ ಕಾಣುತ್ತೀಯೋ ಇಂದೊಂದು ದಿನ ಕಣ್ಣುತುಂಬ ನೋಡಿಬಿಡುತ್ತೇನೆ' ಎಂದಳು. ಆದರೆ ಶಾನ್ತಲೆಗೆ ಅಲ್ಲಿಂದ ಕದಲಲೂ ಮನಸ್ಸಿರಲಿಲ್ಲ.

'ಅವರ ಬಯಕೆಗೆ ಇಲ್ಲ ಎನ್ನಬಾರದು ಶಾನ್ತಾ. ಹೋಗು—ಉಟ್ಟು ಬಾ.'

—ಎಂದು ಮಾಚಿಕಬ್ಬೆಯೇ ಅವಳನ್ನು ಒತ್ತಾಯ ಮಾಡಿ, ಉಡುಗೊರೆಯನ್ನು ಉಟ್ಟು ಬರಲು ಕಳಸಿದಳು.

ಉಡುಗೊರೆಯ ಹರಿವಾಣವನ್ನು ಕೈಲಿ ಹಿಡಿದು ಶಾನ್ತಲೆ ಹೋಗಲಾರದೆ ಅಲ್ಲಿಂದ ಹೊರಗೆ ಹೋದಳು. ಹರಿವಾಣವನ್ನು ಒಪ್ಪಿಸಿದ ದಾಸಿಯೂ ಹೊರಗೆ ಸರಿದಳು.

ಅವರಿಬ್ಬರೂ ಕಣ್ಣು ಮರೆಯಾಗುತ್ತಿದ್ದ ಹಾಗೇ, ಅದುವರೆಗೂ ಏಚಲಾದೇವಿ ಬಹು ಪ್ರಯಾಸದಿಂದ ಪಾಲಿಸಿದ ಸಂಯಮ ಕಡಿದು ಹೋಗಿ, ತಟಕ್ಕನೆ ತನ್ನಿದಿರು ನಿಂತ ಮಾಚಿಕಬ್ಬೆಯನ್ನು ತಬ್ಬಿಕೊಂಡು—

'ಮಾಚಕ್ಕ'

—ಎಂದು ಬಿಕ್ಕುತ್ತಾ ತನ್ನೆದೆಗೆ ಬಿಗಿದುಕೊಂಡಳು.

'ಏಚಕ್ಕಾ'

—ಎಂದು ಮಾಚಿಕಬ್ಬೆಯೂ ಏಚಲಾದೇವಿಯನ್ನು ಬಿಗಿದು ಆಲಂಗಿಸಿದಳು. ಆ ನಾಲ್ಕು ಕಣ್ಣುಗಳಿಂದಲೂ ನೀರು ಗಂಗಾಪ್ರವಾಹದಂತೆ ಹರಿದು ಅವರಾಡಬೇಕಾದೆಲ್ಲವನ್ನೂ ತಾನೇ ಆಡಿ ಮುಗಿಸಿತು.

ಅಷ್ಟು ಹೊತ್ತೂ ಕಣ್ಣೀರು ಸುರಿದ, ಭಾರವಾದ ಹೃದಯಗಳು ಹಗುರವಾದ ಮೇಲೆ, ಏಚಲಾದೇವಿಯೇ ತನ್ನ ಭಾವಪರವಶತೆಯನ್ನು ನೆನೆದು ನಾಚಿ, ಕಡಿದು ಹೋದ ಸಂಯಮವನ್ನು ಮತ್ತೆ ತಂದುಕೊಂಡು—

'ಏನಾಯಿತೋ ಬಿಟ್ಟಿತೋ—ಇಲ್ಲಿಗೆ ಬಂದು ನನ್ನ ಯಾವುದೋ ಜನ್ಮದ ಸೋದರಿಯನ್ನು ನೋಡಿದಂತಾಯಿತು.

—ಎಂದಳು.

'ಅದು ನನ್ನ ಭಾಗ್ಯ, ಏಚಕ್ಕಾ. ನಾನೇನು ಮಾಡಿತಾನೇ ನಿನ್ನ ಸ್ನೇಹಋಣ ತೀರಿಸಬಲ್ಲೆ'

—ಮಾಚಿಕಬ್ಬೆಯೂ ಎದೆ ತುಂಬಿ ಕೇಳಿದಳು.

'ಅದು ಹಾಗೇ ಇರಲಿ—ತೀರಿಸಲೇ ಬೇಡ. ಆ ಋಣ ತೀರಿಸುವುದಕ್ಕೆ ಮುಂದಿನ ಜನ್ಮದಲ್ಲಿ ಒಬ್ಬಳೇ ತಾಯಿ ಹೊಟ್ಟೆಯಲ್ಲಿ ಹುಟ್ಟೋಣ. ನಾನಿನ್ನು ಬರುತ್ತೇನೆ ಮಾಚಕ್ಕ, ಅಲ್ಲಿಯ ಕೆಲಸ ಎಲ್ಲಿಗೆ ಬಂದಿದೆಯೋ ನೋಡಬೇಕು.'

—ಎಂದು ಹೇಳಿ ಹೊರಡಲು ಸಿದ್ಧವಾದವಳು—

'ಅಂದ ಹಾಗೆ-ನಿನ್ನ ಮಗಳನ್ನು ಕರಿ ಮಾಚಕ್ಕ, ಅವಳನ್ನು ಮರೆತೇ ಬಿಟ್ಟಿದ್ದೆ.'

—ಎಂದಳು ಏಚಲಾದೇವಿ.

'ನಿಜ, ನಿಜ—'

—ಎಂದು ಮಾಚಿಕಬ್ಬೆ 'ಶಾನ್ತಾ -ಶಾನ್ತಾ...' ಎಂದು ಮಗಳನ್ನು ಕೂಗಿದಳು.

ತಾಯಿಯ ಕೂಗನ್ನು ಕೇಳಿ, ಉಡುಪು ಬದಲಿಸುತ್ತಲೇ ಕಂಬನಿಗರೆಯುತ್ತಿದ್ದ ಶಾನ್ತಲೆ, ನಿಧಾನವಾಗಿ ಅವರ ಬಳಿ ನಡೆದು ಬಂದಳು.

ಮಳೆ ತುಂಬಿದ ಮೋಡದಂತೆ ನಿಧಾನವಾಗಿ, ತಾನು ಕೊಟ್ಟ ಉಡುಗೊರೆಯುಡುಪು, ಒಡವೆಗಳನ್ನು ಧರಿಸಿ ಒಳಗೆ ಬಂದ ಶಾನ್ತಲೆಯನ್ನು ಏಚಲಾದೇವಿಯೂ ನೋಡಿದಳು—

ಚಿನ್ನದ ಎಳೆಯ ಹೂವುಗಳ ನಡುವೆ, ಅಲ್ಲೊಂದು ಇಲ್ಲೊಂದು ಥಳಥಳಿಸುವ ವಜ್ರ, ಪಚ್ಚೆಗಳು ನೇಯ್ದ ದಾಳಿಂಬೆಯ ಬಣ್ಣದ ದುಕೂಲವನ್ನುಟ್ಟು, ಅಂಥದೇ, ಹಾಗೇ

ಥಳಥಳಿಸುವ, ಮುತ್ತಿನ ಸಣ್ಣಗೊಂಚಲುಗಳ ಅಂಚನ್ನುಳ್ಳ ಪಚ್ಚೆಯ ವರ್ಣದ ಮೇಲುದವನ್ನು, ಎರಡು ಅಗಲವಾದ ಪದಕಗಳು ನೇಯ್ದ ಮೊಲೆಗಟ್ಟಿನ ಮೇಲೆ ಹೊದ್ದು, ಕಿವಿಯಲ್ಲಿ ಮುತ್ತು ರತ್ನಗಳ ಗೊಂಡೆಯನ್ನು ಹೊಳೆಸುತ್ತಾ, ವಕ್ಷದ ಮೇಲೆ ಧರಿಸಿದ ರತ್ನ ಹಾರದ ಭಾರಕ್ಕೆ ಬಾಗುತ್ತಾ, ಮಿರುಗಿಟ್ಟ ಮಿಸುನಿಯ ದಿವ್ಯಸುಂದರ ವಿಗ್ರಹದಂತೆ, ಮದನನ ವಿಜಯ ಪತಾಕೆಯಂತೆ ಕಾಣುತ್ತಿದ್ದಳು ಶಾನ್ತಲೆ

ಅಷ್ಟು ದೂರದಲ್ಲಿ ನಿಂತ ಶಾನ್ತಲೆಯನ್ನು ನೋಡಿ, ಏಚಲಾದೇವಿಗೆ ಎದೆಯಲ್ಲಿ ಉಕ್ಕಿ ಬಂದ ಆನಂದವನ್ನು ತಡೆಹಿಡಿಯಲಾಗದೆ, ಶಾನ್ತಲೆಯನ್ನು ಬರಸೆಳೆದು, ಬಿಗಿದಪ್ಪಿ ಚುಂಬಿಸಿ, ಆ ಹರ್ಷ ನಿರ್ಭರತೆಯಲ್ಲೇ ಬೀಗುತ್ತಾ—

'ಅಪ್ಪಾ! ನಾನೆಂದೂ ಇಂಥ ರೂಪವನ್ನು ನೋಡಿರಲಿಲ್ಲ. ಆ ಉಡಿಗೆ ತೊಡಿಗೆ ಅದೃಷ್ಟ ಮಾಡಿದ್ದವು ಮಾಚೀ—ನನಗೇನು ಕೊಟ್ಟು ಹಣ ತೀರಿಸಲಿ ಎಂದೆಯಲ್ಲಾ—ತೀರಿಸುವುದಿದ್ದರೆ, ಇವಳನ್ನೇ ಕೊಟ್ಟುಬಿಡು. ನಿನಗೆ ಇನ್ನು ಇಂಥ ಹತ್ತು ಮಕ್ಕಳಾಗಲೆಂದು ಹರಸುತ್ತೇನೆ.'

—ಎಂದಳು.

ಏಚಲಾದೇವಿಯ ಮಾತುಗಳನ್ನು ಕೇಳಿ ಮಾಚಿಕಬ್ಬೆಗೂ ಮೈಯಲ್ಲಿ ನೂರಾರು ಮಿಂಚುಗಳು ತುಳುಕಿದಂತಾಗಿ, ಎದೆಯಲ್ಲಿ ಉಕ್ಕಿಬಂದ ಭಾವವನ್ನು ತಡೆಹಿಡಿಯಲಾಗದೆ—

'ನಾನೂ ನಾನೂ. ಅದನ್ನೇ ಹೇಳಬೇಕೆಂದಿದ್ದೆ'

—ಎಂದು ತೊದಲಿದಳು.

ಅವರಿಬ್ಬರ ಮಾತನ್ನು ಕೇಳಿದ ಶಾನ್ತಲೆಯ ಮುಖ ಅರುಣರಾಗೋಜ್ವಲವಾಗಿ, ಕಣ್ಣುಗಳು ಕೋಟಿ ತಾರಾಕಾಂತಿಯಿಂದ ಹೊಳೆದು, ಮುಖ ಪುಷ್ಪ ಭಾರದಿಂದ ನೆಲದತ್ತ ಜಗ್ಗಿದ ಬಳ್ಳಿ ಕೊನೆಯಂತೆ ಬಾಗಿತು.

# ೧೫

ಚಕ್ರವರ್ತಿಗಳ ಪಾಳಯದಿಂದ ಹಿಂದಿರುಗಿದ ಎರೆಯಂಗದೇವನಿಗೆ, ಅಗತ್ಯವಾದುದಕ್ಕಿಂತಲೂ ಒಂದು ಗಳಿಗೆಯೂ ಹೆಚ್ಚಾಗಿ ಬಳ್ಳಿಗಾಮೆಯಲ್ಲಿರಲು ಮನಸಿರಲಿಲ್ಲ. ಅವನ ಪಾಲಿಗೆ ಬಳ್ಳಿಗಾಮೆಯ ನೀರು, ಗಾಳಿಯೂ ವಿಷವಾದಂತಿತ್ತು. ಆತನ ಅವಸರದ ಬಿರುಗಾಳಿಯ ವೇಗಕ್ಕೆ ಸಿಕ್ಕು ಅರ್ಧ ಜಾವದ ಕಾಲದಲ್ಲಿ ಪ್ರಯಾಣಕ್ಕೆ ಸಿದ್ಧತೆಗಳೆಲ್ಲವೂ ಆಗಿ ಮುಗಿದರೂ, ಅವರು ಮಧ್ಯಾಹ್ನದ ಮೊದಲು ಬಳ್ಳಿಗಾಮೆಯನ್ನು ಬಿಡಲು ಆಗಲಿಲ್ಲ.

ಮಾರಸಿಂಗಮಯ್ಯನ ವಿಶ್ವಾಸಕ್ಕೆ ಕಟ್ಟುಬಿದ್ದು, ಮಾಚಿಕಬ್ಬೆ ಅವಸರದಲ್ಲೇ ಅಣಿಮಾಡಿಸಿದ ಆತುರದ ಔತಣವನ್ನುಂಡು, ಒಂದು ಗಳಿಗೆ ವಿಶ್ರಮಿಸಿಕೊಂಡ ಶಾಸ್ತ್ರ ಮುಗಿಸಿ, ಒಬ್ಬರನ್ನೊಬ್ಬರು ಬೀಳ್ಕೊಟ್ಟು, ವೀಳಯವನ್ನು ತೆಗೆದುಕೊಂಡು ವಿನಯಾದಿತ್ಯನ ಪರಿವಾರದವರೆಲ್ಲರೂ ಸಿದ್ಧವಾದ ರಥಗಳನ್ನೇರಿದರು.

'ನೀನೂ ಒನ್ಮೆ ದೋರಸಮುದ್ರಕ್ಕೆ ಬಾ ಮಾಚಕ್ಕ.'

—ಎಂದು ಏಚಲಾದೇವಿ, ಮಾಚಿಕಬ್ಬೆಗೆ ಆಹ್ವಾನವಿತ್ತು ಅಲ್ಲಿಲ್ಲದ ಶಾನ್ತಲೆಯನ್ನು ಜ್ಞಾಪಿಸಿಕೊಂಡು—

'ಅವಳೆಲ್ಲಿ?'

—ಎಂದು ಕೇಳಿದಳು.

'ಹುಚ್ಚು ಹುಡುಗಿ? ಎಲ್ಲಿ ಅಳುತ್ತಾ ಮಲಗಿದೆಯೊ. ಅವಳೇ ಬರುತ್ತಾಳೆ—ರಥ ಹೊರಟ ಸದ್ದು ಕೇಳಿ.'

—ಎಂದಳು ಮಾಚಿಕಬ್ಬೆ.

'ಹೂ. ದೊಡ್ಡವರೆನಿಸಿಕೊಂಡವರಿಗೇ ಕಣ್ಣಿನ ಕೋಡಿ ಬೀಳುವ ಹಾಗಾಗಿದೆ ಇನ್ನು ಹುಡುಗರದೇನು. ಇವಳಿಗೂ ಬೆಳಗಿನಿಂದ ಅದೇ ಕೆಲಸವಾಯಿತು. ವಾಸನ್ತಿಕೆ. ನಿನ್ನದು ಅಳುವುದು ಮುಗಿದಿದ್ದರೆ, ನಮಸ್ಕಾರ ಮಾಡು, ಇನ್ನು ತಡಮಾಡಿದರೆ, ನಿಮ್ಮ ಅಪ್ಪಾಜಿ ಸಿಟ್ಟಾಗುತ್ತಾರೆ.'

—ಎಂದಳು ಏಚಲಾದೇವಿ.

ವಾಸನ್ತಿಕೆ—

'ಹೋಗುವ ಮೊದಲು ಶಾನ್ತಲೆಗೆ ಹೇಳಲೂ ಆಗಲಿಲ್ಲ.'

—ಎನ್ನುತ್ತಲೇ ಮಾಚಿಕಬ್ಬೆಗೆ ನಮಸ್ಕರಿಸಿ, ಹೋಗಿ ತನ್ನ ತಾಯಿಯೊಂದಿಗೆ ರಥದಲ್ಲಿ ಕುಳಿತಳು.

'ಶಾನ್ತಲೆಯನ್ನು ಮಾತನಾಡಿಸಲಾಗಲಿಲ್ಲ. ಮತ್ತೊಮ್ಮೆ ನೋಡಲಾಗಲಿಲ್ಲ.'

—ಎಂದು ಹೊಯ್ಸಳ ಪರಿವಾರದಲ್ಲಿ ಮತ್ತೊಂದು ಹೃದಯವೂ ಕಾತರಿಸುತ್ತಿತ್ತು-ವಿಷ್ಣುವರ್ಧನನದು. ರಥದಲ್ಲಿ ಕುಳಿತ ಅವನ ಕಣ್ಣುಗಳು, ಕಾಣದ ವೇಗವನ್ನು ಹುಡುಕಿಕೊಂಡು, ಆ ಎರಡು ಮನೆಗಳ ಬಾಗಿಲು ವಾತಾಯನಗಳನ್ನೆಲ್ಲವನ್ನು ಅಲೆಯುತ್ತಿತ್ತು.

ಹಾಗೆ ಅಲೆಯುತ್ತಾ ಮನೆಯ ಕೆಳಭಾಗವನ್ನು ಮುಗಿಸಿ, ಮೆಲುಪ್ಪರಿಗೆಯತ್ತ ಸುಳಿದಾಗ, ವಾತಾಯನದ ಕಂಬಿಗಳ ಹಿಂದೆ ನಿಂತು, ತನ್ನತ್ತಲೇ ಸಜಲನಯನಗಳಿಂದ ನೋಡುತ್ತಿರುವ ಶಾನ್ತಲೆಯ ನೈದಿಲೆಯಂತಾದ ತಾವರೆ ಮೊಗ ಕಂಡಿತು.

ಅಲ್ಲೇ ಕಣ್ಣು ಕೀಳಿಸಿದಂತೆ ನೋಡಿದ ವಿಷ್ಣುವರ್ಧನ.

ಆ ಕಣ್ಣುಗಳೂ ಅಷ್ಟೇ ತನ್ಮಯವಾಗಿದ್ದವು.

'ಅಷ್ಟು ನೋಡಬಾರದು ಬಿಟ್ಟಿ, ದೃಷ್ಟಿಯಾಗುತ್ತದೆ'

—ಎಂದು ಪಿಸುದನಿಯಲ್ಲಿ ಹೇಳಿ, ಬಲ್ಲಾಳ ಅವನ ಪಕ್ಕೆಯನ್ನು ತಿವಿದಾಗಲೇ ವಿಷ್ಣುವರ್ಧನನಿಗೆ ಇಹಲೋಕ ಪ್ರಜ್ಞೆ ಬಂದದ್ದು. ಮಾತು ಕೇಳಿ ಬೆಚ್ಚಿ ಬಿದ್ದು ತನ್ನನ್ನು ಯಾರು ಮಾತನಾಡಿಸಿದರೆಂಬುದೂ ಅರ್ಥವಾಗದೆ, ತಂದೆಯನ್ನು—

'ಏನು ಹೇಳಿದಿರಿ ಅಪ್ಪಾಜಿ?'

—ಎಂದು ಕೇಳಿದ.

'ನಾನೇನು ಹೇಳಿದೆ? ಕನಸು ಕಾಣುತ್ತಿದ್ದೆಯೇನು?'

—ಎಂದು ಚಕಿತನಾಗಿ ಕೇಳಿದ ಎರೆಯಂಗದೇವ.

ಅವರಿಬ್ಬರ ಮಾತನ್ನು ಕೇಳಿ ಬಲ್ಲಾಳ, ನಗುವನ್ನು ತಡೆ ಹಿಡಿಯಲಾಗದೆ ಗಟ್ಟಿಯಾಗಿ ನಕ್ಕುಬಿಟ್ಟ. ಆ ನಗೆಯನ್ನು ಕೇಳಿ ವಿಷ್ಣುವರ್ಧನನ ಮುಖ ಕೆಂಪಾಯಿತು.

ಹೊಯ್ಸಳರ ರಥಗಳು, ಬಳ್ಳಿಗಾಮೆಯ ಹೆಬ್ಬಾಗಿಲನ್ನು ದಾಟಿ, ಅಷ್ಟು ದೂರ ಬಂದಿದ್ದರೂ, 'ಅಷ್ಟುದೂರ ಬರುತ್ತೇನೆ' ಎಂದು ತಮ್ಮ ಕುದುರೆಯ ಮೇಲೆ ಕುಳಿತು ಅವರನ್ನು ಹಿಂಬಾಲಿಸಿದ ಮಾರಸಿಂಗಮಯ್ಯನಿಗೆ, ಏಕೋ ಆವರನ್ನು ಬಿಟ್ಟು ಹಿಂದಿರುಗಲೇ ಮನಸ್ಸಾಗದಂತೆ, ಹಾಗೇ ಹಿಂಬಾಲಿಸಿದ.

ಆತ ತಮ್ಮ ಜೊತೆಗೆ ಬಹಳ ದೂರ ಬಂದನೆಂದು ಅರ್ಥಮಾಡಿಕೊಂಡ ಎರೆಯಂಗದೇವನೇ, ರಥವನ್ನು ನಿಲ್ಲಿಸಿ—

'ನೀವಿನ್ನು ಹಿಂದಿರುಗಿ ಹೆಗ್ಗಡೆಗಳೇ ಇನ್ನೆಷ್ಟುದೂರ ಬರುತ್ತೀರಿ?'

—ಎಂದು ಮಾರಸಿಂಗಮಯ್ಯನಿಗೆ, ಬಂದ ದೂರವನ್ನು ಜ್ಞಾಪಿಸಿದ.

'ಹೂ.'

—ಎಂದು ನಿಟ್ಟುಸಿರಿಟ್ಟು ಮಾರಸಿಂಗಮಯ್ಯ ಬಂದ ದಾರಿಯತ್ತ ತಿರುಗಿನೋಡಿದ.

ದೂರದಲ್ಲಿ-ಬಳ್ಳಿಗಾಮೆಯ ದೇವಮಂದಿರದ ಗೋಪುರಗಳು, ಆ ಗೋಪುರಗಳು, ರಾಜಮಂದಿರಗಳ ಮೇಲಿನ, ಹೊನ್ನು ಹಿತ್ತಾಳೆಯ ಕಲಶಗಳು ಮಧ್ಯಾಹ್ನದ ಬಿಸಿಲಿನಲ್ಲಿ ಲಕಲಕಿಸುತ್ತಿದ್ದವು. ನೀಲ ಬಾನಿನಲ್ಲಿ, ಹೆಬ್ಬಾಗಿಲ ಗೋಪುರದ ಮೇಲೆ ನಿಲ್ಲಿಸಿದ ಚಾಲುಕ್ಯರ ಧ್ವಜಪಟ, ಕಾಲುಕಟ್ಟಿದ ಹಕ್ಕಿಯಂತೆ ಗಾಳಿಯಲ್ಲಿ ಆಟವಾಡುತ್ತಿತ್ತು.

'ಅಂತೂ ಈ ಬಾರಿ, ಬಹುದಿನ ನಿಮ್ಮನ್ನು ಇಟ್ಟುಕೊಂಡು ಆದರಿಸುವ ಭಾಗ್ಯ ಬಳ್ಳಿಗಾಮೆಗಿರಲಿಲ್ಲ, ಮತ್ತೊಮ್ಮೆ ಬರಬೇಕು.'

—ಕುಗ್ಗಿದ ಧ್ವನಿಯಲ್ಲಿ ಹೇಳಿದ ಮಾರಸಿಂಗಮಯ್ಯ.

ಆ ಮಾತಿಗೆ ಎರೆಯಂಗದೇವ ಏನೂ ಉತ್ತರ ಕೊಡಲಾಗದೆ, ಸುಮ್ಮನೆ ತಲೆ ತಗ್ಗಿಸಿದ. ಏನೋ ಒಂದು ಬಗೆಯ ಅಸಹಜ ಮೌನ ವ್ಯಾಪಿಸಿ, ಎಲ್ಲರ ಹೃದಯವನ್ನು ಹಿಂಡಿತು.

'ಬರುತ್ತೇವೆ—ಹೆಗ್ಗಡೆಗಳೇ—ಮತ್ತೆ ಬಂದೇ ಬರುತ್ತೇವೆ. ಅತ್ತು ಹಿಂದಿರುಗುವುದಕ್ಕಲ್ಲ—ಗೆದ್ದು ಆಳುವುದಕ್ಕೆ'

—ಆ ಮೌನವನ್ನು ಮುರಿದು ಕರ್ಕಶವಾದ ಧ್ವನಿಯಲ್ಲಿ ಹೇಳಿದ ವಿಷ್ಣುವರ್ಧನ.

ಆ ಮಾತನ್ನು ಕೇಳಿ, ಅಲ್ಲಿ ನಿಂತವರೆಲ್ಲರಿಗೂ, ಇದ್ದಕ್ಕಿದ್ದ ಹಾಗೇ, ಸಾಲು ಸಾಲಾಗಿ ಸಿಡಿಲು ಮೊಳಗಿದಂತಾಯಿತು. ಮಧ್ಯಾಹ್ನದ ಬಿಸಿಲು ಮಿಂಚಿನ ಗೊಂಚಲಾಗಿ ಹೊಳೆದಂತಾಯಿತು.

'ಛಿ! ಬಿಟ್ಟಿಯಣ್ಣಾ—ಅಂಥ ಮಾತಾಡಬಾರದು'

—ಎಂದ ಒಂದುಗಳಿಗೆ ಸುಮ್ಮನಿದ್ದ ಎರೆಯಂಗದೇವ.

ಆದರೆ ವಿಷ್ಣುವರ್ಧನನಿಗೆ ಆ ಮಾತುಗಳು ಕೇಳಿಸಲಿಲ್ಲ. ಅವನ ಕಣ್ಣುಗಳು ಬಳ್ಳಿಗಾಮೆಯನ್ನು ನುಂಗುವಂತೆ ನೋಡುತ್ತಿದ್ದವು.

'ಆಯಿತು ನಾನಿನ್ನು ಬರುತ್ತೇನೆ.'

—ಎಂದು ಎಲ್ಲರಿಗೂ ನಮಸ್ಕರಿಸಿ, ನಿಟ್ಟುಸಿರಿಟ್ಟು ಮತ್ತೆ ಕುದುರೆಯನ್ನೇರಿ ಮಾರಸಿಂಗಮಯ್ಯ ಬಳ್ಳಿಗಾಮೆಯತ್ತ ನಡೆದ. ವಿಷ್ಣುವರ್ಧನನ ಕಣ್ಣುಗಳು ಓಡುವ ಕುದುರೆಯ ಖುರಪುಟದಿಂದೆದ್ದ ಧೂಳಿನ ಮೋಡವನ್ನೇ ನೋಡುತ್ತಿತ್ತು.

ಅವನ ಹೃದಯ ಮೊರೆಯುತ್ತಿತ್ತು—

'ಬರುತ್ತೇನೆ. ಮತ್ತೆ ಬಂದೇಬರುತ್ತೇನೆ.'

ಹೃದಯ ಮೊರೆಯುತ್ತಿತ್ತು—

ಒಮ್ಮೆ ಭೇರೀತಾಡನದಂತೆ; ಮತ್ತೊಮ್ಮೆ ವೀಣಾವಾದವದಂತೆ.

# <u>ನಮ್ಮ ಪ್ರಕಟನೆಗಳು</u>

ಹಂಸಗೀತೆ—ತ. ರಾ. ಸು.

ಗೆದ್ದವರು ಯಾರು?—ದೇವುಡು.

ಆಕಾಶದೀಪ— ಅಡಿಗ.

ತೊಟ್ಟಿಲು ತೂಗಿತು— ತ. ರಾ. ಸು.

ಚಂದನದ ಗೊಂಬೆ—ತ. ರಾ. ಸು.

ಚಕ್ರತೀರ್ಥ—ತ. ರಾ. ಸು.

ಜಯಂತಿ—ಎಸ್. ಅನಂತನಾರಾಯಣ.

ಮೊದಲ ಹೆಜ್ಜೆ—ತ್ರಿವೇಣಿ.

ಸಿಡಿಲ ಮೊಗ್ಗು—ತ. ರಾ. ಸು.

**<u>ಬರಲಿರುವ ಕೃತಿಗಳು.</u>**

ಕಾತ್ಯಾಯಿನಿ—ನಿರಂಜನ

ಕೆಂಪು ಅಕ್ಷರ—'ಬಾಲು'

(Scarlet Letterನ ಭಾಷಾಂತರ)

ಹೊಯ್ಸಳೇಶ್ವರ—ತ. ರಾ. ಸು.

ಮರೀಚಿಕೆ—ವಿಶ್ವನಾಥ ಮಿರ್ಲೆ

?—ರಾ. ವೆಂ. ಶ್ರೀ.

ಚಂದ್ರಾಯಥ—-ತ. ರಾ. ಸು.

ಹೆಣ್ಣು ಕೊಟ್ಟರು—ಎಸ್. ಅನಂತನಾರಾಯಣ.

ಹಂಸಗೀತೆ—ತ. ರಾ. ಸು. (ಹಿಂದಿಯಲ್ಲಿ)

ಮಸಣದ ಹೂವೂ—ತ. ರಾ. ಸು. (ಇಂಗ್ಲೀಷಿನಲ್ಲಿ)

ನವ್ಯ ಸಾಹಿತ್ಯ ಪ್ರಕಾಶನ : ಶ್ರೀ ಸೀತಾರಾಘವ ಪ್ರೆಸ್ : ಮೈಸೂರು.